ನೆಹರೂ ಬಾಲ ಪುಸ್ತಕಾಲಯ

# ಸ್ವಾಮಿ ಮತ್ತು ಅವನ ಸ್ನೇಹಿತರು

**ಆರ್. ಕೆ. ನಾರಾಯಣ್**

ಅನುವಾದ

**ಎಚ್. ವೈ. ಶಾರದಾ ಪ್ರಸಾದ್**

ಚಿತ್ರಗಳು

**ಮನೋಭಿರಾಮ್ ಚಕ್ರವರ್ತಿ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪ್ರಸ್ತಾವನೆ

ಇಂದಿನ ಭಾರತೀಯ ಸಾಹಿತ್ಯದಲ್ಲಿ ಆರ್.ಕೆ. ನಾರಾಯಣ್‌ರ ಹೆಸರು ಎದ್ದು ನಿಲ್ಲುವಂಥದು. ಅರವತ್ತು ವರ್ಷದಿಂದ ಅವರು ಬರೆಯುತ್ತಿರುವ ಕಾದಂಬರಿಗಳಲ್ಲಿ, ಕತೆಗಳಲ್ಲಿ ನಮ್ಮ ದೇಶದ ಸಾಮಾನ್ಯ ಜನರ ಮತ್ತು ಅನುದಿನದ ಜೀವನದ ಚಿತ್ರಣ ಎಷ್ಟು ನೈಜವಾಗಿ ಬಂದಿದೆಯೆಂದರೆ ಅವರು ಪರಭಾಷೆಯಲ್ಲಿ ಬರೆಯುತ್ತಿದ್ದಾರೆ ಎಂದು ಅನಿಸುವುದೇ ಇಲ್ಲ. ಅವರು ಕಲ್ಪಿಸಿದ ಮಾಲ್ಗುಡಿ ನಕ್ಷೆಯ ಮೇಲಿರುವ ಊರುಗಳಿಗಿಂತ ಸತ್ಯವಾದ್ದು, ಸಜೀವವಾದ್ದು.

"ಸ್ವಾಮಿ ಎಂಡ್ ಫ್ರೆಂಡ್ಸ್" ಎಂಬುದು ಅವರ ಮೊದಮೊದಲ ಪುಸ್ತಕಗಳಲ್ಲಿ ಒಂದು. ಅದು ಪ್ರಕಟವಾದೊಡನೆಯೇ ಕ್ಲಾಸಿಕ್‌ನ ಪಟ್ಟ ಪಡೆಯಿತು. ಅದು ಹೊರಬಿದ್ದ ಹೊಸದರಲ್ಲಿಯೇ, ಅದನ್ನು ಕನ್ನಡಕ್ಕೆ ಹಾಕುವ ಸುಯೋಗ ನನಗೆ ಸಿಕ್ಕಿತು. ಮೈಸೂರಲ್ಲಿ ಅವರ ಪಕ್ಕದ ಮನೆಯಲ್ಲಿಯೇ ವಾಸಿಸುತ್ತಿದ್ದ ಮತ್ತು ಅವರ ತಮ್ಮಂದಿರ ಸಹಪಾಠಿಯಾದ ಕಿರಿಯನಿಗೆ ಪ್ರೋತ್ಸಾಹ ಕೊಡೋಣ ಎಂದು ಆ ಅನುವಾದ ಕೈಗೊಳ್ಳುವ ಅವಕಾಶ ಅವರು ನನಗೆ ಕೊಟ್ಟಿರಬೇಕು. ಮಾಲ್ಗುಡಿ ತಮಿಳು ಸೀಮೆಯಲ್ಲಿತ್ತು ಎನಿಸಿದರೂ ನಾರಾಯಣ್‌ರ ಕಾದಂಬರಿಗಳಲ್ಲಿ ಚಿತ್ರಿಸಿರುವ ಬದುಕು ಬಹುಮಟ್ಟಿಗೆ ಹಳೇ ಮೈಸೂರಿನ ಬದುಕು. ಸ್ವಾಮಿ ಆಡುತ್ತಿದ್ದ ಮಾತು, ಆಟ ನನ್ನ ಸುತ್ತಿನ ಮಾತು, ಆಟ ಎಂದೆನಿಸಿತು ನನಗೆ. ಖುಷಿಯಾಗಿ ಅನುವಾದಿಸಿದೆ. ಶ್ರಮವೆನಿಸಲಿಲ್ಲ. ತಾಯಿನುಡಿಯಿಂದ ಇಂಗ್ಲಿಷಿಗೆ ಹೋಗಿದ್ದುದನ್ನು ಮತ್ತೆ ತಾಯಿನುಡಿಗೆ ಒಪ್ಪಿಸುತ್ತಿದ್ದೇನೆ ಎಂಬ ಭಾವನೆ ಬಂತು. ಅನುವಾದ ಅನೇಕರ ಮೆಚ್ಚಿಗೆ ಪಡೆಯಿತು, ಪುನರ್ಮುದ್ರಿತವಾಯಿತು. ನಲವತ್ತೈದು ವರ್ಷದ ನಂತರ ನ್ಯಾಷನಲ್ ಬುಕ್ ಟ್ರಸ್ಟಿನವರು ಮತ್ತೆ ಅದನ್ನು ಪ್ರಕಟಿಸುವ ಇಚ್ಛೆ ತೋರಿದಾಗ ನಾರಾಯಣ್‌ರು ಅಸ್ತು ಅಂದರು. ಆದರೆ ಅವರ ಹತ್ತಿರವಾಗಲಿ ನನ್ನ ಹತ್ತಿರವಾಗಲಿ ಕನ್ನಡದ "ಸ್ವಾಮಿ"ಯ ಪ್ರತಿ ಇರಲಿಲ್ಲ. ಯಾವ ಪುಸ್ತಕಾಲಯದಲ್ಲೂ ಸಿಗಲಿಲ್ಲ. ಮಿತ್ರ ಪ್ರೊಫೆಸರ್ ಎಲ್. ಎಸ್. ಶೇಷಗಿರಿರಾಯರು ಪಟ್ಟ

ಶ್ರಮದಿಂದ ಬೆಂಗಳೂರಿನ ಶ್ರೀ ಹರಿಹರಪ್ರಿಯರ ಹತ್ತಿರ ಒಂದು ಪ್ರತಿ ಇರುವುದಾಗಿ ತಿಳಿದು ಬಂತು. ಶ್ರೀ ಹರಿಹರಪ್ರಿಯರೂ ದೊಡ್ಡ ಮನಸ್ಸು ಮಾಡಿ ತಮ್ಮ ಪ್ರತಿ ನಮಗೆ ಕೊಟ್ಟರು. ಕೊನೆಯ ಎರಡು ಪುಟಗಳು ಅವರ ಪ್ರತಿಯಲ್ಲಿ ಇರಲಿಲ್ಲವಾದ್ದರಿಂದ ಪುನಃ ಕನ್ನಡಿಸಿದ್ದೇನೆ. ಮಿಕ್ಕೆಲ್ಲ ಮೊದಲ ಮುದ್ರಣದಲ್ಲಿದ್ದಂತೆಯೇ ಇದೆ. ಚಿಗುರೆಲೆಯ ಹುಮ್ಮಸ್ಸನ್ನು ತಿದ್ದುವ ಹವಣಿಕೆಗೆ ಹೋಗಿಲ್ಲ.

ಲೂಯಿ ಕೆರಾಲ್‌ನ ಆಲಿಸ್ ಇದ್ದಂತೆ, ಮಾರ್ಕ್ ಟ್ವೇಯ್ನ್‌ನ ಟಾಮ್ ಸಾಯರ್ ಇದ್ದಂತೆ, ಕಿಪ್ಲಿಂಗ್‌ನ ಕಿಮ್ ಇದ್ದಂತೆ ನಾರಾಯಣ್‌ರ ಸ್ವಾಮಿಯೂ ಒಬ್ಬ ಚಿರಂಜೀವಿ. ಪ್ರತಿ ತಲೆಮಾರಿನ ಮಕ್ಕಳಿಗೂ ಒಡನಾಡಿ. "ಸ್ವಾಮಿ"ಯನ್ನು ಮತ್ತೆ ಕನ್ನಡ ಮಕ್ಕಳ ಕೈಯ್ಯಲ್ಲಿಡಲು ಸಾಧ್ಯಮಾಡಿಕೊಟ್ಟಿರುವ ಎನ್.ಬಿ.ಟಿ.ಗೂ ಶ್ರೀ ಹರಿಹರಪ್ರಿಯರಿಗೂ ನಾನು ಋಣಿ.

ಎಚ್. ವೈ. ಶಾರದಾ ಪ್ರಸಾದ್

ಹೊಸ ದೆಹಲಿ,

ಡಿಸೆಂಬರ್ 1992

# ಅನುಕ್ರಮಣಿಕೆ

# ಸೋಮವಾರ ಬೆಳಿಗ್ಗೆ

ಸೋಮವಾರ ಬೆಳಿಗ್ಗೆ ಹಾಸಿಗೆಯಿಂದೆದ್ದು ಕಣ್ಣು ಬಿಡುವುದಕ್ಕೆ ಕೂಡ ಸ್ವಾಮಿನಾಥನಿಗೆ ಇಷ್ಟವಿಲ್ಲ. ವಾರದಲ್ಲೆಲ್ಲ ಅವನಿಗೆ ಸೋಮವಾರ ಅಂದರೆ ಆಗದು. ಶನಿವಾರ ಭಾನುವಾರಗಳ ಸೊಗಸಾದ ಸ್ವಾತಂತ್ರ್ಯವಾದ ಮೇಲೆ ಇದ್ದಕ್ಕಿದ್ದಂತೆ ಸೋಮವಾರದ ಶಿಸ್ತಿಗೆ ತಲೆಬಾಗುವುದು ಸುಲಭವೆ? ಸ್ಕೂಲನ್ನು ನೆನಸಿಕೊಂಡ ಮಾತ್ರವೇ ಅವನ ಮೈಯೆಲ್ಲ ನಡುಗಿತು. ಮಾಸಲು ಹಳದಿ ಬಣ್ಣದ ಸ್ಕೂಲುಕಟ್ಟಡ; ಅವನ ಕ್ಲಾಸ್ ಟೀಚರು ಆ ಕೆಂಡಗಣ್ಣ ವೇದನಾಯಗಂ ; ಆಮೇಲೆ ಅವರ ಹೆಡ್‌ಮೇಷ್ಟ್ರು, ಅವರ ಉದ್ದನೆ ಛಡಿ ಬೆತ್ತ ....

ಸ್ವಾಮಿನಾಥನ್ ಎಂಟು ಗಂಟೆಯ ವೇಳೆಗಾಗಲೆ ತನ್ನ ಕೊಟಡಿ ಸೇರಿ ಮೇಜಿನ ಮುಂದೆ ಕುಳಿತುಬಿಟ್ಟಿದ್ದ. ಆದರೆ ತಂದೆಯ ಆಫೀಸ್ ರೂಂನ ಒಂದು ಮೂಲೆಯೆ ಅವನ ಕೊಟಡಿ. ಅವನಿಗೊಂದು ಮೇಜು. ಅದರ ಮೇಲೆ ಅವನ ಸರ್ವಸ್ವವೂ ರಾಶಿರಾಶಿಯಾಗಿ ಬಿದ್ದಿತ್ತು. ಅವನ ಕೋಟು, ಟೋಪಿ, ಸ್ಲೇಟು, ಶಾಯಿಕುಡಿಕೆ, ಪುಸ್ತಕಗಳು ಎಲ್ಲವೂ ಅಲ್ಲೆ. ಸ್ಟೂಲಿನ ಮೇಲೆ ಕುಳಿತು ಆ ದಿನ ಏನೇನು ಪಾಠವಿತ್ತೊ ನೆನಪು ಮಾಡಿಕೊಳ್ಳಲು ಕಣ್ಣು ಮುಚ್ಚಿ ಆಲೋಚಿಸಿದ. ಮೊದಲು ಲೆಕ್ಕ - ಲಾಭನಷ್ಟದಲ್ಲಿ ಐದು ಪ್ರಶ್ನೆ ; ಆಮೇಲೆ ಇಂಗ್ಲೀಷು - ಎಂಟನೆಯ ಪಾಠದಲ್ಲಿ ಒಂದು ಪುಟ ಕಾಪಿ ಮಾಡಿ, ಕಷ್ಟವಾದ ಪದಗಳಿಗೆಲ್ಲ ಡಿಕ್ಷನರಿ ಅರ್ಥ ಬರೆಯಬೇಕು ; ಆಮೇಲೆ ಭೂಗೋಳ.

ಇದಿಷ್ಟೂ ಮಾಡಿ, ಸ್ಕೂಲಿಗೆ ಸಿದ್ಧವಾಗುವುದಕ್ಕೆ ಇನ್ನೆರಡೇ ಗಂಟೆ.

## ಎರಡು

ಉದ್ದನೆಯ ಕಿಟಕಿ ಕಡೆಗೆ ಬೆನ್ನು ಮಾಡಿಕೊಂಡು ಕೆಂಡಗಣ್ಣ ವೇದ ನಾಯಗಂ ತರಗತಿಯ ಅಗ್ರಾಸನದಲ್ಲಿ ಆರಾಮವಾಗಿ ಮಂಡಿಸಿದ್ದಾರೆ. ಕಿಟಕಿಯ ಸಲಾಕೆಗಳ ಮೂಲಕ ನೋಡಿದರೆ ಡ್ರಿಲ್ ಮೈದಾನದ ಒಂದು ಭಾಗ, ಶಾಲೆಯ ಶಿಶುವಿಹಾರ ವಿಭಾಗದ ವರಾಂಡದ ಒಂದು ಮೂಲೆ ಕಾಣುತ್ತವೆ. ಎಡಗಡೆಗೆ ಭಾರಿ ಕಿಟಕಿಗಳು. ಅದರಾಚೆ ವಿಶಾಲವಾದ ಬಯಲು. ಬಯಲಿನ ಆ ಕಡೆಯ ಕೊನೆಯಲ್ಲೆ ರೈಲ್ವೆಕಂಬಿ.

ಶಿಶುವಿಹಾರದ ಮಕ್ಕಳು ಎಡವಿ ಮುಗ್ಗರಿಸಿ ಒಬ್ಬರ ಮೇಲೊಬ್ಬರು ಬೀಳುವುದು, ಹನ್ನೆರಡೂವರೆಯ ಮೆಯಿಲ್ ಗಾಡಿ ಸರಯೂ ನದಿಯ ಸೇತುವೆಯ ಮೇಲೆ ಗಡಗಡ

ಧನ್‌ಧನ್ ಎಂದು ಸದ್ದು ಮಾಡಿಕೊಂಡು ಹೋಗುವುದು - ಇದೆಲ್ಲ ಎಡಗಡೆಯ ಕಿಟಕಿಯ ಮೂಲಕ ಕಾಣುವುದು. ಇವು ಕಾಣದೆ ಹೋಗಿದ್ದರೆ ಸ್ವಾಮಿನಾಥನಿಗೆ ತರಗತಿಯಲ್ಲಿ ಕುಳಿತಿರುವುದು ಸಾಧ್ಯವೇ ಆಗುತ್ತಿರಲಿಲ್ಲ.

ಮೊದಲನೆಯ ಗಂಟೆ ಹಾಗೂ ಹೀಗೂ ಮುಗಿಯಿತು. ಎರಡನೆಯ ಪಿರಿಯಡ್ಡಿನಲ್ಲಿ ಲೆಕ್ಕ. ವೇದನಾಯಗಂ ಹೊರಗೆ ಹೋಗಿ ಎರಡುಮೂರು ನಿಮಿಷಗಳಲ್ಲೇ ಗಣಿತದ ಉಪಾಧ್ಯಾಯನ ಪಾತ್ರದಲ್ಲಿ ಹಿಂದಿರುಗಿದರು. ಒಂದೇ ಸಮನೆ ಗೊಗ್ಗರು ಗಂಟಲಲ್ಲಿ ಏನೋ ಒರಲಿಕೊಂಡು ಹೋಗುತ್ತಿದ್ದರು. ಸ್ವಾಮಿನಾಥನಿಗೆ ವಿಪರೀತ ಬೇಜಾರಾಯಿತು. ಉಪಾಧ್ಯಾಯನ ದನಿಯನ್ನು ಸಹಿಸುವುದಕ್ಕಾಗದೆ ಹೋಯಿತು. ನಿದ್ದೆ ಬರುವಂತಾಯಿತು.

"ಮನೆ ಲೆಕ್ಕ ಎಲ್ಲಿ?" ಸ್ವಾಮಿನಾಥನ್ ಬೆಂಚಿನಿಂದ ನೆಗೆದು ಉಪಾಧ್ಯಾಯರ ಹತ್ತಿರ ಬಂದು ತನ್ನ ಪುಸ್ತಕವನ್ನು ಮೇಜಿನ ಮೇಲಿರಿಸಿದ. ಮೇಷ್ಟರು ಲೆಕ್ಕ ನೋಡುತ್ತಿದ್ದಾರೆ ; ಇವನು ಮೇಷ್ಟರ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದಾನೆ. ಅಯ್ಯೋ, ಹತ್ತಿರದಿಂದ ನೋಡಿದರೆ ಮೇಷ್ಟರ ಮುಖದಲ್ಲಿ ರೋಷವೇ ಕಾಣುವದಿಲ್ಲ! ಥೂ, ಅವರ ಕಣ್ಣು ಒಂದಕ್ಕೊಂದು ತೀರ ಹತ್ತಿರ. ಬೆಂಚಿನಿಂದ ಕಾಣಿಸುವುದಕ್ಕಿಂತ ಅವರ ಗಡ್ಡದ ಮೇಲೆ ಹೆಚ್ಚು ಕೂದಲಿವೆ. ಒಟ್ಟಿನಲ್ಲಿ ಮೇಷ್ಟರು ತೀರ ವಿಕಾರ.

ಸ್ವಾಮಿನಾಥನ ಧ್ಯಾನಕ್ಕೆ ಭಂಗ ಬಂತು. ಎಡತೋಳಿನಲ್ಲಿ ತುಂಬ ನೋವಾಗುತ್ತಿದೆ. ಮೇಷ್ಟರು ಒಂದು ಕೈಯಿಂದ ಸ್ವಾಮಿನಾಥನ ತೋಳನ್ನು ಬಲವಾಗಿ ನುಲಿಯುತ್ತಿದ್ದಾರೆ, ಇನ್ನೊಂದರಿಂದ ಅವನು ಮಾಡಿದ ಲೆಕ್ಕವನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಹೊಡೆದು ಹಾಕುತ್ತಿದ್ದಾರೆ. ಪುಟದ ಅಡಿಯಲ್ಲಿ 'ಏನೇನೂ ಪ್ರಯೋಜನವಿಲ್ಲ' ಎಂದು ಗೀಚಿ, ಪುಸ್ತಕವನ್ನು ಸುರುಳಿ ಸುತ್ತಿ ಸ್ವಾಮಿನಾಥನ ಮುಖದ ಮೇಲೆಸೆದು ಅವನನ್ನು ಬೆಂಚಿನ ಕಡೆ ಅಲ್ಲಿಯೇ ಬಿಟ್ಟರು ಮೇಷ್ಟರು.

ಮುಂದಿನ ಪಿರಿಯಡ್ಡಿನಲ್ಲಿ ಚರಿತ್ರೆ. ಚರಿತ್ರೆ ಬಂತೆಂದರೆ ಸಾಕು, ಹುಡುಗರಿಗೆ ಬಲು ಆಸೆ. ಚರಿತ್ರೆ ಮೇಷ್ಟರ ಹೆಸರು ಡಿ. ಪಿಳ್ಳೆ. ಬಹಳ ಒಳ್ಳೆಯವರು, ತುಂಬ ಕರುಣೆ, ಒಳ್ಳೆ ಹಾಸ್ಯಗಾರರು ಎಂಬುದಾಗಿ ಹೆಸರು ಸಂಪಾದಿಸಿದ್ದರು. ಎಂದೂ ಯಾವ ವಿದ್ಯಾರ್ಥಿಯನ್ನೂ ಬೈದಿಲ್ಲವಂತೆ. ಯಾರ ಮೇಲೆಯೂ ಹುಬ್ಬು ಗಂಟು ಹಾಕಿಕೊಂಡಿದ್ದಿಲ್ಲವಂತೆ. ಆತ ಪಾಠ ಹೇಳುವ ಕ್ರಮವೇ ಬೇರೆ. ಯಾವ ಶಿಕ್ಷಣ ವಿಧಾನವನ್ನೂ ಅನುಸರಿಸುತ್ತಿರಲಿಲ್ಲ. ವಾಸ್ಕೋಡಿಗಾಮ, ಕ್ಲೈವ್, ಹೇಸ್ಟಿಂಗ್ಸ್ ಇವರ ಜೀವನದಿಂದ ನೂರಾರು ಕತೆಗಳನ್ನು ಹುಡುಗರಿಗೆ ಹೇಳುವರು. ಚರಿತ್ರೆಯಲ್ಲಿ ಬರುವ ಅನೇಕ ಕದನಗಳನ್ನು ಆತ ವಿವರಿಸಿದನೆಂದರೆ, ಮದ್ದು ಗುಂಡುಗಳ ಹಾರಾಟ, ಸಾಯುವವರ ಚೀರಾಟ ಎಲ್ಲವೂ ಕೇಳಿಸುವುದು. ಹೆಡ್ಮೇಷ್ಟ್ರು ಆಗಾಗ, ಸ್ಕೂಲಿನ ಹಜಾರದಲ್ಲಿ ಹೆಜ್ಜೆ ಸದ್ದು ಮಾಡದೆ ಬೆಕ್ಕಿನಂತೆ ನಿಶ್ಯಬ್ದವಾಗಿ ತಿರುಗಾಡಿ, ಪ್ರತಿ ತರಗತಿಯ ಬಾಗಿಲ ಹತ್ತಿರವೂ ಕಾಣದಂತೆ ನಿಂತು ಪಾಠವನ್ನು ಕೇಳುವ ಪದ್ಧತಿ. ಆದರೆ ಈ ಪಿಳ್ಳೆಯನ್ನು ತಿದ್ದುವುದು ಮಾತ್ರ ಸಾಧ್ಯವಿಲ್ಲ

ಎಂದು ಆ ಪ್ರಯತ್ನವನ್ನೇ ಅವರು ಬಿಟ್ಟು ಬಿಟ್ಟಿದ್ದರು.

ಸುವಾರ್ತೆಯ ಪಿರೀಡೇ ಆ ದಿನ ಕಡೆಯದು. ಅಂಥ ಬೇಜಾರೇನೂ ಆಗುತ್ತಿರಲಿಲ್ಲ. ಮೈ ಜುಮ್ಮೆನ್ನಿಸುವಂಥ ದೃಶ್ಯಗಳು ಎಷ್ಟೋ ವೇಳೆ ಕಣ್ಣ ಮುಂದೆ ನಿಲ್ಲುತ್ತಿರಲಿಲ್ಲವೆ? - ಕೆಂಪು ಸಮುದ್ರ ಇಬ್ಭಾಗವಾಗಿ ಸೀಳಿ ಯೆಹೂದ್ಯರು ಹಾದುಹೋಗಲು ಮಾರ್ಗ ಕೊಡುವುದು, ಸ್ಯಾಮ್‌ಸನ್ನನ ಸಾಹಸಗಳು, ಯೇಸುವು ಗೋರಿಯಿಂದ ಮೇಲೇಳುವುದು, ಇವೆಲ್ಲ ಯಾರಿಗೆ ತಾನೆ ಇಷ್ಟವಾಗುವುದಿಲ್ಲ? ಆದರೆ ಈ ತರಗತಿಯಲ್ಲಿ ಒಂದೇ ಒಂದು ಕೊರತೆ - ಸುವಾರ್ತೆ ಮೇಷ್ಟರಾದ ಎಬನೀಜರ್‌ಗೆ ಬೇರೆ ಮತಗಳೆಂದರೆ ಮೈಯೆಲ್ಲ ಬೆಂಕಿ.

"ಅಯ್ಯೋ ಮುಠ್ಠಾಳರೇ, ಕೊಳಕು ತುಂಬಿದ, ಜೀವವಿಲ್ಲದ ಮರದ ಗೊಂಬೆಗಳನ್ನೂ ಕಲ್ಲಿನ ವಿಗ್ರಹಗಳನ್ನೂ ಏಕೆ ಪೂಜಿಸುತ್ತೀರಯ್ಯ? ಅವು ಮಾತನಾಡಬಲ್ಲವೇ? ಇಲ್ಲ. ಅವು ನೋಡಬಲ್ಲವೇ? ಇಲ್ಲ. ಅವು ನಿಮ್ಮನ್ನು ಹರಸಬಲ್ಲವೇ? ಇಲ್ಲ. ಅವು ನಿಮ್ಮನ್ನು ಸ್ವರ್ಗಕ್ಕೆ ಕೊಂಡೊಯ್ಯಬಲ್ಲವೇ? ಇಲ್ಲ. ಏಕೆ? ಏಕೆಂದರೆ ಅವಕ್ಕೆ ಜೀವವಿಲ್ಲ. ಘಜನೀ ಮಹಮದನು ಬಂದು ವಿಗ್ರಹಗಳನ್ನೆಲ್ಲ ಪುಡಿಪುಡಿ ಮಾಡಿ, ಅವನ್ನೆಲ್ಲ ಚೆನ್ನಾಗಿ ತುಳಿದು ಆ ಕಲ್ಲನ್ನೇ ತನ್ನ ಕಕ್ಕಸಿನ ಮೆಟ್ಟಿಲಾಗಿ ಉಪಯೋಗಿಸಿಕೊಂಡನಲ್ಲಾ, ಆಗ ನಿಮ್ಮ ದೇವರೇನು ಮಾಡಿದ? ನಿಮ್ಮ ವಿಗ್ರಹಗಳಿಗೂ ಗೊಂಬೆಗಳಿಗೂ ಪ್ರಾಣವಿದ್ದುದೇ ಆದರೆ ಮಹಮ್ಮದನ ದಂಡಯಾತ್ರೆಗಳನ್ನೇಕೆ ತಡೆಯಲಿಲ್ಲ? ಅವನನ್ನೇಕೆ ಸದೆಬಡೆಯಲಿಲ್ಲ?" ಎನ್ನುವನು ಎಬನೀಜರ್.

"ಇತ್ತಲಾದರೋ ನಮ್ಮ ಯೇಸುಸ್ವಾಮಿಯನ್ನು ನೋಡಿರಿ, ರೋಗಿಗಳ ಖಾಯಿಲೆಗಳನ್ನು ಆತ ವಾಸಿಮಾಡಿದರು ; ಬಡವರ ಕಷ್ಟವನ್ನು ನೀಗಿಸಿದರು ; ನಮ್ಮೆಲ್ಲರನ್ನೂ ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಾರೆ. ಅವರೇ ನಿಜವಾದ ದೇವರು. ಆತನನ್ನು ನಂಬಿ ; ಆತ ನಿಮ್ಮನ್ನು ಸ್ವರ್ಗಕ್ಕೆ ಕೊಂಡೊಯ್ಯುವರು. ದೇವರ ಸಾಮ್ರಾಜ್ಯವು ನಮ್ಮೊಳಗೇ ಇದೆ." ಯೇಸುವಿನ ಚಿತ್ರವನ್ನು ವಿವರಿಸುವಾಗ ಎಬನೀಜರನ ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿದು ಬರುವುದು. ಆದರೆ ಮರುಕ್ಷಣವೇ ಶ್ರೀಕೃಷ್ಣನ ಜ್ಞಾಪಕ ಬಂತೆಂದರೆ ಆತನ ಮುಖ ರೋಷದಿಂದ ಕೆಂಪಾಗುವುದು. "ನಿಮ್ಮ ಕೃಷ್ಣನಂತೆ ನಮ್ಮ ಯೇಸುವು ಕುಣಿಯುವ ಹುಡಿಗಿಯರನ್ನು ಕಟ್ಟಿಕೊಂಡು ಮೆರೆಯುತ್ತಿದ್ದನೇನು? ಆ ಕೊರಮನ ಹಾಗೆ ನಮ್ಮ ಯೇಸು ಬೆಣ್ಣೆ ಕದಿಯುತ್ತಿದ್ದನೇನು? ಅವನಂತೆ ನಮ್ಮ ಯೇಸು ಅಕ್ಕಪಕ್ಕದವರಿಗೆ ಕಿರುಕುಳ ಕೊಡುತ್ತಿದ್ದನೇನು?"

ಉಸಿರು ಎಳೆದುಕೊಳ್ಳುವುದಕ್ಕೆಂದು ಮಾತನ್ನು ಸ್ವಲ್ಪ ನಿಲ್ಲಿಸಿದರು. ಈ ದಿನ ಮೇಷ್ಟರ ಆವೇಶ ತೀರ ಮಿತಿಮೀರಿ ಹೋಯಿತು. ಸ್ವಾಮಿನಾಥನ ರಕ್ತ ಕುದಿಯಿತು. ಎದ್ದುನಿಂತು ಕೇಳಿದ : "ಅವನೇನೂ ಮಾಡದಿದ್ದರೆ ಅವನನ್ನು ಶಿಲುಬೆಗೇಕೆ ಏರಿಸಿದರು?" "ತರಗತಿಯಾದ ಮೇಲೆ ಬಂದರೆ ತಿಳಿಸುತ್ತೇನೆ" ಎಂದರು ಮೇಷ್ಟರು. ಈ ಮೆತ್ತನೆಯ

ಉತ್ತರದಿಂದ ಸ್ವಾಮಿನಾಥನ ಧೈರ್ಯ ಹೆಚ್ಚಿತು. ಇನ್ನೊಂದು ಪ್ರಶ್ನೆ ಕೇಳಿದ : "ಅವನು ದೇವರಾಗಿದ್ದರೆ ಮಾಂಸವನ್ನು ಏಕೆ ತಿನ್ನುತ್ತಿದ್ದ, ಹೆಂಡವೇಕೆ ಕುಡಿಯುತ್ತಿದ್ದ?" ಎಷ್ಟೇ ಆಗಲಿ, ಬ್ರಾಹ್ಮಣರ ಹುಡುಗ. ದೇವರು ಸಸ್ಯಾಹಾರಿಯಾಗದೆ ಮಾಂಸಾಹಾರಿ ಆಗಿರಲು ಹೇಗೆ ಸಾಧ್ಯ ಎಂದು ನಂಬಿಕೆ. ಇದಕ್ಕೆ ಉತ್ತರವಾಗಿ ಎಬನೀಜರ್ ಕುರ್ಚಿಯಿಂದ ಎದ್ದು, ನಿಧಾನವಾಗಿ ಅವನ ಕಡೆ ಬಂದು, ಅವನ ಎಡಕಿವಿಯನ್ನು ಕಿತ್ತು ಹಾಕುವ ಉದ್ಯಮದಲ್ಲಿ ತೊಡಗಿದ.

## ಮೂರು

ಮರುದಿನ ಸ್ವಾಮಿನಾಥ ಬೇಗ ಸ್ಕೂಲಿಗೆ ಬಂದಿದ್ದ. ಬೆಲ್ ಹೊಡೆಯುವುದಕ್ಕೆ ಇನ್ನೂ ಅರ್ಧ ಗಂಟೆಯಿತ್ತು. ಈ ರೀತಿ ಹೊತ್ತೇನಾದರೂ ಮಿಕ್ಕಿತ್ತೆಂದರೆ ಸ್ಕೂಲಿನ ಸುತ್ತ ಓಡುವುದೋ ಅಲ್ಲಿನ ಹುಣಸೇಮರದ ಕೆಳಗೆ ರಾಮಪಟ್ಟಿ ಆಡುವುದೋ ಅವನ ವಾಡಿಕೆ. ಆದರೆ ಈ ದಿನ ಬೇರೆಯಾಗಿ ಒಬ್ಬನೇ ಕುಳಿತಿದ್ದಾನೆ. ಏನೋ ಯೋಚನೆಯಲ್ಲಿ ಮುಳುಗಿದ್ದಾನೆ. ಅವನ ಜೇಬಿನಲ್ಲಿ ದಪ್ಪ ಕಾಗದವೊಂದಿತ್ತು. ಅದರ ಅಂಚಿಗೆ ಅವನ ಬೆರಳ ತುದಿ ತಗುಲಿದಾಗಲೆಲ್ಲ ಮಾಡಬಾರದುದನ್ನು ಮಾಡಿಬಿಟ್ಟೆನ್ನಲ್ಲ ಎನಿಸುತ್ತಿತ್ತು.

'ಎಂಥ ದಡ್ಡ ನಾನು, ರಾತ್ರಿ ಊಟ ಮಾಡುವಾಗ ಎಬನೀಜರ್ ವಿಷಯವನ್ನು ಅಪ್ಪನಿಗೇಕೆ ಹೇಳುವುದಕ್ಕೆ ಹೋದೆ!' ಎಂದು ತನ್ನನ್ನು ತಾನೇ ಸ್ವಾಮಿನಾಥನ್ ಹಳಿದುಕೊಂಡ.

ಬೆಲ್ ಹೊಡೆದ ತಕ್ಷಣ ಹೆಡ್ಮೇಷ್ಟರ ರೂಮಿಗೆ ಹೋಗಿ ಕಾಗದವನ್ನು ಅವರಿಗೆ ಕೊಟ್ಟ. ಕಾಗದ ಓದುತ್ತ ಓದುತ್ತ ಹೆಡ್ಮೇಷ್ಟರ ಮುಖ ಗಂಟಿಕ್ಕಿತು.

'ಸ್ವಾಮಿ,

ತಮ್ಮ ಶಾಲೆಯ ಮೊದಲನೆಯ ತರಗತಿಯ 'ಎ' ಸೆಕ್ಷನ್ನಿನಲ್ಲಿ ಓದುತ್ತಿರುವ ನನ್ನ ಮಗ ಸ್ವಾಮಿನಾಥನನ್ನು ನೆನ್ನೆಯ ದಿನ ತಮ್ಮ ಶಾಲೆಯ ಸುವಾರ್ತೆ ಉಪಾಧ್ಯಾಯರು ಮತಾವೇಶದ ಭರದಲ್ಲಿ ಅನಾಗರಿಕ ರೀತಿಯಿಂದ ಹೊಡೆದರೆಂಬುದನ್ನು ತಮ್ಮ ಅವಗಾಹನೆಗೆ ತರಬಯಸುತ್ತೇನೆ. ಆತ ಯಾವಾಗಲೂ ಹಿಂದೂ ಮತವನ್ನು ನಿಂದಿಸುತ್ತಾರೆಂತಲೂ ಕೆಣಕು ಮಾತುಗಳನ್ನಾಡುತ್ತಾರೆಂತಲೂ ನನಗೆ ತಿಳಿದುಬರುತ್ತದೆ. ಇದು ಹುಡುಗರ ಮೇಲೆ ದುಷ್ಪರಿಣಾಮವನ್ನುಂಟು ಮಾಡವಂಥದಾಗಿದೆ. ಇಂಥ ವಿಷಯದಲ್ಲಿ ಸಹನೆಯ ಅವಶ್ಯಕತೆ ಎಷ್ಟೆಂಬುದನ್ನು ಇಲ್ಲಿ ವಿವರಿಸಬೇಕಾದ್ದಿಲ್ಲ.

'ನನ್ನ ಮಗ ಕೆಲವು ಸಂದೇಹಗಳನ್ನು ನಿವಾರಣೆ ಮಾಡಿಕೊಳ್ಳ ಲೋಸುಗ ಎದ್ದುನಿಂತಾಗ ಅದೇ ಉಪಾಧ್ಯಾಯರು ಬಹಳ ಒರಟಾಗಿ ವರ್ತಿಸಿದರೆಂದು ನನಗೆ ತಿಳಿಯಬಂದಿದೆ. ನನ್ನ ಮಗ ನೆನ್ನೆ ಸಂಜೆ ಮನೆಗೆ ಬಂದಾಗ ಅವನ ಕಿವಿ ಇನ್ನೂ

ಕೆಂಪಾಗಿತ್ತು.

'ಇವೆಲ್ಲವನ್ನೂ ಪರಿಶೀಲಿಸಿದರೆ, ಕ್ರಿಶ್ಚಿಯನರಲ್ಲದ ಹುಡುಗರನ್ನು ನಿಮ್ಮ ಸ್ಕೂಲಿನಲ್ಲಿಟ್ಟುಕೊಳ್ಳಲು ನಿಮಗೆ ಸುತರಾಂ ಇಷ್ಟವಿಲ್ಲವೆಂಬ ಅಂತ್ಯ ತೀರ್ಮಾನಕ್ಕೆ ನಾನು ಬರಬೇಕಾಗುತ್ತದೆ. ಹಾಗಿದ್ದಲ್ಲಿ ತಾವು ಬಹಿರಂಗವಾಗಿಯೆ ಅದನ್ನು ತಿಳಿಸಬಹುದು. ನಮ್ಮ ಮಕ್ಕಳನ್ನು ನಿಮ್ಮ ಶಾಲೆಯಿಂದ ಬಿಡಿಸಿ ಬೇರೆ ಕಡೆ ಕಳುಹಿಸಲು ನಾವು ಸಿದ್ಧರಾಗಿದ್ದೇವೆ. ನಮ್ಮೂರಾದ ಮಾಲ್ಗುಡಿಯಲ್ಲಿರುವುದು ತಮ್ಮ ಆಲ್ಬರ್ಟ್ ಮಿಷನ್ ಸ್ಕೂಲೊಂದೇ ಅಲ್ಲವೆಂಬುದನ್ನು ತಮಗೆ ಈ ಸಂದರ್ಭದಲ್ಲಿ ನೆನಪು ಮಾಡಿಕೊಡುತ್ತೇನೆ. ತಾವು ಈ ವಿಷಯವನ್ನು ಪರೀಕ್ಷಿಸಿ ನನಗೊಂದು ಉತ್ತರವನ್ನು ಕೃಪೆ ಮಾಡುವಿರೆಂದು ನಿರೀಕ್ಷಿಸಬಹುದು ತಾನೆ? ಇಲ್ಲದಿದ್ದಲ್ಲಿ ಕ್ರಿಸ್ತಧರ್ಮಕ್ಕೆ ವಿರುದ್ಧವಾದ ಈ ನಡವಳಿಕೆಯ ಬಗ್ಗೆ ಮೇಲಿನ ಅಧಿಕಾರಿಗಳ ಗಮನವನ್ನು ನಾನು ಸೆಳೆಯಬೇಕಾಗುತ್ತದೆ.

ಇತಿ,

ನಿಮ್ಮ ಅತ್ಯಂತ ವಿಧೇಯ,
ಡಬ್ಲ್ಯು. ಟಿ. ಶ್ರೀನಿವಾಸನ್.'

ಸ್ವಾಮಿನಾಥನ್ ಕೊಟಡಿಯಿಂದ ಹೊರಗೆ ಬಂದೊಡನೆ ಸ್ಕೂಲಿಗೆ ಸ್ಕೂಲೇ ಅವನ ಸುತ್ತಲೂ ಗುಂಪು ಕಟ್ಟಿಕೊಂಡು ಅವನೇನು ಹೇಳುತ್ತಾನೋ ಕಾದು ನೋಡುತ್ತಿತ್ತು. ಅವರೆಲ್ಲರೂ ಕುತೂಹಲದಿಂದ ಕೇಳಿದ ಪ್ರಶ್ನೆಗಳನ್ನು ಸ್ವಾಮಿನಾಥನ್ ಕೇಳಿಯೂ ಕೇಳದಂತೆ ಗತ್ತಿನಿಂದಿದ್ದನು.

ಈ ರಹಸ್ಯವನ್ನು ತಿಳಿದುಕೊಳ್ಳುವ ಭಾಗ್ಯವನ್ನು ಸ್ವಾಮಿನಾಥನು ನಾಲ್ಕೇ ನಾಲ್ಕು ಜನರಿಗೆ ಕರುಣಿಸಿದ್ದನು. ಆ ನಾಲ್ವರೆಂದರೆ ಅವನಿಗೆ ಬಹಳ ಮಮತೆ, ಬಹಳ ಮೆಚ್ಚಿಕೆ. ಮೊದಲನೆಯವನು ಸೋಮು - ಅವನು ತರಗತಿಯ ಮಾನೀಟರ್. ಅವನ ರೀತಿಯೇ ರೀತಿ. ತನ್ನ ಕಾರ್ಯಭಾರಗಳನ್ನು ನಿರ್ವಹಿಸುವಾಗ ಅದೆಷ್ಟು ದರ್ಪ ಅವನದು! ಎಷ್ಟು ಲೀಲಾಜಾಲವಾಗಿ ಎಲ್ಲವನ್ನೂ ಮಾಡುವನು! ಮೇಷ್ಟರುಗಳನ್ನು ಕೂಡ ಸ್ನೇಹಿತರಂತೆ ಮಾತನಾಡಿಸುವನು. ಯಾವ ಮೇಷ್ಟ್ರು ಎಂದೂ ಅವನಿಗೆ ಪ್ರಶ್ನೆ ಹಾಕಿದುದೇ ಇಲ್ಲ. ಪಾಠದಲ್ಲಿ ಅವನದು ಅಂಥ ಪ್ರತಿಭೆಯೇನೂ ಅಲ್ಲ. ಯಾರಾದರೂ ಅವನನ್ನು ಛೀಮಾರಿ ಮಾಡಬಹುದಾದರೆ ಅದು ಹೆಡ್ಮೇಷ್ಟರಿಂದ ಮಾತ್ರ ಸಾಧ್ಯ ಎಂದು ಮಿಕ್ಕವರೆಲ್ಲರ ನಂಬಿಕೆ. ಒಟ್ಟಿನ ಮೇಲೆ ತರಗತಿಗೆಲ್ಲ ಚಿಕ್ಕಪ್ಪನಿದ್ದಂತೆ ಅವನು.

ಎರಡನೆಯವನು ಮಣಿ. 'ಅಪ್ರಯೋಜಕ' ಎಂದು ಅವನಿಗೆ ಅಡ್ಡ ಹೆಸರು. ತರಗತಿಯ ಎಲ್ಲ ಹುಡುಗರ ನಡುವೆ ಇವನು ಗುಡಿಯ ಗೋಪುರದಂತೆ ಎದ್ದು ಕಾಣುವನು. ಪುಸ್ತಕವನ್ನು ತರುವ ಪಾಪಕ್ಕಾಗಲಿ ಹೋಂ ವರ್ಕ್ ಮಾಡುವ ಪಾಪಕ್ಕಾಗಲಿ ಎಂದೂ ಹೋದವನಲ್ಲ. ಕೊನೆಯ ಬೆಂಚು ಅವನಿಗೆ ಗುತ್ತಿಗೆ. ತರಗತಿಗೆ ಬಂದಾಗಲೆಲ್ಲ ಅಲ್ಲಿ ಕುಳಿತು ನಿರ್ಭಯವಾಗಿ ನಿದ್ದೆಹೋಗುವನು. ಯಾವ ಉಪಾಧ್ಯಾಯರೂ ಅವನ ತಂಟೆಗೆ ಹೋಗುತ್ತಿರಲಿಲ್ಲ. ಒಂದು ಸಲ ಯಾರೋ ಹೊಸ ಮೇಷ್ಟರು ಅವನನ್ನು

ಲೇವಡಿ ಮಾಡಿದುದರಿಂದ ಅವರ ಪ್ರಾಣ ಆರಿಹೋಗುವುದರಲ್ಲೇ ಇತ್ತಂತೆ. ಹೊಸಬರಾರೇ ಬರಲಿ - ಚಿಕ್ಕವರಾದರೂ ಸರಿ, ದೊಡ್ಡವರಾದರೂ ಸರಿ - ಅವರನ್ನು ಮಣಿ ಕೆಣಕುವನು. ಅವನು ಹಾದುಹೋಗುವಾಗ ಜನ ಪಕ್ಕಕ್ಕೆ ಸರಿಯುತ್ತಿದ್ದರು. ಟೋಪಿಯನ್ನು ಓರೆಯಾಗಿ ಧರಿಸಿಕೊಂಡು, ಕಂಕುಳಲ್ಲೊಂದು ಕತೆ ಪುಸ್ತಕವನ್ನು ಸಿಕ್ಕಿಸಿಕೊಂಡು, ಸ್ಕೂಲಿನ ಜವಾನನಿಗೆ ಜ್ಞಾಪಕವಿದ್ದಷ್ಟು ಕಾಲದಿಂದಲೂ ಅವನು ಸ್ಕೂಲಿಗೆ ಬರುತ್ತಲೇ ಇದ್ದ. ಎಲ್ಲ ತರಗತಿಗಳಲ್ಲೂ ತನ್ನ ಸ್ನೇಹಿತರಿಗಿಂತ ಹೆಚ್ಚು ಕಾಲ ನಿಲ್ಲುವನು. ಅಂಥವನ ಸ್ನೇಹ ತನಗೆ ದೊರೆಕಿದೆಯೆಂಬುದೇ ಸ್ವಾಮಿನಾಥನಿಗೊಂದು ಹೆಮ್ಮೆ. ಮಿಕ್ಕವರು ಭಯಭಕ್ತಿಗಳಿಂದ ತಗ್ಗಿ ನಡೆದರೆ, ತಾನು ಝೋಕಿನಿಂದ 'ಮಣಿ' ಎಂದು ಅವನನ್ನು ಕರೆಯುವನು ; ಸಲಿಗೆಯಿಂದ ಅವನ ಭುಜದ ಮೇಲೆ ಕೈಹಾಕುವನು. "ಇಷ್ಟೊಂದು ಶಕ್ತಿ ನಿನಗೆಲ್ಲಿಂದ ಬಂತಯ್ಯಾ?" ಎಂದು ಸ್ವಾಮಿನಾಥನ್ ಒಂದು ದಿನ ಮಣಿಯನ್ನು ಕೇಳಿದ. "ನೋಡು, ಮನೆಯಲ್ಲಿ ಎರಡು ಗದೆ ಇಟ್ಟು ಕೊಂಡಿದ್ದೇನೆ. ಯಾರಾದರೂ ನನ್ನ ಗೋಜಿಗೆ ಬಂದರೋ ಅವರ ಬೆನ್ನು ಜಜ್ಜಿ ಹಾಕಿಬಿಡುತ್ತೇನೆ" ಎಂದ ಮಣಿ.

ಮೂರನೆವನು ಶಂಕರ್. ತರಗತಿಗೆಲ್ಲಾ ಅವನೇ ಪ್ರಚಂಡ. ಯಾವ ಲೆಕ್ಕ ಕೊಡಲಿ, ಐದೇ ಐದು ನಿಮಿಷದಲ್ಲಿ ಉತ್ತರ ಹೇಳಿಬಿಡುತ್ತಿದ್ದ. ಯಾವಾಗಲೂ ತೊಂಬತ್ತರ ಮೇಲೆಯೇ ನಂಬರ್ ಗಿಟ್ಟಿಸುತ್ತಿದ್ದ. ಅವನೇನಾದರೂ ಮೇಷ್ಟರುಗಳಿಗೆ ಪ್ರಶ್ನೆಹಾಕಲು ಮೊದಲು ಮಾಡಿದನೆಂದರೆ ಮೇಷ್ಟರುಗಳೆಲ್ಲ ಪರಾರಿಯಾಗಬೇಕಾಗುತ್ತದೆ ಎಂದು ತರಗತಿಯ ಒಂದು ಗುಂಪಿನವರ ನಂಬಿಕೆ. ಇನ್ನೊಂದು ಗುಂಪಿನವರು ಇದೊಂದನ್ನೂ ನಂಬುತ್ತಿರಲಿಲ್ಲ. "ಸರಿ, ಅವನು ಶುದ್ಧ ಪೆದ್ದು. ಮೇಷ್ಟರುಗಳಿಗೆ ಕಾಕಹೊಡೆದು ಪ್ರಶ್ನೆಗಳನ್ನೆಲ್ಲ ಮೊದಲೇ ತಿಳಿದುಕೊಂಡು ಬಿಟ್ಟು ಮಹಾ ಅಂತ ನಮ್ಮೆದುರಿಗೆಲ್ಲ ಜಂಬಮಾಡ್ತಾನೆ. ಮೇಷ್ಟರ ಮನೆಯಲ್ಲಿ ನಿತ್ಯವೂ ಗುಟ್ಟಾಗಿ ಬಟ್ಟೆ ಒಗೆದುಕೊಡುವುದು ನಮಗೆ ಗೊತ್ತಿಲ್ಲವೇನೋ? ಅದಕ್ಕೇ ಅವನಿಗೆ ತೊಂಬತ್ತು ನಂಬರು ಬರುವುದು" ಎಂದು ಅವರ ವಾದ. ಅದೇನೇ ಇರಲಿ. ತರಗತಿಯಲ್ಲಿ ಉಪಾಧ್ಯಾಯರೊಡನೆ ಇಂಗ್ಲಿಷಿನಲ್ಲಿ ಮಾತಾಡುವ ಎದೆಗುಂಡಿಗೆ ಬೇರೆ ಯಾರಿಗಿದೆ? ಪ್ರಪಂಚದಲ್ಲಿರುವ ಎಲ್ಲ ನದಿಗಳು, ಪರ್ವತಗಳು, ದೇಶಗಳು ಅವನಿಗೆ ಗೊತ್ತು. ನಿದ್ದೆಯಲ್ಲಿ ಬೇಕಾದರೂ ಚರಿತ್ರೆಯನ್ನೆಲ್ಲ ಒಪ್ಪಿಸಬಲ್ಲ. ವ್ಯಾಕರಣ ಅವನಿಗೆ ಮಕ್ಕಳಾಟವಿದ್ದ ಹಾಗೆ. ಅವನ ಮೂಗು ಯಾವಾಗಲೂ ಒದ್ದೆಯಾಗಿದ್ದರೂ, ಕ್ಲಾಸಿಗೆ ಅವನು ಜಡೆ ಹಾಕಿಕೊಂಡು ಹೂವು ಮುಡಿದುಕೊಂಡು ಬಂದರೂ ಕೂಡ ಅವನ ಮುಖದಲ್ಲಿ ಅದೆಷ್ಟು ವರ್ಚಸ್ಸು! ಶಂಕರನನ್ನು ಕಂಡರೆ ಏನೋ ಸೋಜಿಗವನ್ನು ಕಂಡ ಹಾಗಾಗುವುದು ಸ್ವಾಮಿನಾಥನಿಗೆ. ಮಣಿಯು ತನ್ನ ಮಾತನ್ನು ಪುರಸ್ಕರಿಸಿ ಶಂಕರನನ್ನೂ ತಮ್ಮ ಜತೆಗೆ ಸೇರಿಸಿಕೊಂಡನೆಂದರೆ ಒಂದು ಬಗೆಯ ಅಭಿಮಾನ. ತನ್ನ ಪ್ರೀತಿ ತೋರಿಸಿಕೊಳ್ಳಲು ಒಂದೊಂದು ಸಲ ಅವನು ಶಂಕರನ ಬೆನ್ನ ಮೇಲೆ ಬಲವಾಗಿ ಕೈಯಾಡಿಸುವನು. ತಲೆ ಕೆರೆದುಕೊಂಡು, "ಲೋ

ನರಪೇತಲನಾರಾಯಣ, ನಿನಗೆ ಇಷ್ಟೊಂದು ಮೆದುಳು ಎಲ್ಲಿಂದ ಬಂತೋ? ನನಗೂ ಅದರಲ್ಲೊಂದು ಪಾಲು ಕೊಡ್ತಿಯೇನೋ?" ಎನ್ನುವನು.

ನಾಲ್ಕನೆಯವ ಸಾಮ್ಯುಯೆಲ್. ಅವನಿಗೆ ಎಲ್ಲರೂ 'ಬಟಾಣಿ' ಎಂಬ ಅಡ್ಡ ಹೆಸರಿಟ್ಟಿದ್ದರು. ಅವನು ಬಟಾಣಿಯ ಹಾಗೇ ಇದ್ದ. ಯಾವ ವಿಷಯದಲ್ಲೂ ಅವನು ಪ್ರಚಂಡನಲ್ಲ. ಸರ್ವೇಸಾಧಾರಣವಾಗಿದ್ದ. ಮೈಯ ಶಕ್ತಿಯಾಗಲಿ ಮಿದುಳಿನ ಶಕ್ತಿಯಾಗಲಿ ಅವನಿಗೆ ಬಹಳವಿರಲಿಲ್ಲ. ಲೆಕ್ಕದಲ್ಲಿ ಸ್ವಾಮಿನಾಥನ್ ಎಷ್ಟು ಹಿಂದೆಬಿದ್ದಿದ್ದನೋ ಅವನೂ ಅಷ್ಟೇ ಹಿಂದೆಬಿದ್ದಿದ್ದ. ಸ್ವಾಮಿನಾಥನ್ ಸ್ವಲ್ಪ ಮಖೇಡಿ, ಸ್ವಲ್ಪ ಪುಕ್ಕಲು. 'ಬಟಾಣಿ'ಯೂ ಅಷ್ಟೇ. ಮತ್ತೆ ಹೇಗೆ ಇಬ್ಬರಿಗೂ ಇಷ್ಟು ಸ್ನೇಹ? ಅವರ ನಗೆಯೇ ಅವರನ್ನು ಇಷ್ಟು ಕಟ್ಟಿಹಾಕಿತ್ತು. ಸ್ವಾಮಿನಾಥನಿಗೆ ಯಾವ ಯಾವುದು ವಕ್ರವಾಗಿ ವಿಚಿತ್ರವಾಗಿ ಕಾಣುವುದೋ ಸಾಮ್ಯುಯೆಲ್‌ಗೂ ಅದೆಲ್ಲ ವಕ್ರವಾಗಿಯೂ ವಿಚಿತ್ರವಾಗಿಯೂ ಕಾಣುವುದು. ಬೇರೆಯವರಿಗೆ ಏನೇನೂ ಕಾಣದ ಕಡೆಯಲ್ಲೆಲ್ಲ ಇವರು ನಗುವಿನ ಸಾಗರವನ್ನೇ ಕಾಣುವರು. ಸಣ್ಣ ಸಂಗತಿಗೆಲ್ಲ ಸಾಯುವಷ್ಟು ನಗುವರು.

ಸುವಾರ್ತೆ ಮೇಷ್ಟರ ವಿಷಯವಾಗಿ ತನ್ನ ತಂದೆ ಏನು ಮಾಡಿದರೆಂಬುದನ್ನು ಸ್ವಾಮಿನಾಥ ಅವರೆಲ್ಲರಿಗೂ ತಿಳಿಸಿದ. ಒಟ್ಟಿನಲ್ಲಿ ಎಲ್ಲರೂ ಅದನ್ನು ಒಪ್ಪಿದರು. ಒಪ್ಪಿಗೆ ಕೊಟ್ಟವರಲ್ಲಿ ಸೋಮು ಮೊದಲನೆಯವ. ಬಹಳ ಸಂತೋಷವಾಗಿ ಹೋಯಿತು ಅವನಿಗೆ. ವಯಸ್ಸಾದ ಅಧಿಕಾರಿಯ ಹಾಗೆ ಮುಖ ಮಾಡಿಕೊಂಡು ಶಂಕರ ಹೇಳಿದ: "ಬೇರೆಯವರು ಏನಾದರೂ ಹೇಳಲಿ, ಈ ಕೆಲಸಾನ ನಿಮ್ಮ ತಂದೆ ಕೈಗೆ ವಹಿಸಿದ್ದು ಸರಿ." ಮಣಿ ಮಹಾರಾಯ ಕಣ್ಣನ್ನು ಅರ್ಧ ಮುಚ್ಚಿಕೊಂಡು, "ಮಾಡಿದ್ದೇನೋ ಸರಿಯೇ; ಆದರೂ ಈ ವಿಷಯಾನ ನಾವು ನಾವೇ ತೀರ್ಮಾನ ಮಾಡಿಬಿಡಬೇಕಾಗಿತ್ತು, ಸ್ವಾಮಿ. ಹಾಗೆ ಮಾಡದೆ ದೊಡ್ಡವರ ಹತ್ತಿರ ಈ ಮಾತನ್ನೆಲ್ಲ ತೊಗೊಂಡು ಹೋದದ್ದು ಶುದ್ಧ ದಡ್ಡತನ. ಕ್ಲಾಸಿನ ನಾಲ್ಕು ಗೋಡೆಗಳಿಂದ ಹೊರಕ್ಕೆ ಹೋಗುವುದಕ್ಕೇ ಅವಕಾಶ ಕೊಡಬಾರದು ನೋಡು. ನಾನೇನಾದರೂ ನಿನ್ನ ಜಾಗದಲ್ಲಿದ್ದರೆ ಮೊದಲಲ್ಲೇ ಒಂದು ಮಸಿಕುಡಿಕೆಯನ್ನೋ ಇನ್ನೇನಾದರೂ ಸಾಮಾನನ್ನೋ ತೆಗೆದು ಆ ಮೇಷ್ಟರ ಮೇಲೆ ಗುರಿಯಿಟ್ಟು ಎಸೆದುಬಿಟ್ಟು ಈ ಮಾತು ಅಲ್ಲಿಗೇ ಫೈಸಲ್ ಮಾಡಿಬಿಡುತ್ತಿದ್ದೆ. ಇರಲಿ, ನೀನು ಮಾಡಿರೋದರಲ್ಲಿ ತಪ್ಪೇನೂ ಇಲ್ಲ. ಸುಮ್ಮನೆ ಕೂತಿರೋದಕ್ಕಿಂತ ಇಷ್ಟಾದರೂ ಮಾಡಿದೆಯಲ್ಲ! ಅದು ಹೇಗಾದರೂ ಆಗಲಿ. ಆ ಸುವಾರ್ತೆ ಮೇಷ್ಟರಿಗೆ ಹೇಳು, ಹುಷಾರಾಗಿರೀ ಅಂತ. ಅವನ ಕತ್ತು ಕಿವುಚಿ, ಬೆನ್ನು ಮುರಿದು ಸರಯೂ ನದೀಲಿ ಬೀಸಿ ಬಿಸಾಡಬೇಕು ಅಂತ ತೀರ್ಮಾನ ಮಾಡಿಬಿಟ್ಟಿದ್ದೀನಿ" ಎಂದ.

ಬಟಾಣಿ ಬಲು ಫಜೀತಿಗೆ ಸಿಕ್ಕಿಬಿದ್ದ. ಏನಾದರೂ ಹೇಳಲೇಬೇಕು, ಇಲ್ಲದೆ ಹೋದರೆ ಮಿಕ್ಕವರೆಲ್ಲ ಏನಾದರೂ ತಿಳಿದುಕೊಳ್ಳುತ್ತಾರೆ. ಆದರೆ ತಾನೂ ಕ್ರಿಶ್ಚಿಯನ್. ಎಬನೀಜರ್ ಹೇಳಿದ್ದರಲ್ಲಿ ಏನು ತಪ್ಪೂ ಅವನಿಗೆ ಕಾಣಲಿಲ್ಲ. ಮನಸ್ಸಿನಲ್ಲಿ ಅವನು ಎಬನೀಜರ್ ಕಡೆಯೇ. ಆದರೂ ಜತೆಗಾರರು ಏನೂ ತಪ್ಪು ಭಾವಿಸದೆ ಇರಲಿ ಎಂದು

ಎಬನೀಜರ್ ಬಟ್ಟೆ, ಅವನ ಸ್ವರೂಪ - ಇವನ್ನೆಲ್ಲ ಲೇವಡಿ ಮಾಡಿ ಸುಮ್ಮನಾದ.

ತರಗತಿಗೆಲ್ಲ ಇದು ಹೇಗೋ ಗೊತ್ತಾಗಿ ಹೋಯಿತು. ಸುವಾರ್ತೆ ಪಿರೀಡು ಬಂತು. ಏನೋ ಆಗುತ್ತೆ, ಏನೋ ಆಗುತ್ತೆ ಅಂತ ಎಲ್ಲರೂ ಕಾದಿದ್ದೂ ಕಾದಿದ್ದೇ. ಏನೂ ಆಗಲಿಲ್ಲ. ನಿತ್ಯದ ಹಾಗೇ ಎಬನೀಜರ್ ಅಬ್ಬರದಿಂದಲೇ ಗರ್ಜಿಸುತ್ತಿದ್ದ. ಆವತ್ತು ಬೆಳಿಗ್ಗೆ ತಾನೆ ಬಹಳ ಕಷ್ಟಪಟ್ಟು ಭಗವದ್ಗೀತೆಯ ಒಂದು ಭಾಗವನ್ನು ಓದಿದ್ದ. ಭಗವದ್ಗೀತೆಗೆ ಯಾವ ವಿವರಣೆ ಬೇಕಾದರೂ ಕೊಡಬಹುದಷ್ಟೆ. ಎಬನೀಜರ್ ಆದರೋ ಹಿಂದೂ ಧರ್ಮವನ್ನು ಹೀಯಾಳಿಸಲು ಭಗವದ್ಗೀತೆಯನ್ನೇ ಅಸ್ತ್ರವಾಗಿ ಉಪಯೋಗಿಸಿದ.

ಅವನ ದನಿ ಎಂದಿನಷ್ಟೇ ಉದ್ವೇಗದಿಂದ ಕೂಡಿತ್ತು. ಅವನ ದೂಷಣೆಯಲ್ಲಿ ಎಂದಿಗಿಂತ ಹೆಚ್ಚು ಪಾಂಡಿತ್ಯವಿತ್ತು. ಭಗವದ್ಗೀತೆಯ ಅಡಿಪಾಯದ ಮೇಲೆ ಇಡೀ ಹಿಂದೂ ಧರ್ಮವನ್ನು ನಿರ್ಮಿಸಿ ಅನಂತರ ಭಗವದ್ಗೀತೆಯನ್ನು ನೂರು ಚೂರಾಗಿ ಹರಿದು ಎಸೆದ. ಹೆಜ್ಜೆ ಹೆಜ್ಜೆಯಾಗಿ ತನ್ನ ವಾಕ್ಸರಣಿಯ ಪರಮಾವಧಿಯನ್ನು ಏರುತ್ತಿದ್ದ. ಬೈಬಲ್ ಗ್ರಂಥ ಮೇಜಿನ ಮೇಲೆ ಬಿದ್ದಿತ್ತು. ಎಬನೀಜರ್ ಅದನ್ನು ತೆಗೆದು ಕೂಡ ಇರಲಿಲ್ಲ.

ಹೆಡ್ ಮೇಷ್ಟರು ಮೆಲ್ಲಗೆ ಒಳಕ್ಕೆ ಬಂದರು.

ಎಬನೀಜರ್ ಮಾತು ನಿಲ್ಲಿಸಿ, ಕುರ್ಚಿಯನ್ನು ಹಿಂದಕ್ಕೆ ನೂಕಿ ಎದ್ದು ನಿಂತ. ದಿಕ್ಕು ತೋಚದೆ ಹೋಯಿತು. ಮುಖ್ಯೋಪಾಧ್ಯಾಯರ ಮುಖವನ್ನೇ ದಿಟ್ಟಿಸಿ ನೋಡಿದ. "ನಿಲ್ಲಿಸಬೇಕಾಗಿಲ್ಲ, ಮುಂದುವರಿಸಬಹುದು" ಎಂದರು ಮುಖ್ಯೋಪಾಧ್ಯಾಯರು. ಈ ವೇಳೆಗೆ ಎಬನೀಜರ್ ಮೆಲ್ಲನೆ ಮುಚ್ಚಿಟ್ಟಿದ್ದ ಬೈಬಲ್ ಪುಟಗಳೊಳಗೆ ಒಂದು ಬೆರಳನ್ನು ಹಾಕಿದ್ದ. ಹೆಡ್‌ಮೇಷ್ಟರಿಂದ ಅಪ್ಪಣೆ ಬಂದೊಡನೆ, ರೋಷದಿಂದ ಗಂಟುಹಾಕಿದ್ದ ಹುಬ್ಬನ್ನು ಸಡಿಲಿಸಿ, ಸಣ್ಣದೊಂದು ಕೃತಕ ನಗುವನ್ನು ನಕ್ಕು, ಬೈಬಲನ್ನು ತೆಗೆದು, ಬೆರಳೆಲ್ಲಿತ್ತೋ ಆ ಪುಟದಿಂದ ಓದಲು ಆರಂಭಿಸಿದ. ಕ್ರಿಸ್ತಜನ್ಮದ ಪ್ರಕರಣದ ವರ್ಣನೆಯ ಭಾಗ. ಆ ಮಹದ್ಘಟನೆ ಆಗತಾನೆ ಸಂಭವಿಸಿತ್ತು. ದೇವಪುತ್ರನು ಕೊಟ್ಟಿಗೆಯಲ್ಲಿ ಮಲಗಿದ್ದ. ಮೂಡಲ ನಾಡಿನ ಮೂರು ಜ್ಞಾನಿಗಳು ಹೊಳೆವ ತಾರೆಯ ಹಾದಿಯನ್ನೇ ಅನುಸರಿಸಿ ನಡೆಯುತ್ತಿದ್ದರು.

ಹುಡುಗರಿಗೆ ಎಂದಿನಂತೆಯೇ ಪಾಠದ ಮೇಲೆ ಅಲಕ್ಷ್ಯ. ಉಪಾಧ್ಯಾಯ ಭಗವದ್ಗೀತೆಯನ್ನೂ ಹಿಂದೂ ಧರ್ಮವನ್ನೂ ಖಂಡಿಸುತ್ತಿದ್ದರೇನಂತೆ? ಕ್ರಿಸ್ತಜನ್ಮವನ್ನು ವರ್ಣಿಸಿದರೇನಂತೆ? ಅವರಿಗೆ ಎಲ್ಲವೂ ಒಂದೇ.

ಹೆಡ್‌ಮೇಷ್ಟರು ಒಂದು ಕ್ಷಣ ಕೇಳಿದರು. ಎಬನೀಜರ್‌ರಿಂದ ಒಂದು ಸಣ್ಣ ವಿವರಣೆ ಬೇಕಾಗಿತ್ತು. ದಸರಾ ಪರೀಕ್ಷೆ ಹತ್ತಿರ ಬರುತ್ತಿತ್ತು. ಇನ್ನೂ ಕ್ರಿಸ್ತಜನ್ಮದ ಪಾಠವೇ ನಡೆಯುತ್ತಿದೆಯೇ? ಶಿಲುಬೆಗೆ ಏರಿಸುವುದು ಯಾವಾಗ? ಪುನರುತ್ಥಾನ ಮಾಡುವುದು ಯಾವಾಗ? ಇಷ್ಟನ್ನೂ ಪುನರಾ ವರ್ತನೆ ಮಾಡುವುದು ಯಾವಾಗ?.... ಎಬನೀಜರ್‌ಗೆ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಹಾಗಾಯಿತು. ಏನು ಹೇಳುವುದಕ್ಕೂ ಆತನಿಗೆ ತೋಚಲಿಲ್ಲ.... ವಾರದಲ್ಲೊಂದು ದಿನ ಒಂದು ರೀತಿಯ ಪುನರಾವರ್ತನೆ ಮಾಡುವುದು

ತನ್ನ ವಾಡಿಕೆ ಎಂದು ಒಂದು ಕುಂಟು ನೆಪ ಹೇಳಿ ಹೇಗೋ ನುಣುಚಿಕೊಂಡ. 'ಅಯ್ಯೋ! ಅಷ್ಟೊಂದು ಹಿಂದೆ ಬಿದ್ದಿರುತ್ತೇನೆಯೇ? ಛೇಛೇ. 'ಕೊನೆಯ ಭೋಜನ'ದ ಹತ್ತಿರ ಬಂದುಬಿಟ್ಟಿದ್ದೇನೆ ಆಗಲೇ.'

ಶಾಲೆ ಮುಗಿದ ಮೇಲೆ ಹೆಡ್‌ಮೇಷ್ಟರ ಕೊಟಡಿಗೆ ಬರಬೇಕೆಂದು ಸ್ವಾಮಿನಾಥನ್‌ಗೆ ಚೀಟಿ ಬಂತು. ಬೇಡಪ್ಪಾ ಸದ್ಯ, ಮನೆಗೆ ಓಡಿಹೋದರೆ ಸಾಕು, ಎನ್ನಿಸಿತು ಅವನಿಗೆ. ಮಣಿ ಇದಕ್ಕೆ ಒಪ್ಪಿಗೆ ಕೊಡಲಿಲ್ಲ. ಸ್ವಾಮಿನಾಥನ ಎರಡು ತೋಳುಗಳನ್ನೂ ಹಿಡಿದುಕೊಂಡು ದರದರನೆ ಅವನನ್ನು ನೂಕಿಕೊಂಡು ಹೋಗಿ ಹೆಡ್‌ಮೇಷ್ಟರ ಕೋಣೆಯೊಳಕ್ಕೆ ದಬ್ಬಿಬಿಟ್ಟ, ಆ ಧಡಿಯ. ಹೆಡ್‌ಮೇಷ್ಟರು ಎದುರಿಗೇ ಕುಳಿತಿದ್ದರು. ಸ್ವಾಮಿನಾಥನ್ ಗಡಗಡ ನಡಗುತ್ತ ನಿಂತ.

ಪಕ್ಕದಲ್ಲೇ ಎಬನೀಜರ್ ಕುರಿಯಂತೆ ದೈನ್ಯದ ಮೋರೆ ಹಾಕಿಕೊಂಡು ಒಂದು ಸ್ಟೂಲಿನ ಮೇಲೆ ಕುಳಿತಿದ್ದ. ಹೆಡ್‌ಮೇಷ್ಟರು ಕೇಳಿದರು :

"ಏನಯ್ಯಾ ಈ ಗಲಾಟೆ, ಸ್ವಾಮಿನಾಥನ್?"

"ಅ.....ಅ - ಏನೂ ಇಲ್ಲ, ಸಾರ್" ಎಂದ ಸ್ವಾಮಿನಾಥನ್.

"ಏನೂ ಇಲ್ಲದೆ ಹೋದರೆ, ಈ ಕಾಗದ ಏತಕ್ಕೆ?"

"ಓ!" ಸ್ವಾಮಿನಾಥನಿಗೆ ಏನು ಹೇಳುವುದಕ್ಕೂ ತಿಳಿಯಲಿಲ್ಲ.

ಎಬನೀಜರ್ ನಗುವುದಕ್ಕೆ ಪ್ರಯತ್ನಿಸಿದ, ನಗು ಬರಲಿಲ್ಲ. ಇದರಿಂದೆಲ್ಲ ತಪ್ಪಿಸಿಕೊಂಡರೆ ಸಾಕಲ್ಲಪ್ಪಾ, ಎನಿಸಿತು ಸ್ವಾಮಿನಾಥನಿಗೆ. ನೂರು ಎಬನೀಜರ್‌ಗಳು ದೇವರ ವಿಷಯವಾಗಿ ಸಾವಿರ ಬೈಗಳು ಬೈದರೆ ತನಗೇನು?

"ನಾನಿರುವುದು ಏಕೆ ಗೊತ್ತೋ?" ಎಂದು ಕೇಳಿದರು ಹೆಡ್‌ಮೇಷ್ಟರು.

ಸ್ವಾಮಿನಾಥನ್‌ಗೇನು ಗೊತ್ತು? ಹೇಳಲು ಏನು ಉತ್ತರವೂ ಅವನಿಗೆ ಹೊಳೆಯಲಿಲ್ಲ. ಹೆಡ್‌ಮೇಷ್ಟರು ಇರುವುದೇಕೆ?.... ಹುಡುಗರ ತಾಯಿ ತಂದೆಗಳು ಏನಾದರೂ ಪತ್ರ ಬರೆದರೆ ಅದನ್ನೆಲ್ಲ ಓದುವುದಕ್ಕಿರಬಹುದು. ಅಥವಾ ಎಬನೀಜರರ ಚರ್ಮ ಸುಲಿಯುವುದಕ್ಕೆಂದೇ ಸೃಷ್ಟಿಯಾಗಿರಬಹುದು. ಇಲ್ಲವೆ, ಪ್ರತಿ ಸೋಮವಾರವೂ ಹನ್ನೆರಡು ಗಂಟೆಗೆ ಸರಿಯಾಗಿ ತನ್ನ ಛಡಿ ಬೆತ್ತದಿಂದ ತುಂಟ ಹುಡುಗರಿಗೆ ಆರು ಏಟು ತಿನ್ನಿಸುವುದಕ್ಕಾಗಿಯೇ ಹುಟ್ಟಿರಬಹುದು.... ಅದೆಲ್ಲಾ ಸರಿಯೇ, ಈ ಪ್ರಶ್ನೆಯೇಕೆ?

"ಗೊತ್ತಿಲ್ಲ ಸಾರ್, ನಂಗೊತ್ತಿಲ್ಲ."

"ನಾನಿರುವುದೇಕೆಂದರೆ ನಿಮ್ಮನ್ನೆಲ್ಲ ನೋಡಿಕೊಳ್ಳೋದಕ್ಕೆ. ಗೊತ್ತಾಯಿತೆ?" ಎಂದರು ಹೆಡ್‌ಮೇಷ್ಟರು.

ಇಷ್ಟೇನೆ? ಅಂಥ ಪ್ರಶ್ನೆಗೆ ಅಷ್ಟು ಸುಲಭವಾದ ಉತ್ತರವೇ? ಬದುಕಿದೆ ಎಂದುಕೊಂಡ, ಸ್ವಾಮಿ.

ಹೆಡ್‌ಮೇಷ್ಟರು ಮುಂದುವರಿಸಿದರು: "ಆದ್ದರಿಂದ ನಿನಗೇನಾದರೂ ಆಗಬೇಕಾಗಿದ್ದರೆ ನಿಮ್ಮ ತಂದೆ ಹತ್ತಿರ ಹೋಗೋಕ್ಕಿಂತ ಮುಂಚೆ ನನ್ನ ಹತ್ತಿರ ಬರಬೇಕು, ಗೊತ್ತಾಯಿತೆ?"

ಒರೆಗಣ್ಣಿನಿಂದ ಸ್ವಾಮಿನಾಥನ್ ಎಬನೀಜರ್ ಕಡೆ ನೋಡಿದ; ಪಾಪ! ಆತ ಸ್ಟೂಲಿನ ಮೇಲೆ ನರಳುತ್ತಿದ್ದಂತೆ ಇತ್ತು.

ಹೆಡ್‌ಮೇಷ್ಟರು ಮುಗಿಸಲಿಲ್ಲ. "ಇಷ್ಟು ಸಣ್ಣ ವಿಷಯಕ್ಕೆ ನಿಮ್ಮ ತಂದೆಯವರೆಗೂ ಹೋದೆಯಲ್ಲ, ಎಷ್ಟು ದಡ್ಡ ನೀನು! ಇನ್ನು ಮೇಲೆ ಹೀಗೆ ಮಾಡಬೇಡ, ಗೊತ್ತಾಯಿತೆ? ನಾನು ವಿಚಾರಿಸುತ್ತೇನೆ. ಈ ಕಾಗದ ನಿಮ್ಮ ತಂದೆಗೆ ಕೊಟ್ಟುಬಿಡು."

ಕಾಗದ ತೆಗೆದುಕೊಂಡದ್ದೇ ತಡ, ಓಟ.

# ರಾಜಂ

ಸರಯೂ ನದಿ ಮಾಲ್ಗುಡಿಯ ಹೆಮ್ಮೆ. ಊರಿನ ಕೊನೆಯ ಬೀದಿಯಿಂದ ಕೇವಲ ಹತ್ತು ನಿಮಿಷ ನಡೆದು ಹೋದರೆ ಸಾಕು, ನದಿ ಸಿಗುತ್ತದೆ. ಪುರಜನರೆಲ್ಲ ಸಂಜೆ ಸರಯೂ ತೀರದ ಮರಳ ಮೇಲೆ ವಿಶ್ರಮಿಸಿಕೊಳ್ಳುವರು. ಮಾಲ್ಗುಡಿಗೆ ಯಾರಾದರೂ ದೊಡ್ಡ ಮನುಷ್ಯರು ಭೇಟಿಕೊಟ್ಟರೆ, ಪೌರ ಸಭಾಧ್ಯಕ್ಷರು ಅವರನ್ನು ಬೆಳುದಿಂಗಳ ಕಾಲದಲ್ಲಿ ಪುರಭವನದ ಮಹಡಿ ಮೇಲೆ ಕರೆದುಕೊಂಡು ಹೋಗಿ ಊರ ಉತ್ತರದಲ್ಲಿ ಬೆಳ್ಳಿಯ ಡಾಬಿನಂತೆ ಹೊಳೆಯುತ್ತ ಹರಿಯುವ ಸರಯೂ ನದಿಯನ್ನು ಹೆಮ್ಮೆಯಿಂದ ತೋರಿಸಿಕೊಳ್ಳುವುದು ರೂಢಿ.

ಪ್ರತಿ ಸಂಜೆಯಂತೆಯೇ ಆ ಸಂಜೆಯೂ ಮರಳಿನ ಮೇಲೆ ಜನಸಂದಣಿ ಸೇರಿತ್ತು. ಈ ಜನರಿಂದ ದೂರವಾಗಿ ಸ್ವಾಮಿ ಮತ್ತು ಮಣಿ ಇಬ್ಬರೆ ತೀರದ ಸೋಪಾನದ ಮೆಟ್ಟಿಲೊಂದರ ಮೇಲೆ ಕುಳಿತು ನೀರಲ್ಲಿ ಕಾಲನ್ನು ಆಡಿಸುತ್ತಿದ್ದರು. ಹತ್ತಿರದಲ್ಲೇ ಒಂದು ಅರಳಿಮರ. ಹೊಳೆಯ ನೀರನ್ನು ಮುತ್ತಿಡುವಂತೆ ಮರ ಬಾಗಿತ್ತು. ಎಲೆಗಳೆಲ್ಲ ಹಿತವಾಗಿ ಮೊರೆಯುತ್ತಿದ್ದವು. ಮರದ ಕೊಂಬೆಗಳ ನಡುವೆ ಎಳೆಗಾಳಿ ಆಟವಾಡುತ್ತಿತ್ತು. ಅಲ್ಲೊಂದು ಇಲ್ಲೊಂದು ಹಣ್ಣೆಲೆ ಮರದಿಂದ ಉದುರಿ ನೀರಿನ ಮೇಲೆ ದೋಣಿಯಂತೆ ತೇಲಿಹೋಗುತ್ತಿತ್ತು. ಹಕ್ಕಿಗಳ ಕೂಗಿಂದ ಆಕಾಶವೆಲ್ಲ ತುಂಬಿತ್ತು. ಕೊಂಚ ' ದೂರದಲ್ಲಿ ನಲ್ಲಪ್ಪನ ಮಾವಿನತೋಪಿನ ಬಳಿ ಆಕಳ ಸಾಲು ನದಿಯನ್ನು ನಿಧಾನವಾಗಿ ಹಾಯ್ದು ಬರುತ್ತಿತ್ತು. ಜೋಡೆತ್ತಿನ ಬಂಡಿಯೊಂದು ಹತ್ತಿರದ ಹಳ್ಳಿಗೆ ಹಿಂದಿರುಗುತ್ತಿತ್ತು. ಗಾಡಿಯವನು ಯಾವುದೋ ಹಳ್ಳಿಯ ಹಾಡನ್ನು ಸಣ್ಣ ದನಿಯಲ್ಲಿ ಹಾಡಿಕೊಳ್ಳುತ್ತಿದ್ದ. ಸೂರ್ಯ ಮುಳುಗಿ ಹದಿನೈದು ನಿಮಿಷವಾಗಿತ್ತು. ಪಶ್ಚಿಮದಲ್ಲೆಲ್ಲ ಎಳೆಗೆಂಪು ಹರಡಿತ್ತು.

"ನೀರು ಇಲ್ಲಿ ವಿಪರೀತ ಆಳವಲ್ಲವೇ?" ಎಂದು ಕೇಳಿದ ಮಣಿ.

"ಹೌದು. ಏಕೆ?"

"ರಾಜಂನ ಇಲ್ಲಿಗೆ ಕರಕೊಂಡು ಬಂದು ಮೂಟೆ ಕಟ್ಟಿ ಇಲ್ಲಿ ಎಸೆದು ಬಿಡೋಣಾಂತ."

ಫಸ್ಟ್ 'ಎ'ಗೆ ರಾಜಂ ಆದೇ ತಾನೇ ಹೊಸದಾಗಿ ಬಂದು ಸೇರಿದ್ದ. ದಸರಾ ರಜ ಮುಗಿದು ಶಾಲೆ ತೆರೆದ ದಿನವೇ ತರಗತಿಗೆ ಬಂದ. ಬಂದವನು ನೇರವಾಗಿ ಯಾವ ಬಿಂಕವೂ ಇಲ್ಲದೆ ಕಡೆಯ ಬೆಂಚಿಗೆ ಹೋಗಿ ಮಣಿ ಪಕ್ಕದಲ್ಲಿ ಕುಳಿತ. ಮಣಿಯನ್ನು

ಕಂಡರೆ ಸ್ವಲ್ಪವಾದರೂ ದಿಗಿಲೇ ಇಲ್ಲ. ಮಣಿಗೆ ರೇಗಿತು. ತನ್ನ ಮೊಣಕೈಯಿಂದ ರಾಜಂ ಎದೆಗೆ ತಿವಿದ. ರಾಜಂ ಸುಮ್ಮನಿರಲಿಲ್ಲ. ಅವನೂ ತಿವಿದ. ಇದನ್ನೆಲ್ಲ ನೋಡಿ ತರಗತಿಗೆ ತರಗತಿಯೇ ಬೆರಗಾಯಿತು. ಹೊಸಬ. ಜರ್ಬಿನಿಂದ ಬಟ್ಟೆ ಹಾಕುತ್ತಿದ್ದ. ಕಾಲುಚೀಲ, ಬೂಟ್ಸು, ಫರ್‌ಟೋಪಿ, ನೆಕ್‌ಟೈ, ಟ್ವೀಡ್‌ಕೋಟು, ನಿಕ್ಕರ್ ಇದನ್ನೆಲ್ಲ ಹಾಕುತ್ತಿದ್ದವನು ತರಗತಿಗೆಲ್ಲ ಇವನೊಬ್ಬನೇ. ಮೋಟರಿನಲ್ಲಿ ಬರುತ್ತಿದ್ದ ಕ್ಲಾಸಿಗೆ. ಇವಿಷ್ಟರ ಜತೆಗೆ ಓದಿನಲ್ಲೂ ಕಡಿಮೆಯೇನೂ ಅಲ್ಲ. ಮದರಾಸಿನಲ್ಲೆಲ್ಲೋ ಇದ್ದ ಇಂಗ್ಲಿಷ್ ಹುಡುಗರ ಸ್ಕೂಲಿನಿಂದ ಬಂದಿದ್ದಾನೆ ಅಂತ ಎಲ್ಲರಲ್ಲೂ ಗುಸಗುಸ. ಬಹಳ ಷೋಕಾಗಿ ಇಂಗ್ಲಿಷ್ ಮಾತನಾಡುತ್ತಿದ್ದ. ಯೂರೋಪಿಯನರ ಹಾಗೇ ಎಲ್ಲಾ. ಅಂದರೆ ಅವನಾಡುತ್ತಿದ್ದ ಇಂಗ್ಲಿಷು ಬೇರೆ ಯಾರಿಗೂ ಅರ್ಥವೇ ಆಗುತ್ತಿರಲಿಲ್ಲ. ಅವನ ಕೈಯಲ್ಲಿ ಇಂಗ್ಲಿಷು ಮಾತಾಡುವಷ್ಟು ಎದೆಗಾರಿಕೆ ಯಾವ ಹುಡುಗನಿಗೆ ಬರಬೇಕು? ಶಂಕರ ಮಾತ್ರ ಅಲ್ಪಸ್ವಲ್ಪ ಮಾತಾಡಿಯಾನು. ಆದರೆ ರಾಜಂ ಇಂಗ್ಲಿಷ್ ಮುಂದೆ ಶಂಕರನ ಇಂಗ್ಲಿಷು ರಂಗನ ಮುಂದೆ ಸಿಂಗನೇ ಎನ್ನುವ ಹಾಗಿತ್ತು.

ಅಂತೂ, ಮಣಿಗೆ ಒಬ್ಬ ಪ್ರತಿಕಕ್ಷಿ ಸಿಕ್ಕಿದ. ತನ್ನ ವಿಷಯವಾಗಿ ರಾಜಂ ತೋರಿಸುತ್ತಿದ್ದ ನಿರ್ಲಕ್ಷ್ಯದಿಂದ ಮಣಿಗೆ ರೋಷ ಬಂತು. ಈ ಬಗೆಯ ಅನುಭವ ಅವನಿಗೆ ಹೊಸದು. ಮಣಿ ತಿವಿದರೆ, ರಾಜಂ ಕೂಡ ತಿವಿಯುತ್ತಾನೆ. ಮಣಿ ಗುದ್ದಿದರೆ ರಾಜಂ ಕೂಡ ಗುದ್ದುತ್ತಾನೆ. ಮಣಿ ಒದ್ದನೆಂದರೆ ರಾಜಂ ಕೂಡ ಒದೆಯುತ್ತಾನೆ. ತರಗತಿಯಲ್ಲಿ ಮಣಿಯೇ ದೊರೆಯೆಂದರೆ ರಾಜಂ ಅವರಪ್ಪನಾದ. ಇದೆಲ್ಲ ಹಾಗಿರಲಿ. ಓದಿನಲ್ಲೂ ಅವನೇನೂ ಶುಂಠನಲ್ಲ. ಅದರಲ್ಲಿ ರಾಜಂನ ಸೋಲಿಸಬಲ್ಲವ ಶಂಕರ ಒಬ್ಬನೇ. ಒಟ್ಟಿನಲ್ಲಿ ತರಗತಿಗೆ ಹೊಸ ಪಾಳೇಗಾರ ಬಂದ ಹಾಗಾಯಿತು. ಬರುಬರುತ್ತ, ಇನ್ನು ತನಗೆ ಉಳಿಗಾಲವಿಲ್ಲವೆಂಬ ನಂಬಿಕೆ ಮಣಿಯಲ್ಲಿ ಬೇರೂರಿತು.

ರಾಜಂನ ಮೂಟೆ ಕಟ್ಟಿ ಹೊಳೆಯಲ್ಲಿ ಎತ್ತಿಹಾಕಬೇಕೆಂದು ಮಣಿ ಮನಸ್ಸು ಮಾಡುವುದಕ್ಕೆ ಇದಿಷ್ಟೂ ಕಾರಣ. ಸ್ವಾಮಿನಾಥನ್ ಭಯ ಭಯ ಪಡುತ್ತ ಹೇಳಿದ: "ಲೋ, ಬೇಡ ಕಾಣೋ ಮಣಿ; ಅವರಪ್ಪ ಪೋಲೀಸ್ ಸೂಪರೆಂಟು ಕಾಣೋ." ಮಣಿ ಒಂದು ಕ್ಷಣ ಸುಮ್ಮನಿದ್ದು, "ಅವರಪ್ಪ ಏನಾದರೆ ನನಗೇನು? ಒಂದಲ್ಲ ಒಂದು ದಿನ ನನ್ನ ಗದೆ ತಗೊಂಡು ಅವನ ಹೆಗಲು ಮುರಿದುಹಾಕ್ತೀನಿ, ನೋಡ್ತಿರು" ಎಂದ.

"ನಾನೊಂದು ಪಕ್ಷ ನೀನಾಗಿದ್ದರೆ ನನ್ನ ಪಾಡಿಗೆ ನಾನಿದ್ದು ಬಿಡುತ್ತಿದ್ದೆ ನಪ್ಪ. ಪೋಲೀಸರ ಸಹವಾಸ ಬಲು ಕಷ್ಟ" ಎಂದು ಹೇಳಿದ ಸ್ವಾಮಿನಾಥನ್.

"ಊ, ನೀನೊಂದ್ವೇಳೆ ನಾನಾಗಿದ್ದಿದ್ದರೆ! ಸದ್ಯ ನಾನೇನೂ ನಿನ್ನಂತೆ ಬೆರಳು ಚೀಪೋ ಮೂದೇವಿಯಲ್ಲ!"

ಸ್ವಾಮಿನಾಥ ದೊಡ್ಡದಾಗಿ ನಿಟ್ಟುಸಿರುಬಿಟ್ಟ.

ಮಣಿ ಮುಂದುವರಿಸಿದ : "ಇದೇ ಮಾತು ಬಂದಾಗ ಹೇಳ್ಬಿಡ್ತೀನಿ. ನೀನೂ

ಹುಷಾರ್. ಈಚೀಚೆಗೆ ನೀನು ಯಾವಾಗಲೂ ಆ ರಾಜಂನ ಹಿಂದೆಯೇ ಬಿದ್ದಿರುತ್ತಿದ್ದೀ. ನಿನ್ನ ಕೈಕಾಲು ಮುಟ್ಟಿ ನೋಡ್ಕೋತಿರು."

ಇದನ್ನು ತಡೆಯಲು ಸ್ವಾಮಿಗೆ ಆಗಲಿಲ್ಲ. "ಇಲ್ಲ ಮಣಿ, ನನ್ನಾಣೆ - ನೀನೆಷ್ಟು ಹಳೆಯ ಸ್ನೇಹಿತ! ನಿನ್ನನ್ನು ಬಿಟ್ಟು ಯಾರ ಜೊತೇನಾದರೂ ಸೇರೋದು ಸಾಧ್ಯವೇ ಮಣಿ? ಯಾಕೆ ನೀನು ಹೀಗೆಂದುಕೊಂಡಿದ್ದೀಯೋ ನಾ ಕಾಣೆ. ಯಾವತ್ತಾದರೂ ನಾನು ಆ ರಾಜಂ ಹತ್ತಿರವಾದರೂ ಹೋಗಿದ್ದೇನೆಯೆ?.... ಅವನನ್ನು ಕಂಡರೆ ನನಗೆ ಎಷ್ಟು ದ್ವೇಷ ಅಂತೀಯಾ? ಅಯೋಗ್ಯ! ತನ್ನ ಸಮಾನ ಇಲ್ಲ ಅಂತ ಮೆರೀತಾನೆ. ಎಂದಾದರೂ ಅವನೂ ನಾನೂ ಒಟ್ಟಿಗಿದ್ದುದು ನೀನು ನೋಡಿದ್ದೀಯೇನಪ್ಪ?.... ಓ, ಆವತ್ತು ಸೋಮವಾರ, ಡ್ರಾಯಿಂಗ್ ಪಿರೀಡಿನಲ್ಲಿರಬೇಕು. ನಾನೇನ್ಮಾಡಲಿ? ನಾನು ಮುಖ ಈ ಕಡೆ ತಿರುಗಿಸಿಕೊಂಡರೂ ಅವನಾಗಿ ಅವನೆ ಬಂದು ಮಾತಾಡಿಸಿದ. ಆ ಕತ್ತೇಗೆ ಪೆನ್ಸಿಲ್ ಜೀವ್ತೋಕ್ಕೆ ಬ್ಲೇಡು ಬೇಕಾಗಿತ್ತಂತೆ. ಕೊಡೋ ಅಂದ. ಬೇಕಾದರೆ ಅಂಗಡಿಗೆ ಹೋಗಿ ಕೊಂಡ್ಕೊ ಎಂದೆ.... ಸುಮ್ಮನೆ ಯಾಕೆ ಬೈತೀಯಪ್ಪ?.... ನೀನೆಲ್ಲಿ, ರಾಜಂ ಎಲ್ಲಿ? ಇಬ್ಬರಿಗೂ ಎಲ್ಲಿಯ ಹೋಲಿಕೆ?"

ಇದನ್ನು ಕೇಳಿ ಮಣಿಗೆ ತುಂಬ ಸಂತೋಷವಾಯಿತು. ಸಂತೋಷ ಉಕ್ಕಿಬಂದು ಗಟ್ಟಿಯಾಗಿ ನಕ್ಕ. ಆ ಸಂಜೆಯೆಲ್ಲ ಅವನು ನಕ್ಕೇ ಇರಲಿಲ್ಲ, ತನ್ನ ವಿಶ್ವಾಸ ತೋರಿಸುವುದಕ್ಕೆ ಸ್ವಾಮಿನಾಥನ ಕಿವಿಯನ್ನು ಬಲವಾಗಿ ಹಿಂಡಿದ. ಇದ್ದಕ್ಕಿದ್ದಂತೆ, "ಲೋ ಸ್ವಾಮಿ, ತಂದೆಯೇನೋ, ನಾ ಕೇಳಿದ್ದು?" ಎಂದ.

"ಇಲ್ಲವೋ ಮಣಿ, ಮರೆತುಹೋಯ್ತು. ಏನೂ ತಿಳಕೋಬೇಡ. ಕ್ಷಮಿಸಪ್ಪಾ. ಅಮ್ಮ ಅಡಿಗೆಮನೇಲೇ ಇದ್ದು ಬಿಟ್ಟಳು. ಅದರಿಂದ ಅದು ತರೋಕಾಗಲಿಲ್ಲ." ('ಅದು' ಅಂದರೆ ನಿಂಬೆಕಾಯಿ ಉಪ್ಪಿನಕಾಯಿ).

"ಥೂ, ನೀನೆಲ್ಲೋ ಭಂಡಮುಂಡೇದು ಕಣೋ. ಈ ಸಾಯಂಕಾಲ ಎಷ್ಟು ಮಜವಾಗಿದೆ! ನೀನು ಮಾತ್ರ 'ಅದು' ತಂದಿದ್ದರೆ!......"

## ಎರಡು

ರಾಜಂ ಮಣಿ ಇಬ್ಬರಿಗೂ ಸ್ವಾಮಿನಾಥ ರಾಯಭಾರಿ. ಮೂವರೂ ಕೊನೆಯ ಬೆಂಚಿನಲ್ಲಿ ಹಳದಿ ಗೋಡೆಗೆ ಒರಗಿಕೊಂಡು ಕಾಲಾಡಿಸುತ್ತಾ ಕುಳಿತಿದ್ದಾರೆ. ಈ ಕಡೆ ಮಣಿ, ಆ ಕಡೆ ರಾಜಂ, ಮಧ್ಯೆ ಸ್ವಾಮಿ. ಎದುರುಗಡೆ ಡೆಸ್ಕಿನ ಮೇಲೆ ಪುಸ್ತಕಗಳು. ಆದರೆ ಮನಸ್ಸೆಲ್ಲ ಬೇರೆ ಎಲ್ಲೋ.

ಮಣಿ ಒಂದು ಚೂರು ಕಾಗದ ತೆಗೆದುಕೊಂಡ. "ನೀನು ಗಂಡಸೇನೋ?" ಎಂದು ಬರೆದ. ಬರೆದು ಸ್ವಾಮಿ ಕೈಯಲ್ಲಿ ಕೊಟ್ಟ. ಸ್ವಾಮಿ ಒರಟಾಗಿ ಅದನ್ನು ರಾಜಂ ಕಡೆ

ನೂಕಿದ. ರಾಜಂ ಓದಿ, ಹರಿದು ಬಿಸಾಡಿದ. ಇದನ್ನು ನೋಡಿ ಮಣಿ ಇನ್ನೊಂದು ಕಾಗದದ ಮೇಲೆ ಮತ್ತೆ ಅದೇ ಪ್ರಶ್ನೆ ಬರೆದು, ಅದರ ಕೆಳಗೆ, "ನೀನಿದಕ್ಕೆ ಉತ್ತರ ಬರೀದೆ ಹೋದರೆ ನೀನು ಗೂಬೆ ಮರಿಯೇ ಸರಿ" ಎಂದು ಗೀಚಿ ರಾಜಂ ಕಡೆ ನೂಕಿದ. "ಲೋ ಹೆಣವೆ, ಗಲಾಟೆ ಮಾಡಬೇಡ ಹೋಗೋ" ಎಂದು ರಾಜಂ ಸ್ವಾಮಿನಾಥನ ಕಿವಿಯಲ್ಲಿ ಉಸುರಿ, ಕಾಗದವನ್ನು ಸುರುಳಿ ಸುತ್ತಿ ಎಸೆದು ಬಿಟ್ಟ.

ಮೇಷ್ಟರ ಪಾಠಕ್ಕೆ ಅಡಚಣೆ ಬಂದು ಅಲ್ಲಿಗೇ ನಿಲ್ಲಬೇಕಾಯಿತು. "ಸ್ವಾಮಿನಾಥನ್, ಸ್ಟಾಂಡ್ ಅಪ್" ಮೇಷ್ಟರ ಗಂಟಲು. ವಿಧೇಯನಾಗಿ ಸ್ವಾಮಿ ಎದ್ದು ನಿಂತ.

"ಲಿಸ್‌ಬನ್ ಯಾವುದಕ್ಕೆ ಪ್ರಸಿದ್ಧಿ?" ಎಂದರು ಮೇಷ್ಟರು.

ಸ್ವಾಮಿನಾಥನ್ ಸ್ವಲ್ಪ ತಡವರಿಸಿದ ... ಧೈರ್ಯಮಾಡಿ, "ಸ್ಪೇಯಿನಿನ ಮುಖ್ಯಪಟ್ಟಣ ಸಾರ್ ಅದು" ಎಂದ.

ಮೇಷ್ಟರಿಗೆ ಕೋಪ ಬಂತು. ಮೀಸೆಯ ತುದಿ ಕಚ್ಚಿಕೊಂಡು ಇನ್ನೂ ಒಂದು ಪ್ರಶ್ನೆ ಕೇಳಿದರು : "ಇಂಡಿಯಾ ದೇಶದ ವಾಯುಗುಣದ ಬಗ್ಗೆ ನಿನಗೇನು ಗೊತ್ತು?"

"ಬೇಸಗೆಯಲ್ಲಿ ಶೆಖೆ, ಚಳಿಗಾಲದಲ್ಲಿ ಚಳಿ, ಸಾರ್!"

"ಕತ್ತೆ, ಹತ್ತು ಬೆಂಚು. ಸ್ಟಾಂಡ್ ಅಪ್ ಆನ್ ದಿ ಬೆಂಚ್" ಎಂದು ಅರಚಿದರು ಮೇಷ್ಟರು. ಕಿಮಕ್ ಕಮಕ್ ಎನ್ನದೆ ಸ್ವಾಮಿನಾಥನ್ ಬೆಂಚಿನ ಮೇಲೆ ಹತ್ತಿ ನಿಂತ. ಬೆತ್ತದ ಏಟು ತಿನ್ನುವ ಅವಮಾನಕ್ಕಿಂತ ಬೆಂಚಿನ ಮೇಲೆ ನಿಂತುಕೊಳ್ಳುವುದೆ ವಾಸಿ ಎಂದುಕೊಂಡ.

ಮೇಷ್ಟರು ತಮ್ಮ ಪಾಡಿಗೆ ತಾವು ಪಾಠ ಮಾಡಿಕೊಂಡು ಹೋದರು. "ಆಫ್ರಿಕಾ ಖಂಡದ ತುಂಬ ಕಾಡುಗಳು, ಅದು ಅರಣ್ಯಗಳ ಖಂಡ. ನೈಲ್ ನದಿಯೆ ಆಫ್ರಿಕಾದಲ್ಲಿ ಮುಖ್ಯವಾದ ನದಿ. ಗೊತ್ತಾಯ್ತೆ? ನಾನು ಹೇಳಿದ್ದೇನು?" ಮೊದಲನೆಯ ಬೆಂಚಿನಲ್ಲಿ ಒಬ್ಬ ಹುಡುಗನ ಕಡೆ ಬೆರಳು-ತೋರಿಸಿದರು ಮೇಷ್ಟರು. ಹುಡುಗ ಚಟ್ಟನೆ ಎದ್ದುನಿಂತು "ನೈಲ್ ನದಿಯು ಆಫ್ರಿಕಾದಲ್ಲೆಲ್ಲ ಮುಖ್ಯವಾದ ನದಿ" ಎಂದು ಉತ್ತರ ಹೇಳಿದ. ಮೇಷ್ಟರಿಗೆ ಸಮಾಧಾನವಾಯಿತು. "ನೈಲ್ ಏನು?" ಒಬ್ಬ ಹುಡುಗ ಬಹಳ ಚೂಟಿಯಿಂದ ಎದ್ದು ನಿಂತು, "ಆಫ್ರಿಕಾದಲ್ಲೆಲ್ಲ ಮುಖ್ಯವಾದ ನದಿ" ಎಂದ. ಮೇಷ್ಟರು ಅವನನ್ನು ಚೆನ್ನಾಗಿ ಛೀಮಾರಿ ಮಾಡಿದರು. "ನಿನ್ನನ್ನು ಕೇಳಿದರೇನೋ? ಕೇಳೋಕ್ಕೆ ಮುಂಚೆ ಯಾಕೋ ಹೇಳಬೇಕು? ಸದ್ದು, ಸದ್ದು, ಸೈಲೆನ್ಸ್, ಎಷ್ಟು ಗಲಾಟೆ! ಇದೇನು ಸಂತೆಯೇನ್ರೊ! ಗಲಾಟೆ ಮಾಡ್ತಾ ಹೋಗಿ; ಪರೀಕ್ಷೇಲಿ ದೊಡ್ಡ ಕುಂಬಳಕಾಯಿ ಸಿಗುತ್ತೆ, ನಾನು ನೋಡ್ತೀನಿ...."

ಪಾಠದ ಕಡೆ ಸ್ವಾಮಿನಾಥ ಸ್ವಲ್ಪವಾದರೂ ಗಮನಕೊಡಲಿಲ್ಲ. ಬೆಂಚಿನ ಮೇಲೆ ನಿಂತಿದ್ದ. ಮಿಕ್ಕ ಎಲ್ಲರಿಗಿಂತ ಎತ್ತರದ ಸ್ಥಾನದಲ್ಲಿದ್ದ. ಎಷ್ಟೊಂದು ತಲೆ ಕಾಣುತ್ತಿತ್ತು! ಅವರವರ ಟೋಪಿಗಳ ಪ್ರಕಾರ ಎಲ್ಲರ ತಲೆಗಳನ್ನೂ ವಿಂಗಡಿಸಿದ. ಕೆಂಪು ಟೋಪಿ ನಾಲ್ಕು, ಗಾಂಧೀ ಟೋಪಿ ಇಪ್ಪತ್ತೈದು, ಮಕಮಲ್ ಟೋಪಿ ಹತ್ತು, ಇತ್ಯಾದಿ, ಇತ್ಯಾದಿ.....

ಸ್ಕೂಲು ಮುಗಿದ ಮೇಲೆ ಸ್ವಾಮಿ ಮಣಿ ರಾಜಂ ಮೂವರೂ ಪಕ್ಕದ ಮೈದಾನಕ್ಕೆ

ಹೋದರು. ಸ್ವಾಮಿನಾಥನ್ ಮಧ್ಯೆ ನಿಂತಿದ್ದ. ಮಣಿ ರಾಜಂ ಮಾತಾಡುತ್ತಿರಲಿಲ್ಲ. ಆದ್ದರಿಂದ ಸ್ವಾಮಿಯ ಮೂಲಕ ಮಾತನಾಡಬೇಕಾಗಿತ್ತು. ಪಿಸುಗುಟ್ಟಿದರೂ ಕೇಳುವಷ್ಟು ಹತ್ತಿರ ಇದ್ದರು, ಆದರೂ 'ಎನ್ಮಿ'ಗಳಾಗಿದ್ದವರು, ಮಾತಾಡುವುದುಂಟೇ? ಮಣಿ ಸ್ವಾಮಿಯನ್ನು ಕೇಳಿದ : "ನೀನು ಗಂಡಸೇನೋ?" ಎಂದು. ಸ್ವಾಮಿ ರಾಜಂ ಕಡೆ ತಿರುಗಿ, "ನೀನು ಗಂಡಸೇನೋ" ಎಂದ. ರಾಜಂಗೆ ರೇಗಿತು, "ಅಲ್ಲಾ ಅನ್ನೋ ನಾಯಿ ಯಾವುದೋ?" ಎಂದ, ಸ್ವಾಮಿಯ ಕೈಯಲ್ಲಿ. ಸ್ವಾಮಿಯು ಮಣಿಯ ಕಡೆ ತಿರುಗಿ, "ಅಲ್ಲಾ ಅಂತ ಹೇಳೋ ಕುಂಟುನಾಯಿ ಯಾವುದೋ?" ಎಂದ.

"ನೀನು ಗಂಡಸಾಗಿದ್ದರೆ ನಿನ್ನ ಗಟ್ಟಿಗತನ ತೋರಿಸಬಲ್ಲೆಯೇನೋ?" ಎಂದು ಮಣಿ ಕೇಳಿದ.

ಸ್ವಾಮಿನಾಥ ರಾಜಂ ಕಡೆ ತಿರುಗಿ ಅದೇ ಪ್ರಶ್ನೆ ಕೇಳಿದ.

"ಹೇಗೆ?"

"ಹೇಗೆ?" ಎಂದು ಸ್ವಾಮಿನಾಥನ್ ಮಣಿಯನ್ನು ಕೇಳಿದ.

"ನಾಳೆ ಸಂಜೆ, ನದಿ ಪಕ್ಕದ ನಲ್ಲಪ್ಪನ ತೋಪಿನ ಹತ್ತಿರ ಬಾ."

"- ಬಾ, ನಲ್ಲಪ್ಪನ ತೋಪಿನ ಹತ್ತಿರ" ಸ್ವಾಮಿನಾಥನ್ ಮರುದನಿ ಕೊಟ್ಟ.

"ಯಾಕೆ?" ಎಂದ ರಾಜಂ.

"ನೀನೇನಾದರೂ ನನ್ನ ತಲೆ ಬಡೀಬಲ್ಯೋ ನೋಡೋಕೆ."

"ಚೂರು ಚೂರು ಮಾಡಿಬಿಟ್ಟೇನ್" ಎಂದ ರಾಜಂ.

ಸ್ವಾಮಿನಾಥನ್ ಮಾತಾಡಲು ವೇಳೆಯೆ ಸಿಗಲಿಲ್ಲ. ರಾಜಂ ಒಂದು ಕಿವಿಯಲ್ಲಿ ಕೂಗುತ್ತಿದ್ದಾನೆ; ಮಣಿ ಇನ್ನೊಂದು ಕಿವಿಯಲ್ಲಿ ಅಬ್ಬರಿಸುತ್ತಿದ್ದಾನೆ.

"ಹಾಗಾದರೆ ನಾಳೆ ಸಂಜೆ ನದೀ ಹತ್ತಿರ ಬರ್ತೀಯಾ ಅನ್ನು?" ಎಂದ ಸ್ವಾಮಿ ಕೊನೆಗೆ.

"ಓ, ಖಂಡಿತ" ರಾಜಂ ಭರವಸೆಯಿತ್ತ.

"ಜತೆಗೆ ಯಾರಾದರೂ ಪೋಲೀಸಿನವರನ್ನು ಕರೆದುಕೊಂಡು ಬರುತ್ತಾನೋ?" ಎಂದು ಮಣಿ ಕೇಳಿದ. "ಇಲ್ಲ, ಕರೆದುಕೊಂಡು ಬರುವುದಿಲ್ಲ." ಮಣಿಗೆ ಇನ್ನೂ ಒಂದು ಶಂಕೆ. "ನಿನಗೇನಾದರೂ ಆದರೆ ನಿಮ್ಮ ಅಪ್ಪನಿಗೆ ಹೇಳಕೂಡದು ಅಂತ ಪ್ರಮಾಣ ಮಾಡಬೇಕು" ಎಂದ. "ಛೇ, ನಾನು ಅಂಥ ಹೇಡಿಯೇ? ಏನೇ ಆಗಲಿ, ಹೇಳೊಲ್ಲ" ಎಂದು ರಾಜಂ ಮಾತು ಕೊಟ್ಟ.

## ಮೂರು

ಕೆಲವು ಗಜ ದೂರ ಹೋದರೆ ನಲ್ಲಪ್ಪನ ತೋಪು. ಸಂಜೆ ಏಳು ಹೊಡೆದಿತ್ತು. ಆ ದಡದಿಂದ ಈ ದಡಕ್ಕೆ ಓಡಾಟ ನಿಂತುಹೋಗಿತ್ತು. ನದಿಯ ದಂಡೆಗೆ ಬಂದ ಸಂಜೆಯ

ಜನ ಬಹಳ ದೂರದಲ್ಲಿದ್ದರು. ಸ್ವಾಮಿನಾಥನ್ ಮಣಿ ಇಬ್ಬರೂ ಮರಳಿನ ಮೇಲೆ ಪದ್ಮಾಸನ ಹಾಕಿ ಕುಳಿತಿದ್ದರು. ಮಾತಿಲ್ಲ, ಮೌನ. ಮಣಿ ಮರಳನ್ನೇ ದಿಟ್ಟಿಸಿ ನೋಡುತ್ತಿದ್ದ. ಕಂಕುಳಲ್ಲಿ ಪುಟ್ಟದೊಂದು ಗದೆಯಿತ್ತು. ಅವನು ಯೋಚಿಸುತ್ತಿದ್ದ : ಕೊಂಚ ಹೊತ್ತಿನಲ್ಲೇ ತಾನು ರಾಜಂನ ತಲೆ ಒಡೆದು ಹೊಳೆಯಲ್ಲಿ ಹಾಕಿಬಿಡುತ್ತೇನೆ. ಹೆಣ ಏನಾದರೂ ಸಿಕ್ಕಿದರೆ? ಸಿಕ್ಕಿದರೆ ಏನಂತೆ, ತಾನೇ ಮಾಡಿರುವುದು ಎಂದು ಹೇಗೆ ತಿಳಿಯಬೇಕು? ಆದರೆ ರಾಜಂ ಏನಾದರೂ ದೆವ್ವವಾಗಿಬಿಟ್ಟು ರಾತ್ರಿ ಹೊತ್ತು ಬಂದು ಕಿರುಕುಳ ಕೊಟ್ಟರೆ? ತಾತ ತೀರಿ ಕೊಂಡಾಗಿನಿಂದ ಒಬ್ಬನೆ ಮಲಗುತ್ತಿದ್ದ. ರಾಜಂ ದೆವ್ವವಾಗಿ ರಾತ್ರಿ ಬಂದು ಕೂದಲೆಳೆದರೆ ಏನು ಗತಿ? ಆದ್ದರಿಂದ ಅವನನ್ನು ಕೊಲ್ಲದೆ ಇರುವುದೆ ಕ್ಷೇಮ. ಕೈಕಾಲು ಮುರಿದು ಅವನಷ್ಟಕ್ಕೆ ಅವನನ್ನು ಬಿಟ್ಟು ಬಿಡುವುದೇ ಸರಿಯಾದ ಮಾರ್ಗ. ತಲೆ ಮುರಿದರೆ ಯಾರು ಮಾಡಿದರೆಂದು ಹೇಗೆ ತಾನೆ ತಿಳಿಯುವುದು? ಹೇಳುವುದಿಲ್ಲವೆಂದು ರಾಜಂ ಮಾತು ಕೊಟ್ಟುಬಿಟ್ಟಿದ್ದಾನೆ. ಆದರೆ ಒಂದು ವೇಳೆ ಈ ... ಸ್ವಾಮಿನಾಥನ್ ಕಡೆ ನೋಡಿದ ಮಣಿ. ಸ್ವಾಮಿನಾಥನ್ ಎಳೆ ಮಗುವಿನಂತೆ ಪಿಳಿ ಪಿಳಿ ನೋಡುತ್ತಿದ್ದ ... ಒಂದು ವೇಳೆ ಈ ಸ್ವಾಮಿಯೇನಾದರೂ ಬಾಯಿ ಬಿಟ್ಟರೆ ಕಷ್ಟ.

ಬೂಟ್ಸಿನ ಸಪ್ಪಳವಾಯಿತು. ಇಬ್ಬರೂ ತಿರುಗಿ ನೋಡಿದರು. ರಾಜಂ ಪೂರ್ತಿ ಕಾಕಿ ಬಟ್ಟೆ ಹಾಕಿಕೊಂಡಿದ್ದಾನೆ. ಕೈಯಲ್ಲೊಂದು ಬಂದೂಕು, ಎರಡು ತಿಂಗಳ ಹಿಂದೆ ಅವನ ಹುಟ್ಟಿದ ಹಬ್ಬದ ದಿನ ಅವರ ತಂದೆ ಈ ಆಟದ ಬಂದೂಕು ತಂದುಕೊಟ್ಟಿದ್ದರು. ಸಿಪಾಯಿಯ ಹಾಗೆ ಸೆಟೆದು ನಿಂತು ರಾಜಂ ಹೇಳಿದ : "ಇದೋ, ನಾನು ರೆಡಿ."

"ನೀನು ತುಂಬಾ ತಡವಾಗಿ ಬಂದಿದ್ದೀ."

"ಹೌದು."

"ಷುರು ಮಾಡೋಣ."

ರಾಜಂ ಬಂದೂಕನ್ನು ಹೆಗಲಿಗೇರಿಸಿ ಆಕಾಶದ ಕಡೆಗೆ ಒಂದು ಗುಂಡು ಹೊಡೆದ - ಢಂ ಎಂದಿತು. ಮಣಿಗೆ ಅಂಜಿಕೆಯಾಯಿತು. ಗದೆಯನ್ನು ನೆಲದ ಮೇಲಿಟ್ಟು ಸುಮ್ಮನೆ ನಿಂತ.

"ಕೇಳಿದೆಯೋ ಗುಂಡಿನ ಶಬ್ದ?" ಎಂದ ರಾಜಂ. "ಮುಂದಿನ ಗುಂಡು ನಿನ್ನ ಮೈಯಲ್ಲಿರುತ್ತೆ, ಗೊತ್ತೋ?"

"ಆ, ಇದು ಧರ್ಮವಲ್ಲಪ್ಪ, ನಿನ್ನ ಹತ್ತಿರ ಬಂದೂಕಿದೆ - ನನ್ನ ಹತ್ತಿರ ಇಲ್ಲ.... ಕೈ ಕೈ ಹೋರಾಟ ಆಗಬೇಕು ಅಂತ ಅಲ್ಲವೋ ಆವತ್ತು ತೀರ್ಮಾನ ಮಾಡಿದ್ದು?"

"ಹಾಗಾದರೆ ಈ ಗದೆ ಏಕೆ ತಂದೆ? ಗದೆ ತರ್‍ತೀನಿ ಅಂತ ಹೇಳಿದ್ಯಾ ನಿನ್ನೆ?"

ಮಣಿ ತಲೆ ತಗ್ಗಿಸಿದ.

"ನಿನಗೇನು ಮಾಡಿದ್ದೇನಯ್ಯ ನಾನು? ಯಾಕಯ್ಯ ನನ್ನ ಮೇಲೆ ಕೋಪ ನಿಂಗೆ?" ಎಂದ ರಾಜಂ.

"ನನ್ನನ್ನು ಬೈಯಲ್ಲಿಲ್ಲವೋ, ಯಾರೋ ಒಬ್ಬರ ಮುಂದೆ?"

"ಇಲ್ಲ. ಅದು ಸುಳ್ಳು."

ಉತ್ತರವಿಲ್ಲ. ಮಣಿ ಎಡವಟ್ಟಿನ ಪರಿಸ್ಥಿತಿಯಲ್ಲಿದ್ದ. ರಾಜಂ ಹೇಳಿದ, "ಇಷ್ಟೇನೆ, ನಿನ್ನ ಕೋಪಕ್ಕೆ ಇದಿಷ್ಟೇ ಕಾರಣ? ಬಿಡು ಬಿಡು, ಇಂಥಾದ್ದಕ್ಕೆಲ್ಲ ದ್ವೇಷ ಕಟ್ಟಿಕೊಳ್ಳುವುದುಂಟೆ? ಸ್ನೇಹಿತರಾಗಿರೋಣಂತೆ."

"ಆಗಬಹುದು" ಎಂದ ಮಣಿ.

ಸ್ವಾಮಿನಾಥನ್ ಇದನ್ನೆಲ್ಲ ನಂಬಲಾರದೆ ಹೋದ. ಅವನ ಆಶ್ಚರ್ಯವೇ ಆಶ್ಚರ್ಯ. ಮಣಿಯ ಮುಂದೆ ಹೇಗೆ ನಟಿಸಿದರೂ ಕೂಡ, ರಾಜಂನ ಕಂಡರೆ ಸ್ವಾಮಿನಾಥನಿಗೆ ಬಹಳ ಮೆಚ್ಚಿಕೆ. ಅವನ ಗೆಳೆಯನಾಗಬೇಕೆಂದು ತುಂಬ ಹಂಬಲ. ಅಂತೂ ಕೆಲಸಕ್ಕೆ ಬಾರದ ಮನಸ್ತಾಪವೆಲ್ಲ ಮಾಯವಾಗಿ ಸುಖದ ಸಮಾಪ್ತಿಯಾಯಿತು. ಆನಂದದಿಂದ ಅವನು ಕುಣಿದಾಡಿದ. ರಾಜಂ ತನ್ನ ಬಂದೂಕನ್ನು ಮರಳಿನ ಮೇಲೆ ಮಲಗಿಸಿದ. ಮಣಿ ತನ್ನ ಗದೆಯನ್ನು ದೂರ ಎಸೆದ. ಮೈತ್ರಿಯನ್ನು ಸೂಚಿಸಲೆಂದು ರಾಜಂ ತನ್ನ ಜೇಬಿನಿಂದ ಹತ್ತು ಹನ್ನೆರಡು ಬಿಸ್ಕತ್ ಈಚೆಗೆ ತೆಗೆದ.

ನದಿಯ ಮಂದ ನಿನದ. ಅರಳೀಮರದ ಎಲೆಗಳ ಮೊರೆತ. ಸಂಜೆಯ ಮಸಕು ಬೆಳಕು. ಮೂವರು ಗೆಳೆಯರಲ್ಲಿ ಹೊಸತಾಗಿ ಚಿಗುರಿದ ಗೆಳೆತನ. - ಜಗತ್ತಿನಲ್ಲೆಲ್ಲ ತಾನೇ ಪರಮಸುಖಿ ಎಂದುಕೊಂಡ, ಸ್ವಾಮಿನಾಥನ್.

# ಸ್ವಾಮಿಯ ಅಜ್ಜಿ

ಮುಂದಿನ ಹಾಲ್‌ಗೂ ಊಟದ ಮನೆಗೂ ನಡುವೆ ಒಂದು ಕೋಣೆ. ಕಿಟಕಿಗಳಿಲ್ಲ. ಕತ್ತಲೋ ಕತ್ತಲೆ. ಐದು ಜಮಖಾನಗಳನ್ನು ಒಂದರ ಮೇಲೊಂದು ಹಾಸಿ ತಯಾರಿಸಿದ ಹಾಸಿಗೆ, ಮೂರು ದುಪ್ಪಟಿ, ಐದು ದಿಂಬು, ಚಿತ್ರದ ಚಚ್ಚೌಕದ ಮಡಿಪೆಟ್ಟಿಗೆ, ಚಿಕ್ಕದೊಂದು ಮರದ ಪೆಟ್ಟಿಗೆ, ಅದರಲ್ಲಿ ಕೆಲವು ತಾಮ್ರದ ಪುಡಿಗಾಸು, ಕೊಂಚ ಲವಂಗ, ಯಾಲಕ್ಕಿ, ಅಡಕೆ, ವಿಭೂತಿ - ಇವಿಷ್ಟೇ ಅಜ್ಜಿಯ ಆಸ್ತಿ. ಆಕೆಗೂ ಆಕೆಯ ಐಶ್ವರ್ಯ ಸರ್ವಸ್ವಕ್ಕೂ ಈ ಕೋಣೆಯಲ್ಲೇ ಆವಾಸ.

ರಾತ್ರಿ ಊಟ ಆದ ಮೇಲೆ ಅಜ್ಜಿಯ ತೊಡೆಯ ಮೇಲೆ ತಲೆ ಇಟ್ಟುಕೊಂಡು ಸ್ವಾಮಿ ಬೆಚ್ಚಗೆ ಮಲಗಿದ್ದಾನೆ. ಯಾಲಕ್ಕಿ ಲವಂಗದ ಹಿತವಾದ ವಾಸನೆ ಕೊಟಡಿಯನ್ನೆಲ್ಲ ಆವರಿಸಿದೆ.

"ಅಜ್ಜಿ, ಅಜ್ಜಿ, ನಿಂಗೊತ್ತಿಲ್ಲಾ ಅಜ್ಜಿ, ರಾಜಂ ಎಷ್ಟು ದೊಡ್ಡ ಮನುಷ್ಯ ಅನ್ನೋದು" ರಾಜಂಗೂ ಮಣಿಗೂ ಮೊದಲಿದ್ದ ಹಗೆತನ, ಆಮೇಲಿನ ಗೆಳೆತನ ಎಲ್ಲವನ್ನೂ ಸ್ವಾಮಿ ಉತ್ಸಾಹದಿಂದ ಬಣ್ಣಿಸುತ್ತ ಇದ್ದ.

"ನೋಡಜ್ಜಿ, ಅವನ ಹತ್ತಿರ ನಿಜವಾದ ಪೋಲೀಸ್ ಡ್ರೆಸ್ ಇದೆ, ಗೊತ್ತಾ?" ಎಂದ ಸ್ವಾಮಿ.

"ಹಾಗೇನು! ಅವನಿಗೇಕೆ ಪೋಲೀಸ್ ಬಟ್ಟೆ?"

"ಅವರಪ್ಪ ಪೋಲೀಸ್ ಸೂಪರೆಂಟು, ಅಜ್ಜೀ. ಊರಿನಲ್ಲಿ ಎಷ್ಟು ಪೋಲೀಸ್‌ನವರು ಇದ್ದಾರೋ ಅವರೆಲ್ಲರಿಗೂ ಅವರೇ ಆಫೀಸರು." ಅಜ್ಜಿ ತಲೆದೂಗಿದಳು. ಪೋಲೀಸ್ ಕಚೇರಿ ಬಲು ಭಾರಿಯದಾಗಿರಬೇಕು ಎಂದಳು. ತನ್ನ ಗಂಡ, ಸ್ವಾಮಿಯ ತಾತ ಸಬ್‌ಮ್ಯಾಜಿಸ್ಟ್ರೇಟಾಗಿ ಎಷ್ಟು ದರ್ಪದಿಂದ ಬಾಳಿದರು, ಜಿಲ್ಲೆಯ ಪೋಲೀಸಿನವರೆಲ್ಲ ಅವರನ್ನು ಕಂಡರೆ ಹೇಗೆ ಗಡಗಡನೆ ನಡಗುತ್ತಿದ್ದರು, ಭಾರಿ ಭಾರಿ ದರೋಡೆಕೋರರೆಲ್ಲ ಅವರ ಹೆಸರು ಕೇಳಿದರೆ ಹೇಗೆ ಕಾಲಿಗೆ ಬುದ್ಧಿ ಹೇಳುತ್ತಿದ್ದರು - ಎಂಬುದನ್ನೆಲ್ಲ ಹೇಳಲು ಮೊದಲು ಮಾಡಿದಳು. ಈ ಕತೆ ಎಂದಿಗೆ ಮುಗಿದೀತೋ ಎಂದು ಸ್ವಾಮಿ ತವಕದಿಂದ ಕಾದುನೋಡಿದ. ಅಜ್ಜಿಯ ಮಾತಿಗೆ ಕೊನೆಮೊದಲೇ ಇರಲಿಲ್ಲ. ಈಗಾದ್ದು ಆಗಾದ್ದು ಎಲ್ಲ ಕಲಸುಮೇಲೋಗರ ಮಾಡಿ ಜಡಿಮಳೆ ಹೊಯ್ದಂತೆ ಮಾತಾಡುತ್ತಲೆ ಇದ್ದಳು.

"ಇರೋ ನಂಬರೆಲ್ಲ ಅವನಿಗೇ ಬರುತ್ತಾ ಮಗೂ?"

"ಅಯ್ಯೋ, ಈ ಅಜ್ಜೀಗೆ ಏನು ಗೊತ್ತೇ ಇಲ್ಲ. ಅವನಿಗೆ ನೂರಕ್ಕೆ ತೊಂಬತ್ತು ನಂಬರು, ಅಜ್ಜೀ."

"ಹಾಗಿರಬೇಕು. ಮಗೂ, ನೀನೂ ಅವನ ಥರಾನೇ ನಂಬರು ತೊಗೋಬೇಕು ನೋಡು..... ನೋಡು ಸ್ವಾಮಿ, ನಿಮ್ಮ ತಾತ ಇದ್ದರಲ್ಲ. ಅವರು ಪರೀಕ್ಷೆಗೆ ಹೋದಾ ಅಂದ್ರೆ ಮೇಷ್ಟರುಗಳಿಗೆಲ್ಲ ಗಾಬರಿಯಾಗುತ್ತಿತ್ತಂತೆ. ಒಂದು ಪ್ರಶ್ನೆ ಹಾಕಿದರೂಂತ ಇಟ್ಟುಕೊ, ಮಿಕ್ಕವರು ಉತ್ತರ ಹೇಳೋದ್ರ ಹತ್ತರಷ್ಟು ಬೇಗ ಅವರು ಉತ್ತರ ಹೇಳಿಬಿಡ್ತಾ



ಇದ್ದರಂತೆ. ಅವರ ಉತ್ತರ ಹೇಗಿರ್ತಾ ಇತ್ತು ಅಂದ್ರೆ ಮೇಷ್ಟರುಗಳು ಒಂದೊಂದು ಸಲ ಇನ್ನೂರು ನಂಬರು ಕೊಡ್ತಾ ಇದ್ದರಂತೆ... ಅವರು ಎಫ್. ಎ. ಪ್ಯಾಸು ಮಾಡಿದಾಗ ಇಪ್ಪಗಲದ ಮೆಡಲು ಬಂದಿತ್ತು. ಎಷ್ಟೋ ವರ್ಷಗಳು ನನ್ನ ಬಂಗಾರದ ಸರಕ್ಕೆ ಅದನ್ನು ಪದಕದ ಹಾಗೆ ಹಾಕ್ಕೊಂಡಿದ್ದೆ. ಅದನ್ನು ಯಾವಾಗ ತೆಗೆದೆ ನಾನು? ಹಾ, ನೋಡಿದ್ಯಾ, ನಿಮ್ಮ ಸೋದರತ್ತೆ ಹುಟ್ಟಿದಾಗ.... ಅಲ್ಲ, ನಿಮ್ಮ ಸೋದರತ್ತೆ ಹುಟ್ಟಿದಾಗಲ್ಲ... ನಿಮ್ಮ ತಂದೆ ಹುಟ್ಟಿದಾಗ ಇರಬೇಕು..... ಈಗ ನೆನಪಿಗೆ ಬಂತು. ಪುರುಡುನೀರಾದ ದಿನ ... ಅಲ್ಲ, ಅಲ್ಲ. ನಾನು ಮೊದಲು ಹೇಳಿದ್ದೇ ಸರಿ. ನಿಮ್ಮ ಸೋದರತ್ತೆ ಹುಟ್ಟಿದಾಗಲೇ. ಈಗೆಲ್ಲಿ ಆ ಮೆಡ್ಲು. ನಿಮ್ಮತ್ತೇಗೆ ಕೊಟ್ಟಿಟ್ಟ ಹಾಗೆ ಜ್ಞಾಪಕ – ಆ. ಅವಳು ಅದನ್ನು ಕರಗಿಸಿ ನಾಲ್ಕು ಬಳೆ ಮಾಡಿಸಿಕೊಂಡ್ಲು. ಅದೂ ಎಷ್ಟು ಅಧ್ವಾನ ಆಗಿತ್ತೂಂತೀ, ಆ ಬಳೆಗಳು! ಅವಳಂಥಾ ಮಂಕುಮೂದೇವಿ ಇದುವರೆಗೂ ನಮ್ಮ ವಂಶದಲ್ಲಿ ಇನ್ನೊಬ್ಬಳು ಹುಟ್ಟಿಲ್ಲ......"

"ಅಯ್ಯೋ, ಅಜ್ಜೀ, ಸಾಕಜ್ಜೀ ನಿನ್ನ ಪುರಾಣ. ಕೆಲಸಕ್ಕೆ ಬಾರದ ನಿನ್ನ ಕತೆ ಕಟ್ಟಿಕೊಂಡು ನಾನೇನು ಮಾಡಿಕೊಳ್ಳಲಿ? ನೀನು ರಾಜಂ ವಿಷಯ ಕೇಳ್ತೀಯೋ ಇಲ್ವೋ?"

"ಹೂ ಆಗಲಿ ಮಗು, ನಿನ್ನಿಷ್ಟದ ಹಾಗೇ ಆಗಲಿ."

"ಅಜ್ಜೀ, ರಾಜಂ ಪುಟ್ಟ ಹುಡುಗನಾಗಿದ್ದಾಗ ಒಂದು ಹುಲೀನ ಕೊಂದುಹಾಕಿದನಂತೆ, ಅಜ್ಜೀ."

"ಅಬ್ಬಾ! ಎಷ್ಟು ಧೈರ್ಯಸ್ಥನಾಗಿರಬೇಕು ಅವ!"

"ಬೇಕುಬೇಕೂಂತ ನನಗೋಸ್ಕರ ನೀನು ಹಾಗೆ ಹೇಳ್ತಾ ಇದ್ದೀಯ. ನಂಗೊತ್ತು. ನೀನಿದೊಂದನ್ನೂ ನಂಬೋದಿಲ್ಲ"

ಸ್ವಾಮಿನಾಥನ್ ಬಹಳ ಜೋರಿಂದ ಕತೆ ಹೇಳತೊಡಗಿದ : "ರಾಜಂ ತಂದೆ ಒಂದು ಸಲ ಒಂದು ಕಾಡಿನಲ್ಲಿ ಕ್ಯಾಂಪು ಮಾಡಿದ್ದರು. ಮಗನನ್ನೂ ಕರೆದುಕೊಂಡು ಹೋಗಿದ್ದರು. ಇದ್ದಕ್ಕಿದ್ದ ಹಾಗೆ ಎರಡು ಭಾರಿ ಪಟ್ಟೆ ಹುಲಿ ಹಿಂದಿನಿಂದ ಬಂತು. ಒಂದು ಅವರಪ್ಪನ ಮೇಲೆ ಬಿದ್ದು ಅವರನ್ನು ನೆಲಕ್ಕೆ ಕೆಡವಿತು. ಇನ್ನೊಂದು ರಾಜಂನ ಅಟ್ಟಿಸಿಕೊಂಡು ಬಂತು. ಅವನು ಓಡಿಹೋಗಿ ಒಂದು ಪೊದೆ ಹಿಂದೆ ಅವಿತುಕೊಂಡದ್ದೇ ಗುರಿಯಿಟ್ಟು ಒಂದು ಗುಂಡು ಹೊಡೆದ ನೋಡು, ಹುಲಿ ರಕ್ತ ಕಾರತಾ ಬಿದ್ದುಬಿಡ್ತು ನೆಲದ ಮೇಲೆ."

ಕತೆ ಮುಗಿಯಿತು.

"ಇದೇನಜ್ಜೀ, ನಿದ್ದೆ ಹೋಗ್ಬಿಟ್ಟಿದ್ದೀಯ?" ಎಂದ ಸ್ವಾಮಿ.

"ಇಲ್ಲ ಕಂದ, ಕೇಳ್ತಾ ಇದ್ದೀನಿ."

"ಹಾಗಾದರೆ ಹೇಳು ನೋಡೋಣ. ಎಷ್ಟು ಹುಲಿ ಬಂದು ಯಾರ ಯಾರ ಮೇಲೆ ಬಿತ್ತು?"

"ರಾಜಂ ಮೇಲೆ ಎರಡೋ ಮೂರೋ ಹುಲಿ ಬಿತ್ತು" ಎಂದಳು ಅಜ್ಜಿ. ಈ ಅಭಾಸ ಕಂಡು ಸ್ವಾಮಿಗೆ ಕೋಪ ಬಂತು. "ಮುಖ್ಯವಾದ ಅನೇಕ ವಿಷಯಾನ ಹೇಳೋಣ ಪಾಪ ಅಂತ ನಾನು ಗಂಟಲು ಒಣಗಿಸಿಕೊಳ್ಳೋದು, ನೀನು ದಿಮಾಕು ಮಾಡಿಕೊಂಡು ನಿದ್ದೆ ಮಾಡಿಬಿಟ್ಟು ತೋಚಿದ ಹಾಗೆಲ್ಲ ಕೂಗೋದು, ಹೋಗಜ್ಜಿ, ಇನ್ನೊಂದು ಮಾತೂ ಹೇಳೊಲ್ಲ ನಿಂಗೆ. ನೀನು ಯಾಕೆ ಲಕ್ಷ್ಯವಿಟ್ಟು ಕೇಳೊಲ್ಲ ಅನ್ನೋದು ನನಗ್ಗೊತ್ತು. ನಿಂಗೆ ರಾಜಂನ ಕಂಡರೆ ತುಂಬ ಹೊಟ್ಟೆಕಿಚ್ಚು !"

"ಛೇ, ರಾಜಂ ಎಷ್ಟು ಮುದ್ದಾದ ಹುಡುಗ! ಅವನ ಮೇಲೆ ನನಗೆ ಏಕಪ್ಪಾ ದ್ವೇಷ?" ಎಂದಳು ಅಜ್ಜಿ. ಒಂದು ದಿನವಾದರೂ ಆಕೆ ರಾಜಂನ ನೋಡಿಯೆ ಇರಲಿಲ್ಲ. ಆದರೆ ಸ್ವಾಮಿ ಮಾತಲ್ಲಿ ನಂಬಿಕೆ ತೋರಿಸಬೇಡವೆ! ಸ್ವಾಮಿಗೆ ಸಂತೋಷವಾಯಿತು. ಆದರೆ ಮರುಕ್ಷಣದಲ್ಲೇ ಅವನಿಗೆ ಮತ್ತೊಂದು ಶಂಕೆ ಉಂಟಾಯಿತು. "ಅಜ್ಜಿ, ಈ ಹುಲಿ ಕತೇನ ನೀನು ನಂಬೋದೇ ಇಲ್ಲ, ಹೋಗಜ್ಜಿ."

"ಇಲ್ಲಾ ಮಗು, ನೀನು ಹೇಳೋ ಒಂದೊಂದು ಮಾತೂ ನಿಜ, ಮಗು" ಎಂದು ಹೇಳಿ ಅಜ್ಜಿ ಮೊಮ್ಮಗನನ್ನು ಸಮಾಧಾನ ಪಡಿಸಿದಳು. ಸ್ವಾಮಿ ಹೇಳಿದ : "ಹುಷಾರಜ್ಜಿ, ಯಾರಾದರೂ ರಾಜಂನ ಸುಳ್ಳುಗಾರ ಅಂದುಗಿಂದ್ರೆ ತಕ್ಷಣ ಅವರನ್ನು ಷೂಟ್ ಮಾಡಿಬಿಡ್ತಾನೆ ಅವನು. ಜೋಕೆ!"

"ಹಾಗೇ ಇರಬೇಕು ಗಂಡು ಮಕ್ಕಳು. ಮಗೂ, ಇನ್ನು ಹರಿಶ್ಚಂದ್ರನ ಕತೆ ಹೇಳ್ತೀನಿ, ಕೇಳು. ತಾನಾಡಿದ ಮಾತು ಉಳಿಸಿಕೊಳ್ಳೋದಕ್ಕಾಗಿ ಅವನು ಮನೆ ಕಳಕೊಂಡ, ಮಠ ಕಳಕೊಂಡ, ಅಷ್ಟೈಶ್ವರ್ಯ ಕಳಕೊಂಡ, ಆಸ್ತಿ ಕಳಕೊಂಡ, ಹೆಂಡತಿ ಕಳಕೊಂಡ, ಮಗನ್ನ ಕಳಕೊಂಡ, ಕೊನೆಗೆ ಎಲ್ಲಾನೂ ಮತ್ತೆ ಪಡಕೊಂಡ" ಎಂದು ಹರಿಶ್ಚಂದ್ರನ ಕತೆ ಹೇಳತೊಡಗಿದಳು. ಆ ವೇಳೆಗೆ ಸ್ವಾಮಿ ಸಣ್ಣ ಗೊರಕೆ ಹೊಡೆಯುತ್ತಿದ್ದ ಸದ್ದು ಆಕೆಗೆ ಕೇಳಿಸಿತು. "ಪಾಪ, ಮಗು ನಿದ್ದೆ ಹೋದ" ಎಂದು ಹೇಳಿ, ದುಪ್ಪಟಿ ಸರಿಯಾಗಿ ಹೊದ್ದಿಸಿ, ದೃಷ್ಟಿ ತೆಗೆದು, ನಟಿಕೆ ಮುರಿದು, ದೇವರ ಸ್ತೋತ್ರ ಹೇಳಿ ತಾನೂ ಮಲಗಿಕೊಂಡಳು.

## ಎರಡು

ಶನಿವಾರ ಮಧ್ಯಾಹ್ನ. ಶನಿವಾರ ಭಾನುವಾರ ಬರುವುದು ಎಷ್ಟೊಂದು ಅಪರೂಪ! ಅಂಥಾದ್ದರಲ್ಲಿ ಆ ದಿನವೆಲ್ಲ ಮನೆಯಲ್ಲೇ ಇದ್ದುಕೊಂಡು ಅಮ್ಮನ ಕೈಲೊ ಅಜ್ಜೀ ಕೈಲೊ ಮಾತನಾಡುವುದು, ಇಲ್ಲದೆ ಹೋದರೆ ಲೆಕ್ಕ ಮಾಡುವುದು – ಹೀಗೆ ಕಾಲ ಪೋಲು ಮಾಡುವುದು ಸರಿಯಲ್ಲವೆಂದು ಸ್ವಾಮಿಯ ಅಭಿಪ್ರಾಯ. ಮಧ್ಯಾಹ್ನ ಮನೆಯಲ್ಲಿ ಇದ್ದು ಲೆಕ್ಕ ಮಾಡಬೇಕೆ ಹೊರತು ಅಲ್ಲಿ ಇಲ್ಲಿ ಅಲೆಯಲು ಹೋಗಕೂಡದು ಎಂದು ಅಪ್ಪ ಕಟ್ಟಪ್ಪಣೆ ಮಾಡಿದ್ದರು.ಆದರೆ ಆ ಅಪ್ಪಣೆಯ ಹಾಗೆ ನಡೆದುಕೊಂಡವರಾರು?

ಸ್ವಾಮಿನಾಥನ್ ತನ್ನ ಕೊಟಡಿಯಲ್ಲಿ ಕಷ್ಟದಿಂದ ಕುಳಿತು, ಇಂಗ್ಲಿಷ್ ರೀಡರಿನಿಂದ ಯಾವುದೋ ಒಂದು ಪದ್ಯದ ಅರ್ಥವನ್ನು ಹೀರುವುದಕ್ಕೆ ಪ್ರಯತ್ನ ಮಾಡುತ್ತಿದ್ದ. ಕನ್ನಡಿ ಮುಂದೆ ನಿಂತು ತಂದೆ ತಲೆಗೆ ರುಮಾಲು ಸುತ್ತುತ್ತಿದ್ದರು. ಸಿಲ್ಕ್‌ಕೋಟು ಹಾಕಿಕೊಂಡದ್ದೂ ಆಯಿತು. ಕನ್ನಡಕವೊಂದೇ ಬಾಕಿ. ಅಪ್ಪನ ಕೆಲಸ ಎಷ್ಟರ ಮಟ್ಟಿಗೆ ಮುಗಿಯಿತು ಎಂಬುದರ ಮೇಲೆಯೆ ಸ್ವಾಮಿಯ ಕಣ್ಣು. ಕನ್ನಡಕವೂ ಮೂಗನ್ನೇರಿತು. ಗಡಿಯಾರವೊಂದೇ ಉಳಿದಿರುವುದು.

ಸ್ವಾಮಿನಾಥನ ಎದೆ ಅರಳಿತು. ಗಡಿಯಾರ ತೆಗೆದುಕೊಂಡ ಮೇಲೆ ತಂದೆ ಕೋರ್ಟಿಗೆ ಹೊರಡುವರು. ಒಂದು ಕೈಯಲ್ಲಿ ಒಂದು ಲೋಟ ನೀರು ಇನ್ನೊಂದು ಕೈಯಲ್ಲಿ ಎಲೆ ಅಡಕೆಯ ತಟ್ಟೆ ಹಿಡಿದುಕೊಂಡು ಅಮ್ಮ ಬಂದಳು. ನೀರು ಕುಡಿದು ವೀಳೆಯಕ್ಕಾಗಿ ಕೈ ನೀಡಿದರು ಅಪ್ಪ. ಆರು ಎಲೆಗಳನ್ನು ಒಪ್ಪವಾಗಿ ಸುತ್ತಿದ ಸುರುಳಿ, ಒಂದಿಷ್ಟು ಅಡಕೆ - ಎರಡನ್ನೂ ಅಮ್ಮ ಕೊಟ್ಟಳು. ಅದಿಷ್ಟನ್ನೂ ಒಂದೇ ಸಲ ಬಾಯಲ್ಲಿ ಹಾಕಿಕೊಂಡು ಅಪ್ಪ ವಿಶೇಷ ತೃಪ್ತಿಯಿಂದ ಅಗಿಯಹತ್ತಿದರು. ಸ್ವಾಮಿನಾಥ ತನ್ನ ಗಂಟಲು ಒಡೆಯುವ ಹಾಗೆ ಕುರಿಯ ಮೇಲಿನ ಪದ್ಯವೊಂದನ್ನು ಗಟ್ಟಿಯಾಗಿ ಒರಲುತ್ತಿದ್ದ. ಬೆಳ್ಳಿಯ ನಶ್ಯದ ಡಬ್ಬಿಗಾಗಿ ಅಪ್ಪ ಆತುರಾತುರವಾಗಿ ಹುಡುಕಿದರು. ಕಡೆಗೆ ಸಿಕ್ಕಿತು. ಡಬ್ಬಿಯನ್ನೂ ತನ್ನ ಚುಕ್ಕಿಚುಕ್ಕಿ ಕೈಚೌಕವನ್ನೂ ಜೇಬಿನಲ್ಲಿ ತುರುಕಿಕೊಂಡರು. ಕೊಳಕು ಅಂದ್ರೆ ಅಷ್ಟು ಕೊಳಕು ಆ ಕೈಚೌಕ. ಆಮೇಲೆ ಛತ್ರಿಯನ್ನು ಕಂಕುಳ ಕೆಳಗೆ ಸಿಕ್ಕಿಸಿಕೊಂಡರು. ಹೊರಡುವುದಕ್ಕೆ ಇದೇ ಸಂಕೇತ. ಸ್ವಾಮಿನಾಥನ್ ಇನ್ನೇನು ಪುಸ್ತಕ ಮುಚ್ಚಿ ಎದ್ದುಬಿಡಬೇಕು, ಅಪ್ಪ ಹೊರಟುಬಿಡಬೇಕು, ಅಷ್ಟರಲ್ಲಿ ಅಮ್ಮ ಅವರನ್ನು ತಡೆದು, "ಸ್ವಲ್ಪ ತಡೀರೀಂದ್ರೆ, ನನಗೊಂದು ಸ್ವಲ್ಪ ದುಡ್ಡು ಬೇಕು. ಆ ದರ್ಜಿಯವನು ಬರ್‍ತಾನಂತೆ. ನಾಲ್ಕು ದಿನದಿಂದ ಬಂದು ಪೀಡಿಸ್ತಾ ಇದ್ದಾನೆ" ಎಂದಳು.

"ನಾಳೆ ಬಾ ಅಂತ ಹೇಳು" ಎಂದರು ಅಪ್ಪ. "ಅದು ಸಾಧ್ಯವಿಲ್ಲ" ಎಂದು ಅಮ್ಮ ಹಟಹಿಡಿದಳು. ಅಪ್ಪ ಬೀರು ಹತ್ತಿರ ಹೋಗಿ ಬೀಗದ ಕೈ ಗೊಂಚಲಿಗೆ ತಡಕಾಡಿ, ಬಾಗಿಲು ತೆಗೆದು, ಒಂದು ಸಣ್ಣ ಚೀಲದಿಂದ ಒಂದಷ್ಟು ದುಡ್ಡು ತೆಗೆದುಕೊಟ್ಟರು. ಚೀಲದಲ್ಲಿ ಇಣಿಕಿಣಿಕಿ ನೋಡಿ "ಇನ್ನು ಈ ತಿಂಗಳೆಲ್ಲ ಹೇಗೆ ನಿಭಾಯಿಸೋದೋ ನಾ ಬೇರೆ ಕಾಣೆ" ಎಂದು ಹೇಳಿ, ಮತ್ತೆ ಬೀರು ಬೀಗಹಾಕಿ, ಕನ್ನಡಿ ಮುಂದೆ ಹೋಗಿ ರುಮಾಲು ಸರಿಮಾಡಿಕೊಂಡು, ದೊಡ್ಡ ಚಿಟಿಕೆ ನಶ್ಯ ಏರಿಸಿ, ಕೈಚೌಕದಿಂದ ಮೂಗು ಒರಸಿಕೊಂಡು, ಕಡೆಗೂ ಹೊರಟರು. ಮನೆಯೆಲ್ಲ ಕೇಳಿಸುವ ಹಾಗೆ ಸ್ವಾಮಿ ನಿಟ್ಟುಸಿರುಬಿಟ್ಟ. "ಚಿಲಕ ಹಾಕ್ಕೋ" - ರಸ್ತೆಯಿಂದ ಅಪ್ಪನ ಗಂಟಲು ಕೇಳಿಸಿತು. ಅಮ್ಮ ಚಿಲಕ ಹಾಕಿದ ಸದ್ದು ಕೇಳಿಸಿತು. ಸ್ವಾಮಿ ಕಿಟಕಿ ಹತ್ತಿರ ಹೋಗಿ ಅಪ್ಪ ಹೋಗುವುದನ್ನೇ ನೋಡುತ್ತಿದ್ದ. ಅವರು ಮೂಲೆ ತಿರುಗಿದ ಮೇಲೆ ಕಿಟಕಿಯಿಂದ ಎದ್ದ.

ಮಧ್ಯಾಹ್ನ ಏನು ತಿಂಡಿ ಮಾಡಬೇಕು ಎಂದು ಅಡಿಗೆಯವನಿಗೆ ಅಪ್ಪಣೆ ಕೊಡುತ್ತಿದ್ದಳು ಅಮ್ಮ. ಅಜ್ಜಿ ಹಾಸಿಗೆ ಹಾಸಿಕೊಂಡು ಕುಳಿತಿದ್ದಳು. ಸ್ವಾಮಿಯನ್ನು ಕಂಡ

ಕೂಡಲೆ "ಇಲ್ಲಿ ಬಾ, ಮಗೂ" ಅಂತ ಕರೆದಳು.

"ಇಲ್ಲ, ಈಗ ನನಗೆ ಪುರಸತ್ತಿಲ್ಲ."

"ನೋಡಿದೆಯಾ? ಬಾಪ್ಪ, ಮೂರು ಕಾಸು ಕೊಡ್ತೀನಿ" ಎಂದಳು ಅಜ್ಜಿ. ಈ ದಾನೋಪಾಯಕ್ಕೂ ಜಗ್ಗದೆ ಸ್ವಾಮಿ ಮುಂದೆ ಹೊರಟ.

"ಎಲ್ಲಿಗೋ ಹೋಗೋದು ಇಷ್ಟೊತ್ತಿನಲ್ಲಿ?" ಎಂದು ಅಮ್ಮ ಗದರಿಸಿಕೊಂಡಳು.

"ಹೋಗಬೇಕಾಗಿದೆ, ಹೋಗ್ತಿದೀನಿ."

"ಏನು, ಈ ಉರಿಬಿಸಿಲು ಹಾಳಾಗಿ ಹೋಗ್ತಾ ಇದೆ ಅಂತ ಅಲೆದಾಡೋಕೆ ಹೋಗ್ತಾ ಇದೀಯಾ?"

"ಏನಿಲ್ಲ" ಎಂದು ಮೊಟಕಾಗಿ ಸ್ವಾಮಿ ಉತ್ತರ ಕೊಟ್ಟ.

"ಚೆನ್ನಾಗಿ ಅಲೆದು, ಕಾಯಿಲೆ ತಂದುಕೊಳ್ಳೋಕೋ?"

"ಇಲ್ಲಾಮ್ಮ, ಬಿಸಿಲಲ್ಲಿ ಅಲೆಯೋಲ್ಲಾಮ್ಮ."

"ರಜ ಬಂದರೆ ಮನೇಲೆ ಇರಬೇಕೂಂತ ಹೇಳಿಲ್ಲವೇನೋ ನಿಮ್ಮ ತಂದೆ?"

"ಆದರೆ ನಮ್ಮ ಡ್ರಾಯಿಂಗ್ ಮೇಷ್ಟರು ಶನಿವಾರ ಮಧ್ಯಾಹ್ನ ಮನೆಗೆ ಬಾ ಅಂದಿದ್ದಾರೆ. ಆಗಲೂ ಹೋಗಕೂಡದೇನೋ? ಡ್ರಾಯಿಂಗ್ ಪರೀಕ್ಷೇಲಿ ನನಗೆ ತೋಪಡ ಆದರೆ ನಿಮಗೆ ತುಂಬಾ ಸಂತೋಷವೇನೋ?"

## ಮೂರು

ದಡದಡಾಂತ ಸ್ವಾಮಿ ಓಡಿ, ಮಾವಿನ ತೋಪಿನ ರೋಡಿನಲ್ಲಿ ಅಷ್ಟು ದೂರ ಹೋಗಿ, ಬಲಗಡೆ ತಿರುಗಿಕೊಂಡು, ಆಬು ಓಣಿಯಲ್ಲಿ, ತಗ್ಗಾದ ನಾಡುಹೆಂಚಿನ ಕೊಳಕು ಮನೆಯ ಮುಂದೆ ನಿಂತು ಮೆಲ್ಲಗೆ ಸಿಳ್ಳು ಹಾಕಿದ. ಒಂದು ಕ್ಷಣ ಕಾದು ಇನ್ನೊಂದು ಸಿಳ್ಳು ಹಾಕಿದ. ಬಾಗಿಲಿನ ಸರಪಣಿ ಸದ್ದಾಯಿತು. ಬಾಗಿಲು ಸ್ವಲ್ಪ ತೆರೆಯಿತು, ಮಣಿಯ ತಲೆ ಹೊರಗೆ ಕಾಣಿಸಿಕೊಂಡಿತು. "ಲೋ ಪೆದ್ದಂಭಟ್ಟ, ನಮ್ಮ ದೊಡ್ಡಮ್ಮ ಇಲ್ಲೇ ಇದಾರೋ, ಒಳಗೆ ಬರಬೇಡ. ರಸ್ತೆ ತಿರುವಿನ ಮೂಲೇ ಹತ್ತಿರ ಕಾಯ್ತಾ ಇರು, ಬಂದುಬಿಟ್ಟೆ" ಎಂದ ಮಣಿ.

ಸ್ವಾಮಿ ತಿರುವಿನ ಹತ್ತಿರ ಹೋಗಿ ಕಾಯುತ್ತ ನಿಂತ. ಬಿಸಿಲು ಜೋರಾಗಿತ್ತು. ರಸ್ತೆಯಲ್ಲಿ ಒಬ್ಬರೂ ಇಲ್ಲದೆ ಬಿಮ್ಮೆನ್ನುತ್ತಿತ್ತು. ಚರಂಡಿ ಪಕ್ಕದಲ್ಲಿ ಒಂದು ಕತ್ತೆ ತನ್ನ ನೆರಳನ್ನೆ ಎವೆಯಿಕ್ಕದೆ ನೋಡುತ್ತಿತ್ತು. ಹಸುವೊಂದು ಅಗಲವಾದ ಹಸುರು ಬಾಳೆಯೆಲೆ ಮೇಯುತ್ತಿತ್ತು. ಕೊಂಚ ಹೊತ್ತಿನಲ್ಲೇ ಮಣಿ ಮನೆಯಿಂದ ನುಸುಳಿಬಂದ.

ರಾಜಂ ಮನೆ ಇರೋದು ಲಾಲೀ ಎಕ್ಸ್‌ಟೆನ್‌ಷನ್‌ನಲ್ಲಿ. ಮಾಲ್ಗುಡಿ ಸರ್ಕಲ್‌ಗೆ ಹಿಂದೆ ಸರ್ ಫ್ರೆಡರಿಕ್ ಲಾಲೀ ಎಂಬುವರು ಸೂಪರಿಂಟೆಂಡಿಂಗ್ ಎಂಜಿನಿಯರ್



ಆಗಿದ್ದರು. ಅವರ ಹೆಸರಿನಲ್ಲಿ ಈ ಬಡಾವಣೆ ಕಟ್ಟಿದ್ದರು. ಅಲ್ಲಿ ಐವತ್ತು ದೊಡ್ಡ ಬಂಗಲೆಗಳಿದ್ದುವು. ಎಲ್ಲದರಲ್ಲೂ ಸರಕಾರೀ ಅಧಿಕಾರಿಗಳೇ ಇದ್ದರು. ತಿರುಚನಾಪಳ್ಳಿಗೆ ಹೋಗುವ ದೊಡ್ಡ ರಸ್ತೆ ಅಲ್ಲಿಂದ ಹತ್ತು ಮಾರು ದೂರದಲ್ಲೇ ಕಾಣುವುದು.

ಸ್ವಾಮಿ, ಮಣಿ ಇಬ್ಬರೂ ರಾಜಂ ಮನೆಯ ಗೇಟು ತೆಗೆದು ಒಳಕ್ಕೆ ಬಂದರು. ಅದನ್ನು ನೋಡಿ ಕಾಕಿ ಬಟ್ಟೆಯ ಪೋಲೀಸಿನವನೊಬ್ಬನು "ಲೋ, ನಿಂತುಕೊಳ್ರೋ" ಅಂತ ಕೂಗು ಹಾಕಿ, ಇವರ ಕಡೆಯೇ ಓಡಿ ಬಂದ. ಓಡಿಹೋಗೋಣಾಪ್ಪಾ ಎನ್ನಿಸಿತು ಸ್ವಾಮಿಗೆ. "ಲೋ ಮಣಿ, ನೀನೇ ಮಾತಾಡೋ ಆ ಪೊಲೀಸಿನವನ ಜೊತೇಲಿ" ಎಂದ. ಮಣಿಗೂ ಒಳಗೆ ಅಂಜಿಕೆ. ಹೊರಗೆ ಅದನ್ನು ತೋರಿಸಿಕೊಳ್ಳದೆ ಗತ್ತಿನಿಂದ ಹೇಳಿದ : "ರಾಜಂ ಮನೇಲಿದ್ದರೆ ಅವನಿಗೆ ಹೇಳು, ನಾವು ಬಂದಿದ್ದೀವಿ ಅಂತ." ಪೊಲೀಸಿನವನು

ತಕ್ಷಣ ಮೆತ್ತಗಾದ. ಬಹಳ ವಿನಯದಿಂದ ಇಬ್ಬರನ್ನೂ ರಾಜಂ ಕೊಟಡಿಗೆ ಕರೆದುಕೊಂಡು ಹೋದ.

ಕೋಣೆ ಬಹಳ ದೊಡ್ಡದು ಎಂದುಕೊಂಡರು ಇಬ್ಬರೂ. ಐದಾರು ಕುರ್ಚಿ ಇದ್ದುವು. ನಿಜವಾದ ಕುರ್ಚಿ. ದೊಡ್ಡ ಮೇಜು. ಅದರ ಮೇಲೆ ರಾಜಂನ ಪುಸ್ತಕವನ್ನೆಲ್ಲ ಸಾಲಾಗಿ ಅಂದವಾಗಿ ಜೋಡಿಸಿದೆ. ಎಲ್ಲಕ್ಕಿಂತ ಅವರ ಮನಸ್ಸಿಗೆ ಆಶ್ಚರ್ಯವೆಂದರೆ ಮೇಜಿನ ಮೇಲಿದ್ದ ಗಡಿಯಾರ, ಇಷ್ಟು ಚಿಕ್ಕವನಿಗೆ ಒಂದು ಗಡಿಯಾರವೆ! ಎಂಥವರಿರಬೇಕು ಅವರ ತಂದೆ!

ಕೊಂಚ ಹೊತ್ತಾದ ಮೇಲೆ ರಾಜಂ ಬಂದ. ಸ್ನೇಹಿತರು ತನಗಾಗಿ ಕಾಯುತ್ತಿರುವುದು ಅವನಿಗೆ ಗೊತ್ತು. ಆದರೂ ಒಂದೆರಡು ನಿಮಿಷ ಕಾಯಿಸೋಣವೆಂದುಕೊಂಡ. ತನ್ನ ತಂದೆಯೂ ಹಾಗೆಯೆ ಮಾಡುತ್ತಿರಲಿಲ್ಲವೆ? ಆದ್ದರಿಂದ ಉಗುರು ಕಚ್ಚುತ್ತಾ ಪಕ್ಕದ ಕೋಣೆಯಲ್ಲಿ ಮೂರು ನಿಮಿಷ ನಿಂತಿದ್ದ. ಅನಂತರ ತಡೆಯುವುದಕ್ಕಾಗಲಿಲ್ಲ ಕೋಣೆಯೊಳಕ್ಕೆ ಹಾರಿಬಂದ.

ಸ್ವಾಮಿ ಮಣಿ ಎದ್ದು ನಿಂತುಕೊಂಡರು. "ಕೂತುಕೊಳ್ರಯ್ಯಾ, ಕೂತುಕೊಳ್ಳಿ" ಎಂದ ರಾಜಂ.

ಕೊಂಚಹೊತ್ತಿನಲ್ಲೇ ಹರಟೆಕೊಚ್ಚಲು ಆರಂಭಿಸಿದರು. ಮೇಷ್ಟ್ರುಗಳು, ಕ್ಲಾಸ್ ಹುಡುಗರು, ತಂದೆ, ತಾಯಿ, ಆಟಪಾಟ, ಎಲ್ಲ....

ಇಬ್ಬರು ಸ್ನೇಹಿತರನ್ನೂ ರಾಜಂ ಒಂದು ಬೀರುವಿನ ಹತ್ತಿರ ಕರೆದು ಕೊಂಡು ಹೋಗಿ ಬೀರುವನ್ನು ಅಗಲವಾಗಿ ತೆರೆದ. ಅಬ್ಬಾ! ಏನೇನು ಸಾಮಾನು! ಚಿಕ್ಕ ಚಿಕ್ಕ ರೈಲುಗಳು, ಮೋಟಾರುಗಳು, ಮೆಕ್ಯಾನೋ ಪೆಟ್ಟಿಗೆ, ಸಿನಿಮಾ ಬಿಡುವ ಯಂತ್ರ, ಧಂಡಿಯಾಗಿ ಬಣ್ಣಬಣ್ಣದ ಬೊಂಬೆ ಪುಸ್ತಕಗಳು - ಇನ್ನೂ ಏನೇನೋ. ಮೂಲೆಯಲ್ಲೊಂದು ಕರೀ ಬಂದೂಕವಿತ್ತು. ಮಣಿಯ ಕಣ್ಣೆಲ್ಲ ಅದರ ಮೇಲೆಯೇ. ಯಾವುದನ್ನು ಬೇಕಾದರೂ ತೆಗೆದುಕೊಂಡು ನೋಡಲು ರಾಜಂ ಅಪ್ಪಣೆ ಕೊಟ್ಟ. ಹತ್ತು ನಿಮಿಷದಲ್ಲಿ ಸ್ವಾಮಿನಾಥನ್ ಒಂದು ಇಂಜನ್ನಿಗೆ ಕೀಲುಕೊಟ್ಟು ಕೋಣೆಯಲ್ಲೆಲ್ಲ ಆಡಿಸುತ್ತಿದ್ದ. ಮಣಿ ಒಂದು ಬಿಲ್ಲು ತೆಗೆದುಕೊಂಡು ಎದುರುಗಡೆಯ ಗೋಡೆಗೆ ಬಾಣದ ಮೇಲೆ ಬಾಣ ಬಿಟ್ಟ. ಅದು ಬೇಜಾರಾದ ಮೇಲೆ ಬಂದೂಕದಿಂದ ಕುರ್ಚಿ ಮೇಜು ಎಲ್ಲ ಕಡೆಯೂ ಗುರಿಯಿಟ್ಟು 'ಗುಂಡು' ಹೊಡೆಯುತ್ತಿದ್ದ.

"ಲ್ರೋ, ನಿಮಗ್ಯಾರಿಗಾದ್ರೂ ಹಸಿವಾಗುತ್ತೇನ್ರೋ?" ಎಂದು ಕೇಳಿದ ರಾಜಂ.

"ಇಲ್ಲ" ಅರೆಮನಸ್ಸಿನಿಂದ ಹೇಳಿದರು ಅವರು.

"ಹೇಯ್" ಎಂದು ಕೂಗಿದ ರಾಜಂ. ಒಬ್ಬ ಪೋಲೀಸಿನವನು ಬಂದ.

"ಮೂರು ಜನಕ್ಕೆ ಕಾಫಿ ತಿಂಡಿ ಬೇಕೂಂತ ಅಡಿಗೆಯವನಿಗೆ ಹೇಳು ಹೋಗು." ಪೋಲೀಸಿನವನನ್ನು ಎಷ್ಟು ದರ್ಪದಿಂದ, ಎಷ್ಟು ಸರಾಗವಾಗಿ ಮಾತನಾಡಿಸುತ್ತಾನೆ ಎಂದು ಇವರಿಬ್ಬರಿಗೂ ಬಹಳ ಆಶ್ಚರ್ಯ.

ಅಡಿಗೆಯವನು ಒಂದು ದೊಡ್ಡ ತಟ್ಟೆ ತುಂಬ ತಿಂಡಿ ತಂದು ಮೇಜಿನ ಮೇಲಿಟ್ಟ. ತನ್ನ ಅಧಿಕಾರದರ್ಪ ಪ್ರದರ್ಶಿಸಬೇಕೆನ್ನಿಸಿತು ರಾಜಂಗೆ.

"ಮೇಜಿಂದ ತೆಗೆಯೋ ಆ ತಟ್ಟೇನ - " ಎಂದು ಗರ್ಜಿಸಿದ. ಅಡಿಗೆಯವನು ಮೇಜಿಂದ ತಟ್ಟೆಯನ್ನು ತೆಗೆದು ಕುರ್ಚಿ ಮೇಲಿಟ್ಟ.

"ಕತ್ತೆ, ಎತ್ತೋ, ಅಲ್ಲಿಡಬೇಡ."

"ಹಾಗಾದರೆ ಎಲ್ಲಿಡಬೇಕು ರಾಜು?" ಎಂದ ಅಡಿಗೆಯವನು.

"ಎದುರು ಜವಾಬು ಕೊಡ್ತೀಯ, ಭಡವ" ಎಂದು ರಾಜಂ ರೇಗಾಡಿದ.

ಅಡಿಗೆಯವನು ಸೊಟ್ಟಮೂತಿ ಮಾಡಿಕೊಡು ಏನೋ ಗೊಣಗುಟ್ಟಿಕೊಂಡ.

"ಮೇಜಿನ ಮೇಲಿಡು" ಎಂದು ರಾಜಂನ ಅಪ್ಪಣೆ ಬಂತು. ಅಡಿಗೆಯವ ಹಾಗೆಯೇ ಮಾಡಿ, "ನೀನು ಒರಟು ಮಾತಾಡಿದರೆ ನಿಮ್ಮ ತಾಯಿಗೆ ಹೇಳ್ತೀನಿ ನೋಡು" ಎಂದ.

"ಏನು ಬೇಕಾದರೂ ಮಾಡಿಕೋ, ನನಗೇನು?" ಎಂದ ರಾಜಂ.

ಒಂದು ಬಟ್ಟಲು ಕೈಗೆ ತೆಗೆದುಕೊಂಡು ಪರೀಕ್ಷಿಸಿ, "ಎಷ್ಟು ಕೊಳಕು! ಥೂ ಕತ್ತೆ. ಲೋಟ ತೊಳೆಯೋಕೆ ಮೈಗಳ್ಳತನ" ಎಂದು ಬೈದ. ಅಡಿಗೆಯವನು ಒಂದು ಕ್ಷಣ ರಾಜಂ ಕಡೆ ನೋಡಿ ತಟ್ಟೆಯೆತ್ತಿಕೊಂಡು, "ಬೇಕಾದರೆ ಅಡಿಗೆಮನೆಗೇ ಬಂದು ತಿಂದುಕೊಂಡು ಹೋಗು" ಎಂದು ಹೇಳಿ ಹೊರಟೇ ಹೋದ.

ಸ್ವಾಮಿನಾಥನ್‌ಗೂ ಮಣಿಗೂ ತುಂಬ ಪೆಚ್ಚಾಯಿತು. ಆಗಲೇ ಅವರ ಬಾಯಲ್ಲಿ ನೀರೂರಿಬಿಟ್ಟಿತ್ತು. ರಾಜಂಗೆ ಇನ್ನು ತಡೆಯುವುದಕ್ಕಾಗಲಿಲ್ಲ. ಏನು! ಸ್ನೇಹಿತರ ಮುಂದೆ ಆಳುಗಳ ಕೈಯಲ್ಲಿ ಅನ್ನಿಸಿಕೊಳ್ಳುವುದೇ? ಮೂರು ನಾಲ್ಕು ನಿಮಿಷ ಸುಮ್ಮನೆ ಕುಳಿತು, ಬಲವಂತದ ನಗುವೊಂದನ್ನು ನಕ್ಕು, "ಅಯೋಗ್ಯ..... ನಮ್ಮನೇ ಅಡಿಗೇವನಿಗೆ ಬುದ್ಧಿ ಸ್ವಲ್ಪ ಹಾಗೆಹಾಗೇನೆ. ಒಂದು ನಿಮಿಷ ತಡೀರಿ" ಎನ್ನುತ್ತಾ ಒಳಕ್ಕೆ ಹೋದ.

ಸ್ವಲ್ಪ ವೇಳೆಯಾದ ಮೇಲೆ ತಾನೇ ತಟ್ಟೆ ತೆಗೆದುಕೊಂಡು ಹಿಂದಿರುಗಿದ. ಈ ಅಪಜಯದ ಚಿಹ್ನೆಯನ್ನು ಕಂಡು ಗೆಳೆಯರಿಗೆ ಆಶ್ಚರ್ಯವಾಯಿತು. ಕೊನೆಗೂ ಅಡಿಗೆಯವನನ್ನು ಅಡಗಿಸುವುದಕ್ಕೆ ಆಗಲಿಲ್ಲ ಇವನ ಕೈಲಿ? ನೆಟ್ಟಗೆ ಹೋಗಿ ರಾಜಂ ಏತಕ್ಕೆ ಅಡಿಗೆಯವನನ್ನು ಷೂಟ್‌ಮಾಡಿ ಕೊಂದುಬಿಡಲಿಲ್ಲ ಎಂದು ಸ್ವಾಮಿಗೆ ಎನಿಸಿತು. "ಲೋ, ಬಿಡೋ ನಾನು ತೋರಿಸ್ತೀನಿ ಅವನಿಗೆ" ಎಂದು ಮಣಿ ಹಾರಾಡಿದ. ಆದರೆ ರಾಜಂ ಇಬ್ಬರಿಗೂ ಸಮಾಧಾನವಾಗುವಂಥ ಸಮಾಚಾರ ಹೇಳಿದ: "ನೋಡ್ರೋ ಈ ತಟ್ಟೇನ ನಾನೇ ಏಕೆ ತರಬೇಕಾಯ್ತು ಗೊತ್ತೇ? ಅಡಿಗೆಮನೆಗೆ ಹೋಗಿ ಆ ಅಡಿಗೇವನಿಗೆ ಅವನ ತಲೆಹರಟೆಗಾಗಿ ಒಂದು ವತ್ತ ಒದ್ದೆನೋಡು, ಮೂರ್ಛೆಹೋಗಿ ಬಿದ್ದು ಬಿಟ್ಟಿದ್ದಾನೆ ಅಲ್ಲೆ."

## ಬಾಲ ಎಂದರೆ ಏನು?

ಭೂಗೋಳದ ಮೇಷ್ಟರು ರಜ ತೆಗೆದುಕೊಂಡಿದ್ದರು. ಫಸ್ಟ್ 'ಎ'ಗೆ ಬುಧವಾರದ ದಿನ ಮೂರುಮುಕ್ಕಾಲರ ವರೆಗೆ ರಜ.

ಸ್ವಾಮಿಯ ಸ್ನೇಹಿತರೆಲ್ಲ ಎಲ್ಲೂ ಕಾಣಿಸಲಿಲ್ಲ. ಅವನೊಬ್ಬನೇ ಇದ್ದ. ಶಿಶುವಿಹಾರದ ವರಾಂಡದಲ್ಲಿ ಒಬ್ಬಂಟಿಯಾಗಿ ಅಡ್ಡಾಡುತ್ತಿದ್ದ. ನಾಲ್ಕಡಿಗಿಂತ ಕಡಿಮೆ ಅವನ ಎತ್ತರ. ಆದರೂ ಶಿಶುವಿಹಾರದ ಮಕ್ಕಳು ಶುದ್ಧ ಮೋಟು ಮೆಣಸಿನಕಾಯಿಗಳು ಎನಿಸಿತು ಅವನಿಗೆ. ಅವರಿಗಿಂತ ತಾನು ತುಂಬ ಹಿರಿಯ ಎಂದುಕೊಂಡ. ಆ ಮಕ್ಕಳೆಲ್ಲ ಜೇಡಿಮಣ್ಣಿನಲ್ಲಿ ಅದು ಇದು ಸಾಮಾನು ಮಾಡುತ್ತಿದ್ದರು. ಇದಕ್ಕಾಗಿ ಸ್ಕೂಲಿಗೆ ಬರಬೇಕೇ ಎಂದು ಸ್ವಾಮಿಯ ಅಭಿಪ್ರಾಯ. ಈ ಆನೆಗಳು, ಈ ಮಾವಿನಹಣ್ಣುಗಳು ಇವನ್ನೆಲ್ಲ ತಮ್ಮ ತಮ್ಮ ಮನೆ ಹಿತ್ತಿಲಲ್ಲೆ ಮಾಡುವುದಕ್ಕೆ ಆಗದೆ? ಅದಕ್ಕಾಗಿ ಇಷ್ಟು ದೂರ ಬರಬೇಕೆ ಈ ತರಹ ದೊಡ್ಡ ದೊಡ್ಡ ವಿಷಯ ಪಾಠಹೇಳುವುದಕ್ಕೆ?

ಒಂದು ತರಗತಿಯಲ್ಲಿ ಎಲ್ಲ ಮಕ್ಕಳೂ ಅ ಆ ಇ ಈ ಉರುಹಾಕುತ್ತಾ ಇದ್ದರು. ಸ್ವಾಮಿ ತನ್ನ ಕಿವಿ ಮುಚ್ಚಿಕೊಂಡು, ಮೇಷ್ಟರು ಈ ಗಲಾಟೆಯನ್ನು ಹೇಗೆ ಸಹಿಸುತ್ತಾರೋ ಎಂದುಕೊಂಡ. ಮುಂದೆ ಹೋದ. ಇನ್ನೊಂದು ತರಗತಿಯ ತುಂಬ ಕೊಳಕುಬಟ್ಟೆ ಹಾಕಿಕೊಂಡ ಮಕ್ಕಳು ಬೆಂಚಿನ ಮೇಲೆ ಕುಳಿತುಕೊಂಡು ಕಾಲು ಅಲ್ಲಾಡಿಸುತ್ತಾ ಹೆಂಚೇ ಕಿತ್ತುಹೋಗುವಷ್ಟು ಗಲಾಟೆ ಮಾಡುತ್ತಿದ್ದರು. ಅಲ್ಲಿನ ಮೇಷ್ಟರು ತನ್ನ ಮುಖಭಂಗಿಯನ್ನು ನೋಡಿಯಾದರೂ ಹುಡುಗರನ್ನು ಹತೋಟಿಗೆ ತರಲಿ ಎಂದು ಆ ತರಗತಿಯ ಮುಂದೆ ಹೋಗುವಾಗ ಸ್ವಾಮಿ ಹುಬ್ಬುಗಂಟು ಹಾಕಿ ಮುಖ ಸೊಟ್ಟಗೆ ಮಾಡಿಕೊಂಡ. ಆದರೆ ಮೇಷ್ಟರು ಬಾಗಿಲು ಕಡೆಗೆ ಬೆನ್ನು ಮಾಡಿಕೊಂಡು ಕುಳಿತುಬಿಟ್ಟಿದ್ದರು ದುರದೃಷ್ಟಕ್ಕೆ!

ಹೆಚ್ಚಿನ ತರಗತಿಗಳೆಲ್ಲ ಮಹಡಿಯ ಮೇಲಿದ್ದುವು. ಆ ಕ್ಲಾಸುಗಳಿಗೆ ಹೋಗಬೇಕೆಂದು ಸ್ವಾಮಿ ಹಾತೊರೆಯುತ್ತಿದ್ದ. ಅವು ಹೇಗಿದೆಯೋ ನೋಡಿಕೊಂಡು ಬರಬೇಕೆಂಬ ಆಸೆಯಿಂದ ಹಂತದ ಬಳಿ ಹೋದ. ಎರಡು ಮೂರು ಮೆಟ್ಟಿಲು ಹತ್ತಿದವನು ಮನಸ್ಸನ್ನೇ ಬದಲಾಯಿಸಿದ. ಅಲ್ಲಿ ಹೆಡ್‌ಮೇಷ್ಟರಿದ್ದರೆ? ಅವರು ಕ್ಲಾಸ್ ತೆಗೆದುಕೊಳ್ಳುವ ರೂಢಿ. ಅಲ್ಲಿನ ಮೇಷ್ಟರೂ ತುಂಬ ಕೋಪಿಷ್ಟರು. ಹುಡುಗರಂತೂ ತೀರ ತುಂಟರು. ದೂರದಲ್ಲಿ ಯಾರದೋ ಚಪ್ಪಲಿಗಳ ಕರ್ ಕರ್ ಸದ್ದು ಕೇಳಿಸಿತು. ಓ, ಅದು ಹೆಡ್‌ಮೇಷ್ಟ್ರೇ. ಇಲ್ಲಿರುವುದು ಬೇಡಪ್ಪ. ಅವರ ಕೈಗೆ ಸಿಕ್ಕಿಕೊಂಡರೆ ಅವರು ಕೇಳಿದ ಪ್ರಶ್ನೆಗೆಲ್ಲ ಉತ್ತರ

ಅರೆ! ಅಷ್ಟರಲ್ಲಿ ತನ್ನ ಗುಂಪಿನವರೇ ಕಾಣಿಸಿದರು. ಎಲ್ಲೂ ಹೋಗಿರಲಿಲ್ಲ, ಹಾಗಾದರೆ? ರಾಜಂ, ಮಣಿ ಇಬ್ಬರ ಹೊರತು ಮಿಕ್ಕಾದವರೆಲ್ಲ ಆ ದೊಡ್ಡ ಹುಣಸೇಮರದಡಿ ಯಾವುದೋ ಆಟ ಆಡುತ್ತಿದ್ದರು. "ಲಗಾವ್" ಎಂದು ಕೂಗಿಕೊಂಡು ಸ್ವಾಮಿಯು ಓಡಿ ಓಡಿ ಅವರ ಜೊತೆಯಲ್ಲಿ ಸೇರಿಕೊಂಡ. ಒಬ್ಬರಾದರೂ ಇವನ ಕಡೆ ನೋಡಲಿಲ್ಲ. ತಮ್ಮ ಪಾಡಿಗೆ ತಾವು ಆಡುತ್ತಾ ಇದ್ದುಬಿಟ್ಟರು. ಯಾವಾಗಲೂ ಸಲಿಗೆಯಿಂದ ಇರುತ್ತಿದ್ದ ಸೋಮು ಕೂಡ ಸಿಂಡರಿಸಿಕೊಂಡಿದ್ದ. ಎಲ್ಲೋ ಏನೋ ಯಾರದೋ ತಪ್ಪಿರಬೇಕು. ಇದೊಂದನ್ನೂ ತೋರಿಸಿಕೊಳ್ಳದಂತೆ ಸ್ವಾಮಿ ಕೇಳಿದ : "ನನ್ನೂ ಸೇರಿಸಿಕೊಳ್ತೀರೇನೋ?" ಎಂದು. ಯಾರೂ ಉತ್ತರ ಕೊಡಲಿಲ್ಲ. ಒಂದು ನಿಮಿಷ ಸುಮ್ಮನಿದ್ದು ಸ್ವಾಮಿ ಮತ್ತೆ ಕೇಳಿದ.

"ಸಾಧ್ಯವಿಲ್ಲ, ಹೆಚ್ಚು ಜನಾನ ತೊಗೊಳ್ಳೋಕೆ ಆಗೊಲ್ಲ" ಎಂದು ಶಂಕರ ಮನಸ್ಸು ಮುರಿದಂತೆ ಹೇಳಿಬಿಟ್ಟ.

"ಕೆಲವರು ಇದ್ದಾರೆ. ಅವರು ಬಾಲ ಆಗಿರೋದರಲ್ಲಿ ಬಲು ಗಟ್ಟಿಗರು" ಎಂದ ಬಟಾಣಿ. ಎಲ್ಲರೂ ಗಟ್ಟಿಯಾಗಿ ನಕ್ಕರು.

"ಬಾಲ ಅಂದೆ ಅಲ್ಲವೆ? ಅದ್ಯಾಕೆ ನಿನಗೀಗ ಬಾಲದ ಯೋಚನೆ ಬಂತು?" ಎಂದು ಕೇಳಿದ ಶಂಕರ.

"ನನ್ನಿಷ್ಟ ನಿನಗೇನಂತೆ. ಇಷ್ಟಕ್ಕೂ ನೀನೇನೂ ಬಾಲ ಅಲ್ಲವಲ್ಲ" ಎಂದ ಬಟಾಣಿ.

"ಹಾಗಾದರೆ ಈಗ ಇಲ್ಲಿರುವವರಲ್ಲಿ ಬಾಲ ಆಗಿರುವವರು ಯಾರೋ ಇದ್ದಾರೇ ಅನ್ನು."

"ಇದ್ದರೂ ಇರಬಹುದು."

"ಬಾಲ ಅಂದರೆ ಏನು?"

"ಬಾಲ ಅಂದರೆ ಕತ್ತೆ ಬೆನ್ನಿಗೋ ನಾಯಿ ಬೆನ್ನಿಗೋ ಅಂಟಿಕೊಂಡಿರುತ್ತಲ್ಲ ಉದ್ದಕ್ಕೆ, ಪರಕೇ ಹಾಗೆ, ಅದು."

ಸ್ವಾಮಿನಾಥನಿಗೆ ಏನೂ ಅರ್ಥವಾಗಲಿಲ್ಲ. ಎಲ್ಲರೂ ಸೇರಿ ತನ್ನನ್ನು ಗೇಲಿಮಾಡುತ್ತಿದ್ದಾರೆ ಎನ್ನುವುದು ಮಾತ್ರ ತಿಳಿಯಿತು. ಕೆನ್ನೆ ಕೆಂಪೇರಿತು. ಕಣ್ಣಿನಿಂದ ಇನ್ನೇನು ನೀರು ಬರಬೇಕು.

ಅಷ್ಟರಲ್ಲಿ ಬೆಲ್ ಹೊಡೆಯಿತು. ಕ್ಲಾಸಿಗೆ ಓಡಿದರು. ಕೆಂಪುಮೋರೆ ಮಾಡಿಕೊಂಡು ಸ್ವಾಮಿ ಒಂದು ಮೂಲೆಯಲ್ಲಿ ಕುಳಿತಿದ್ದ.

ಇಂಗ್ಲಿಷ್ ಪೀರೀಡು. ವೇದನಾಯಗಂ, "ಒಬ್ಬ ಮುದುಕ ತನ್ನ ಮೊಮ್ಮಕ್ಕಳು ಮರಿಮಕ್ಕಳಿಗಾಗಿ ಮರ ನೆಡುತ್ತಿದ್ದ, ದೊರೆ ಅವನಿಗೆ ಹತ್ತು ರೂಪಾಯಿ ಕೊಟ್ಟ" ಎಂಬ ಪಾಠವನ್ನು ಗಟ್ಟಿಯಾಗಿ ಓದುತ್ತಿದ್ದರು. ಸ್ವಾಮಿನಾಥನ ಮೆದುಳಿಗೆ ಒಂದು ಮಾತಾದರೂ ಹತ್ತಲಿಲ್ಲ. ಅದರ ತುಂಬ ದುಃಖ, ನೋವು ತುಂಬಿತ್ತು. ಮೇಷ್ಟರೇನಾದರೂ ಪ್ರಶ್ನೆ

ಕೇಳಿದ್ದರೆ ಉತ್ತರ ಹೇಳುವುದಕ್ಕೇ ತೋಚದೆ ಆ ಪಿರೀಡೆಲ್ಲಾ ಬೆಂಚಿನ ಮೇಲೆ ನಿಲ್ಲಬೇಕಾಗುತ್ತಿತ್ತು. ಆದರೆ ಅವನ ಅದೃಷ್ಟ ಚೆನ್ನಾಗಿತ್ತು.

ಆ ಪಿರೀಡಾಯಿತು. ಮನೆಗೆ ಒಬ್ಬನೇ ನಿಧಾನವಾಗಿ ಹೋಗುತ್ತಿದ್ದ. ಮನಸ್ಸು ನೊಂದಿತ್ತು. ಸೋಮು ಕೆಲವು ಗಜ ಮುಂದೆ ಹೋಗುತ್ತಿದ್ದ. ಸ್ವಾಮಿನಾಥ ಕೂಗಿದ : "ಸೋಮು, ಸೋಮು..... ಸೋಮು, ಸ್ವಲ್ಪ ನಿಂತು ಕೊಳ್ಳೋಲ್ವೇನೋ?" ಸ್ವಾಮಿ ಬರುವವರೆಗೂ ಸೋಮು ನಿಂತುಕೊಂಡ.

ಸ್ವಲ್ಪಕಾಲ ಮೌನ. ಆಮೇಲೆ ಸ್ವಾಮಿ ಗದ್ಗದಕಂಠದಿಂದ ಕೇಳಿದ : "ನಿಮಗೆಲ್ಲ ಏನಾಗಿದೆಯೋ? ಯಾಕೋ ಹೀಗಿದ್ದೀರಿ?"

"ನಮಗೇನೂ ಆಗಿಲ್ಲ......... ಅಂದಹಾಗೆ, ನಿನಗೊಂದು ಹೊಸ ಹೆಸರು ಬಂದಿದೆ ಗೊತ್ತೇ? - ಬಾಲ ಅಂತ, ಪೂರ್ತಿಯಾಗಿ ಹೇಳಬೇಕಾದರೆ ರಾಜಂನ ಬಾಲ ಅಂತ. ರಾಜಂ ಬಸವ, ನೀನು ಬಾಲ ..... ನಾವೆಲ್ಲ ನಿನಗೆ ಸಾಕಾದಷ್ಟು ದೊಡ್ಡ ಮನುಷ್ಯರಲ್ಲವೇನೋ? ಪೋಲೀಸ್ ಸೂಪರೆಂಟೆರ ಮಗನೇ ಆಗಬೇಕೇನೋ ನಿನ್ನ ಜೊತೇಗೆ?" - ಅಷ್ಟು ಹೇಳಿ ಸೋಮು ಹೊರಟುಹೋದ.

ಬಾಳಿನಲ್ಲಿ ಸ್ವಾಮಿ ತಿಂದ ಮೊದಲನೆಯ ಹೊಡೆತ ಎಂದರೆ ಇದೇ. ಅವನ ಬುದ್ಧಿಗೆ ಮಂಕುಬಡಿದಂತಾಯಿತು. ತಾನೇನು ಎದ್ದಿದ್ದೇನೋ ನಿದ್ದೆ ಮಾಡುತ್ತಿದ್ದೇನೋ ಎನ್ನುವುದೇ ಅರಿವಾಗದೆ ಹೋಯಿತು. ಎಲ್ಲವೂ ಕನಸಿನಲ್ಲಿ ನಡೆಯುವಂತಿತ್ತು. ಸೋಮು, - ಸದಾ ಸಲಿಗೆಯಿಂದ ಇರುತ್ತಿದ್ದ ಸೋಮು, ನಗುನಗುತ್ತಿದ್ದ ಸೋಮು, ಕ್ಲಾಸಿಗೆ ಚಿಕ್ಕಪ್ಪನ ಹಾಗಿದ್ದ ಸೋಮು, - ಅದೇ ಸೋಮುವೇ ಕಾಲುಗಂಟೆಯ ಹಿಂದೆ ತನ್ನ ಕೈಯಲ್ಲಿ ಮಾತನಾಡಿದ್ದು? ರಾಜಂ ಜೊತೇಲಿ ಓಡಾಡಿದರೆ, ಮಾತಾಡಿದರೆ ತಪ್ಪೇನು? ಅವನಿಗೇಕೆ ಅಷ್ಟು ಕೋಪ?

ಮನೆಗೆ ಹೋಗಿ, ಕೋಟು, ಟೋಪಿ, ಪುಸ್ತಕ ಎಲ್ಲವನ್ನೂ ಮೇಜಿನ ಮೇಲೆ ಒಗೆದು, ಅಮ್ಮ ಇರಿಸಿದ್ದ ತಣ್ಣಗಾದ ಕಾಫಿಯನ್ನು ಒಂದೇ ಗುಟುಕಿನಲ್ಲಿ ಕುಡಿದು, ಹೊರಗಿನ ಜಗುಲಿಯ ಮೇಲೆ ಕುಳಿತು ವಿನಾಯಕ ಮೊದಲಿಯಾರ್ ಬೀದಿಯ ಅಂಚಿನಲ್ಲಿ ಓಡುತ್ತಿದ್ದ ಚರಂಡಿಯ ನೀರಿನ ಕೌತುಕವನ್ನು ಪರೀಕ್ಷಿಸಹತ್ತಿದ. ಕಪ್ಪುಬಣ್ಣದ ಕೊಳಕುನೀರು ವೇಗದಿಂದ ಹರಿದುಹೋಗುತ್ತಿತ್ತು. ಕಾಗದದ ಚೂರುಗಳು, ಕಡ್ಡಿಗಳು, ಎಲೆಗಳು ಎಲ್ಲವೂ ತೇಲಿಕೊಂಡು ಮುಂದೆ ಸಾಗುತ್ತಿದ್ದವು. ಒಂದು ತಗಡಿನ ಡಬ್ಬಿ ಕುಣಿಕುಣಿಯುತ್ತ ಹೋಗುತ್ತಿತ್ತು. ಒಮ್ಮೆಲೇ ಕೈಚಾಚಿ ಅದನ್ನು ಎತ್ತಿಕೊಳ್ಳಬೇಕು ಎನಿಸಿತು. ಆದರೆ ಸುಮ್ಮನಿದ್ದುಬಿಟ್ಟ. ಮನಸ್ಸೇನೋ ಜಡವಾಗಿತ್ತು. ಎಂದಿನಂತೆ ಚೂಟಿಯಾಗಿರಲಿಲ್ಲ. ತಗಡಿನ ಡಬ್ಬಿ ಈಗ ಕಾಂಪೌಂಡಿನ ತುದಿಯಲ್ಲಿತ್ತು. ಹಾಗೆಯೇ ಮರದ ಕೆಳಗೆ ಹಾದು ಹೋಯಿತು. ಆದರ ಹಾದಿಗೆ ಅಡ್ಡಲಾಗಿ ಒಂದು ಇಟ್ಟಿಗೆ ಬಿದ್ದಿತ್ತು. ಸ್ವಾಮಿಗೆ ಕೋಪಬಂತು. "ಎಂಥ ಇಟ್ಟಿಗೆ ಅದು; ತಾನಾದರೂ ಕೊಚ್ಚಿಕೊಂಡು ಹೋಗಬೇಕು, ಇಲ್ಲವೇ ಬರುವವರನ್ನು ಅಡ್ಡಗಟ್ಟಿ ತೊಂದರೆಮಾಡದೆ ಸುಮ್ಮನಿರಬೇಕು" ಎಂದುಕೊಂಡ.

ಡಬ್ಬಿ ಹೇಗೋ ತಪ್ಪಿಸಿಕೊಂಡು ರಭಸದಿಂದ ಮುಂದೆ ಓಡಿತು. ರಸ್ತೆಯ ಕೊನೆಯಲ್ಲಿ ಚರಂಡಿಯೂ ತಿರುಗಿದುದರಿಂದ ಡಬ್ಬಿಯೂ ಮಾಯವಾಯಿತು. ಸ್ವಾಮಿನಾಥ ಮನೆಯೊಳಕ್ಕೆ ಓಡಿ ಒಂದು ಹಾಳೆ ಕಾಗದ ತಂದ. ಅದನ್ನು ಮಡಿಸಿ ಸೊಗಸಾದ ಒಂದು ದೋಣಿ ಮಾಡಿದ. ಅಲ್ಲೇ ಒಂದು ಗೊದ್ದ ಗೊತ್ತುಗುರಿ ಇಲ್ಲದೆ ಅಡ್ಡಾಡುತ್ತಿತ್ತು. ಹುಷಾರಾಗಿ ಅದನ್ನು ಹಿಡಿದುಕೊಂಡು, ದೋಣಿಯಲ್ಲಿಟ್ಟು, ದೋಣಿಯನ್ನು ಚರಂಡಿಯ ನದಿಯಲ್ಲಿ ತೇಲಿಬಿಟ್ಟ. ದೋಣಿ ಬಳುಕುತ್ತ ಮುಂದೆ ಹೋಗುತ್ತಿದ್ದುದನ್ನು ನೋಡಿ ಸ್ವಾಮಿಗೆ ಪರಮಾನಂದ ಆಯಿತು. ತುಂಬ ಹುಲ್ಲುಕಡ್ಡಿಗಳು ಸೇರಿಕೊಂಡ ಪ್ರದೇಶವೊಂದಿತ್ತು ಆ ಚರಂಡಿಯಲ್ಲಿ. ದೋಣಿಯು ಅದರ ಹತ್ತಿರ ಬಂದಾಗ ಅದರ ಗತಿ ಏನಾಗುತ್ತೋ ಎಂದು ಉಸಿರುಕಟ್ಟಿಕೊಂಡು ನೋಡುತ್ತಿದ್ದ. ದೋಣಿ ಅರ್ಧಚಂದ್ರಾಕಾರದ ಮಾರ್ಗವನ್ನು ಹಿಡಿದು ಅಂದವಾಗಿ ಹಾದುಹೋಗಿ ಮುಳುಗದೆ ಪಾರಾಗಿ ಮುಂದೆ ಮುಂದೆ ಹೋಯಿತು. ಅಲ್ಲೇ ಒಂದು ಸುಳಿ. ನೀರೆಲ್ಲ ಗಿರ್ರೆಂದು ಸುತ್ತುತ್ತಿತ್ತು. ಈ ಅಪಾಯದಿಂದ ತನ್ನ ದೋಣಿ ತಪ್ಪಿಸಿಕೊಳ್ಳಲಾರದು, ಸುಳಿಗೆ ಸಿಕ್ಕಿ ನೀರಿನ ತಳಕ್ಕೆ ಹೋಗುವುದು ಖಂಡಿತ ಎಂದು ಅವನು ದೃಢಮಾಡಿಕೊಂಡ. ನಡುಗುತ್ತ, ಅಲ್ಲಾಡುತ್ತ, ಅಲುಗುತ್ತ ಆ ದೋಣಿ ಸುಳಿಗೆ ಸಿಕ್ಕಿ ಮೃತ್ಯುವೇಗದಲ್ಲಿ ಸುತ್ತಿದ್ದೂ ಸುತ್ತಿದ್ದೇ. ಆದರೆ ದೈವವಶಾತ್ ಪಕ್ಕದಮನೆಯ ಅಡಿಗೆಯಮನೆಯಿಂದ ಯಾರೂ ಪುಣ್ಯಾತ್ಮರು ಎರಡುಮೂರು ಬಿಂದಿಗೆ ನೀರು ಸುರಿದರು. ಈ ಹೊಸನೀರು ಬಂದು ಹಳೆಯ ನೀರಿನ ಸುಳಿಯನ್ನು ನಿರ್ನಾಮಮಾಡಿತು. ದೋಣಿಯು ಮುನ್ನುಗ್ಗಿತು. ತನ್ನ ದೋಣಿ ಈ ವೇಗವನ್ನು ಹೇಗೆ ತಡೆದುಕೊಂಡೀತು, ಪಲ್ಟಿಯಾದರೂ ಹೊಡೆದು ಬಿಟ್ಟಿರಬೇಕು ಎಂದು ಸ್ವಾಮಿ ಭಾವಿಸಿದ. ಕ್ರಮೇಣ ನೀರಿನ ಓಟ ಎಂದಿನ ಜೋರಿಗೇ ಇಳಿಯಿತು. ದೋಣಿ ಆ ದೊಡ್ಡ ಮರದ ಕೆಳಗೆ ಹಾದುಹೋಗಬೇಕು ಎನ್ನುವಾಗ ದಪ್ಪವಾದ ಒಂದು ಎಲೆ ಧೊಪ್ಪೆಂದು ಅದರ ಮೇಲೆ ಬಿದ್ದು ದೋಣಿಯನ್ನು ತಲೆಕೆಳಗುಮಾಡಿತು. ಪಾಪ, ಆ ಇರುವೆಯನ್ನಾದರೂ ಕಾಪಾಡೋಣ ಎಂದು ಸ್ವಾಮಿ ಒಂದೇ ಉಸಿರಿನಲ್ಲಿ ಅಲ್ಲಿಗೆ ಓಡಿದ. ಎಷ್ಟು ತಡಕಿದರೂ ಇರುವೆಯ ಪತ್ತೆಯೇ ಸಿಕ್ಕಲಿಲ್ಲ. ದೋಣಿಯೂ ಅದರಲ್ಲಿನ ಪ್ರಯಾಣಿಕನೂ ಅನಾಮತ್ತು ನಾಶವಾಗಿದ್ದರು. ಕಾಪಾಡಲು ಸಾಧ್ಯವಿಲ್ಲವಾಯಿತು. ಸ್ವಾಮಿ ಒಂದು ಚಿಟಿಕೆ ಮಣ್ಣು ತೆಗೆದುಕೊಂಡು ಆ ಇರುವೆಯ ಆತ್ಮಕ್ಕೆ ಶಾಂತಿ ದೊರೆಯಲಿ, ಅದು ಸ್ವರ್ಗಕ್ಕೇ ಹೋಗಲಿ ಎಂದು ಪ್ರಾರ್ಥಿಸಿ, ಆ ಮಣ್ಣನ್ನು ಚರಂಡಿಯೊಳಕ್ಕೆ ಉದುರಿಸಿದ.

## ಎರಡು

ಸೋಮು ಮತ್ತು ಅವನ ಗುಂಪಿನವರ 'ಎನಿಮಿ' ಯಾಗಿರುವುದು ಮೊದಮೊದಲು ಸ್ವಾಮಿಗೆ ಬಹಳ ಕಷ್ಟವಾಗಿ ತೋರಿತು. ಬರಬರುತ್ತ ನಿರ್ವಾಹವಿಲ್ಲದೆ ಹೋಗಿ

ಹೊಂದಿಕೊಳ್ಳಬೇಕಾಯಿತು.

ಹಾಗಿದ್ದರೂ ತನ್ನ ಹಳೆಯ ಗೆಳೆಯರೊಡನೆ ಮತ್ತೆ ಸೇರಿ ಮಾತಾಡಬೇಕೆಂದು ಸ್ವಾಮಿಗೆ ಗೀಳು. ಸುವಾರ್ತೆ ಮೇಷ್ಟರು ತುಟಿ ಕಚ್ಚಿಕೊಂಡು ಮೂಗನ್ನೇನಾದರೂ ಕೆರೆದುಕೊಂಡರೆ ಬಟಾಣಿಯ ಕಾಲನ್ನೆಳೆದು ಅವನಿಗೂ ಅದನ್ನು ತೋರಿಸಿ ಇಬ್ಬರೂ ಜೋಡಿಯಾಗಿ ನಗೋಣ ಎನಿಸುವುದು.ಅದನ್ನು ಕಂಡು ಅವರು ನಗದ ದಿವಸವೇ ಇರಲಿಲ್ಲ. ಆದರೆ ಈ ಆಸೆಯನ್ನು ಸ್ವಾಮಿ ಅದುಮಿಕೊಂಡು ತಾನೊಬ್ಬನೇ ಹುಸಿನಗು ನಗಬೇಕಾಗಿ ಬಂತು. ಅಷ್ಟೇ ಅಲ್ಲ, ಆ ಕೆಂಪು ಟೋಪಿಯ ಹುಡುಗ ಕುಳಿತಕಡೆಯೇ ತೂಕಡಿಸಲು ಮೊದಲು ಮಾಡಿದಾಗಲೆಲ್ಲ ಬಟಾಣಿಯನ್ನು ಚುಚ್ಚಿ ಕರೆದು "ಲೋ ನೋಡೋ ನೋಡೋ ನೋಡೋ, ಅವನು, ಆ ಕೆಂಪು ಟೋಪಿಯವನು, ಮೊದಲನೆಯ ಬೆಂಚಿನಲ್ಲಿ ಮೂರನೆಯವನು, ಅಗೋ ಅಗೋ ಮತ್ತೆ ತೂಕಡಿಸಿದ" ಎಂದು ಅವನ ಕಿವಿಯಲ್ಲಿ ಪಿಸುಗುಟ್ಟಿ ನಗಬೇಕೆನಿಸುವುದು - ಆದರೆ, ಈಗ ಬಾಯಿಗೆ ಬೀಗ ಹಾಕಿಕೊಂಡು ಸುಮ್ಮನಿರಬೇಕಾಗಿದೆ.

ಸೋಮು ತನ್ನ ಕಡೆಯೇ ನೋಡುತ್ತಿದ್ದ. ಅವನ ನೋಟದಲ್ಲಿ ಸ್ನೇಹದ ಸೂಚನೆ ಕಾಣುತ್ತಿದೆಯೆಂದು ಸ್ವಾಮಿ ಭಾವಿಸಿದ. ಮತ್ತೆ ಸೋಮು ತನ್ನ ಜತೆ ಸೇರಲಿದ್ದಾನೆಂಬ ಭಾವನೆಯಿಂದ ಒಂದು ನಿಮಿಷ ಹಿಗ್ಗಿದ. ಒಬ್ಬರ ಕಡೆ ಒಬ್ಬರು ಒಂದುಕ್ಷಣ ಬಿರಬಿರನೆ ನೋಡಿದರು. ಇನ್ನೇನು, ಶಾಂತಿಸೂಚಕವಾಗಿ ಕಿರುನಗು ನಗೋಣ ಎನ್ನುವಷ್ಟರಲ್ಲಿ, ಸೋಮುವಿನ ಮುಖ ಮತ್ತೆ ಕಲ್ಲಿನ ಹಾಗಾಯಿತು. ಸರ್ರನೆ ಅವನು ಬೇರೆ ಕಡೆ ತಿರುಗಿಕೊಂಡುಬಿಟ್ಟ.

ಶಾಲೆಯ ಮೈದಾನದಲ್ಲಿ ಸ್ವಾಮಿ ಒಂಟಿಯಾಗಿ ಅಲೆದಾಡುತ್ತಿದ್ದ. ಅವನ ಹಿಂದೆ ಪರಿಚಯದ ದನಿಗಳು ಕೇಳಿಸಿದುವು. ತಿರುಗಿನೋಡಿದ. ಸೋಮು, ಶಂಕರ, ಬಟಾಣಿ ಅವನ ಹಿಂದೆಯೇ ಬರುತ್ತಿದ್ದಾರೆ. ಅವರು ಬರುವವರೆಗೂ ಕಾದು ಅವರ ಜತೆ ಸೇರಬೇಕೋ, ಅವರು ತನ್ನನ್ನು ಹಾದುಹೋದಮೇಲೆ ಹಿಂತಿರುಗಬೇಕೋ ಅವನಿಗೆ ತಿಳಿಯದಾಯಿತು. ಮೂರುಜೊತೆ ವೈರಿ ಕಣ್ಣುಗಳು ಹಿಂದಿನಿಂದ ತನ್ನನ್ನೇ ನೋಡುತ್ತಿರುವುದನ್ನು ಹೇಗೆ ಸಹಿಸಲು ಸಾಧ್ಯ? ನಾನೇನು ಮಾಡಿದರೂ ಅದನ್ನೆಲ್ಲ ಕಂಡು ಅಪಹಾಸ್ಯ ನಗುತ್ತಿದ್ದಾರೆ. ತಾನು ನಡೆಯುವ ರೀತಿ, ತಾನು ಪುಸ್ತಕಗಳನ್ನು ಹಿಡಿಯುವ ರೀತಿ ಎಲ್ಲವನ್ನೂ ಲೇವಡಿಮಾಡುತ್ತಿದ್ದಾರೆ ಎಂದು ತೀರ್ಮಾನ ಮಾಡಿಕೊಂಡ. ಇದ್ದಕ್ಕಿದ್ದಂತೆ ಅವನ ಕುತ್ತಿಗೆಯ ಮೇಲೆ ನವೆಯಾಯಿತು. ಕೆರೆಯುವುದಕ್ಕಾಗಿ ಕೈಯೂ ಎದ್ದುಬಿಟ್ಟಿತ್ತು, ಅಷ್ಟರಲ್ಲಿ ತಡೆದುಕೊಂಡ. ತಾನು ಕೆರೆದುಕೊಳ್ಳುವುದನ್ನು ಆ ಆರು ಕಣ್ಣುಗಳು ನೋಡುವ ಹಾಗೆ ಏಕಾಗಬೇಕು ಎಂದು ಸುಮ್ಮನಿದ್ದುಬಿಟ್ಟ.

ಬಲಗಡೆ ತಿರುಗಿ ಸ್ಕೂಲಿನ ಹಜಾರದೊಳಕ್ಕೆ ಹೊರಟು ಹೋಗೋಣವೆಂದು ಮನಸ್ಸು. ಆದರೆ ಹೇಡಿತನ ಅಂದುಕೊಂಡರೆ? ತಮ್ಮಿಂದ ತಪ್ಪಿಸಿಕೊಳ್ಳುವುದಕ್ಕೆ ಓಡಿಹೋಗುತ್ತಿದ್ದಾನೆ ಎಂದು ಖಂಡಿತ ಅವರು ಅರ್ಥ ಕಟ್ಟುತ್ತಾರೆ. ಹಿಂದಿರುಗಿ

ಹೋಗೋಣವೆಂದರೆ ಸರಿಯಾಗಿ ಎದುರಿಗೆ ಕಾಣಿಸಿಕೊಳ್ಳುತ್ತಾರೆ. ಆದ್ದರಿಂದ ಇದ್ದುದು ಒಂದೇ ದಾರಿ. ತನ್ನ ಹಿಂದೆ ಬರುತ್ತಿರುವವರನ್ನು ಗಣನೆಗೇ ತಂದುಕೊಳ್ಳದೆ ತನ್ನಷ್ಟಕ್ಕೆ ತಾನು ಮುಂದೆ ಹೋಗುತ್ತಿರುವುದು. ಹತ್ತು ದಿನದ ಹಿಂದೆ ಈ ಮೂವರೂ ಹೇಗಿದ್ದರು! ಇಷ್ಟು ಸ್ವಲ್ಪಕಾಲದಲ್ಲಿ ಎಷ್ಟು ಭಯಂಕರ ಪ್ರಾಣಿಗಳಾಗಿ ಬಿಟ್ಟಿದ್ದಾರೆ ಅವರು! ಈ ಮಾರ್ಪಾಡನ್ನು ಅರ್ಥಮಾಡಿಕೊಳ್ಳುವುದು ಸ್ವಾಮಿಗೆ ಸಾಧ್ಯವಾಗದೆ ಹೋಯಿತು.

ಪರಿಸ್ಥಿತಿ ದುಸ್ಸಹವಾಯಿತು. ತನ್ನ ಕಾಲುಗಳು ತನ್ನ ಹತೋಟಿ ತಪ್ಪಿ ಎಲ್ಲೆಲ್ಲೋ ಹೇಗೋ ಸ್ವೇಚ್ಛೆಯಾಗಿ ಸುತ್ತುತ್ತಿರುವ ಹಾಗೆ ಭಾಸವಾಯಿತು. ಹಿಂತಿರುಗಿ ಶಾಲೆಯ ಹಜಾರಕ್ಕೆ ಓಡಿಹೋಗಲು ಈಗ ಸಾಧ್ಯವಿಲ್ಲ - ತುಂಬ ದೂರ ಬಂದುಬಿಟ್ಟಿದ್ದಾನೆ. ಈಗೊಂದೇ ಮಾರ್ಗ. ಓಡಿಹೋಗಬೇಕು. ಅದು ಅಗತ್ಯ. ಒಂದು ಉಪಾಯ ಹೊಳೆಯಿತು. ಇದ್ದಕ್ಕಿದ್ದಂತೆ ನಿಂತ. ಏನೋ ಹುಡುಕುವವನಂತೆ ಈಕಡೆ ಆಕಡೆ ನೋಡಿದ. "ಓ ನನ್ನ ಪುಸ್ತಕ ಎಲ್ಲೋ ಮರೆತುಬಿಟ್ಟೆ" ಎಂದು ಗಟ್ಟಿಯಾಗಿ ಕೂಗಿ, ಕೈ ಮೇಲೆತ್ತಿ, ಆ ಸ್ಥಳದಿಂದ ಜಿಂಕೆಯಿಂತೆ ಚಂಗನೆ ಚಿಗಿಯುತ್ತ ಓಡಿಹೋದ.

# ಅಪ್ಪನ ಕೋಣೆ

ಆವತ್ತು ಶನಿವಾರ. ಮಧ್ಯಾಹ್ನದ ಮೇಲೆ ಬರುತ್ತೇನೆಂದು ರಾಜಂ ಮಾತುಕೊಟ್ಟಿದ್ದ. ಸ್ವಾಮಿನಾಥನ ಕಾತರವೋ ಕಾತರ. ರಾಜಂ ಬಂದರೆ ಅವನನ್ನು ಎಲ್ಲಿ ಕೂರಿಸುವುದು? ಹೇಗೆ ಸತ್ಕರಿಸುವುದು?..... ತನ್ನ 'ರೂಮಿ' ಗೆ ಕರೆದುಕೊಂಡು ಹೋಗಬಹುದು. ಆದರೆ ಅಪ್ಪ ಪದೇ ಪದೇ ಬರುತ್ತಾ ಹೋಗುತ್ತಾ ಇದ್ದರೆ?..... ಇಲ್ಲ. ಕೋರ್ಟಿಗೆ ಹೊರಟುಹೋಗಿರುತ್ತಾರೆ. ಸಧ್ಯ! ಸ್ವಾಮಿನಾಥನ ತಲೆಯಿಂದ ದೊಡ್ಡ ಬೆಟ್ಟ ಇಳಿಸಿದ ಹಾಗಾಯಿತು. ತನ್ನ ಮೇಜನ್ನೆಲ್ಲ ಚೊಕ್ಕಟ ಮಾಡಿಕೊಂಡ. ಪುಸ್ತಕ ಎಷ್ಟು ಓರಣವಾಗಿ ಜೋಡಿಸಿದ ಅಂದರೆ ಅದನ್ನು ಕಂಡು ಅಪ್ಪ ಕೂಡ ಶಹಭಾಸಗಿರಿ ಕೊಟ್ಟರು. ಇದೆಲ್ಲ ಆದ ಮೇಲೆ ಅಜ್ಜಿ ಹತ್ತಿರ ಹೋದ. "ಅಜ್ಜಿ, ನಿನಗೆ ನಾನು ರಾಜಂ ವಿಷಯ ಹೇಳಿದ್ದೀನಿ ಅಲ್ಲವೆ?" ಎಂದು ಕೇಳಿದ.

"ಓಹೋ. ಅದೇ ಅವನು. ಭೀಮನ ಹಾಗೆ ತುಂಡಾಂಡಿಗನಾಗಿದ್ದಾನೆ. ಯಾವ ಪರೀಕ್ಷೇಲೂ ಪಾಸೇ ಆಗೋಲ್ಲ, ಅವನು ತಾನೆ?"

"ಅವನಲ್ಲ ಅಜ್ಜೀ, ಅವನು ಮಣಿ."

"ಆ ಈಗ ಜ್ಞಾಪಕಕ್ಕೆ ಬಂತು. ಕಡಲೆ ಅಂತಲೋ ಉದ್ದು ಅಂತಲೋ ಕರೀತೀರಲ್ಲ ಆ ಹುಡುಗ, ಯಾವಾಗಲೂ ಕಿಲಕಲಾಂತ ನಗ್ತಾ ಇರ್ತಾನಲ್ಲ, ಅವನಲ್ಲವೆ?"

ಅಜ್ಜಿಯನ್ನು ದಾರಿಗೆ ತರುವುದು ಆಗದ ಕೆಲಸ ಎನಿಸಿತು ಸ್ವಾಮಿನಾಥನಿಗೆ. "ಇಲ್ಲಿ ನೋಡಜ್ಜಿ. ಆ ಬಟಾಣೀನ ತೊಗೊಂಡ್ಹೋಗಿ ರಾಜಂ ಅಂತಿದ್ದೀಯಾ. ನಾನು ಹೇಳೋದು ರಾಜಂ ಅಜ್ಜಿ, ಪೋಲೀಸ್ ಸೂಪರೆಂಟ್ ಮಗ, ಹುಲಿ ಕೊಂದಿರೋನು, ದೊಡ್ಡ ಮನುಷ್ಯ, ಅವನಜ್ಜೀ."

"ಓ, ಅವನು ಬರ್ತಾನಾ ಇವತ್ತು? ಬಹಳ ಸಂತೋಷ."

"ಹುಂ.... ಆದರೆ ನಿನಗೊಂದು ವಿಷಯ ತಿಳಿಸಬೇಕೂಂತ."

"ಅವನ್ನ ಕರೆಕೊಂಡು ಬರ್ತೀಯೇನು, ನನ್ನ ನೋಡೋಕೆ? ಆಗಬಹುದು."

"ನೋಡೋಣ, ಈಗಲೇ ಮಾತುಕೊಡಲಾರೆ" ಎಂದ ಸ್ವಾಮಿ ಅನಿರ್ದಿಷ್ಟವಾಗಿ. "ನಾನು ಹೇಳಬೇಕೂಂತಿರೋದು ಇಷ್ಟೇ. ಅವನು ಬಂದಿರೋವಾಗ ನನ್ನನ್ನು ಕೂಗಕೂಡದು. ನೀನೂನೂ ನನ್ನ ರೂಮಿಗೆ ಬರಕೂಡದು."

"ಯಾಕೆ?"

ಇಲ್ಲದೆ ಹೇಳಿಬಿಟ್ಟ; ಅಜ್ಜಿಯೇನೂ ಮುನಿಸಿಕೊಳ್ಳಲಿಲ್ಲ.

ತನ್ನ ಸ್ನೇಹಿತನಿಗೆ ತಿನ್ನಲು ರುಚಿರುಚಿ ತಿಂಡಿಯೇನಾದರೂ ಕೊಡಬೇಕು ಎನ್ನುವ ಆಸೆ ಅವನಿಗೆ. ಅಡುಗೆಮನೆಗೆ ಹೋದ. ಅಮ್ಮ ಈಳಿಗೆ ಮಣೆಯ ಮುಂದೆ ಕುಳಿತು ಒಂದು ಕಟ್ಟು ಬಾಳೆಲೆಯನ್ನು ಹೆಚ್ಚುತ್ತಿದ್ದಳು. ಸ್ವಾಮಿ, ಹೋಗಿ ಅವಳ ಪಕ್ಕದಲ್ಲಿ ಕುಳಿತುಕೊಂಡು ಒಂದು ಬಾಳೆಲೆಚೂರನ್ನು ಹಾಗೆಹೀಗೆ ಆಡಿಸಿ ಸಣ್ಣಸಣ್ಣ ಚಿಂದಿಯಾಗಿ ಹರಿದ.

"ಅಮ್ಮಾ, ಮಧ್ಯಾಹ್ನ ಟಿಫನ್ನಿಗೇನು ಮಾಡ್ತೀಯಮ್ಮಾ ಇವತ್ತು?"

"ಅದರ ಯೋಚನೆಮಾಡೋಕ್ಕೆ ಇನ್ನೂ ಬ್ರಹ್ಮಾಂಡ ಹೊತ್ತಿದೆ."

"ಅಮ್ಮಾ ಏನಾದರೂ ಚೆನ್ನಾಗಿರೋ, ಸೀಯಾಗಿರೋ ತಿಂಡಿ ಮಾಡಮ್ಮಾ. ನನ್ನ ಸ್ನೇಹಿತ ರಾಜಂ ಬರ್‍ತಾನೆ ಮಧ್ಯಾಹ್ನ. ನಿತ್ಯ ನನಗೆ ಕೊಡ್ತೀಯಲ್ಲ ಆ ಥರಾ ಕಾಫಿ ಮಾಡಬೇಕಮ್ಮಾ. ಬಿಸಿಬಿಸಿಯಾಗಿರಬೇಕು, ಗಮಗಮಾಂತ ಇರಬೇಕು" ರಾಜಂ ಮನೆಯಲ್ಲಿ ಹೇಗೆ ಎಲ್ಲವನ್ನೂ ಅಡಿಗೆಯವನೇ ತಂದ ಎನ್ನುವುದು ಅವನಿಗೆ ನೆನಪಾಯಿತು. "ಅಮ್ಮ, ಇನ್ನೊಂದು ಮಾತು. ರೂಂಗೆ ಕಳಿಸ್ಬಿಡ್ತಿಯೇನಮ್ಮ ಕಾಫಿ ತಿಂಡಿ?" ಆಮೇಲೆ ಅಡಿಗೆಯವನ ಕಡೆ ತಿರುಗಿ "ನೋಡು, ಆ ಕೊಳಕು ಪಂಚೆ ಉಟ್ಟುಕೊಂಡು ನನ್ನ ರೂಮಿಗೆ ಬರಕೂಡದು. ಕ್ಲೀನಾಗಿರೋ ಬಿಳೀ ಷರಟು ಪಂಚೆ ಉಟ್ಟುಕೊಂಡು ಬರಬೇಕು. ಗೊತ್ತಾಯ್ತೋ?" ಒಂದು ಕ್ಷಣವಾದ ಮೇಲೆ ಸ್ವಾಮಿ ತಾಯಿಯನ್ನು ಕೇಳಿದ: "ಅಮ್ಮ, ಅಪ್ಪನ ರೂಂನ ಮಧ್ಯಾಹ್ನ ಒಂದೆರಡುಗಂಟೆ ನನಗೆ ಕೊಟ್ಟಿರೋ ಹಾಗೆ ಅಪ್ಪನ್ನ ಕೇಳ್ತೀಯೇನಮ್ಮ?" "ನನಗೆ ತುಂಬ ಕೆಲಸ, ಬಿಡುವಿಲ್ಲ. ನೀನೇ ಯಾಕೆ ಕೇಳ್ಬಾರದ್ದು" ಎಂದುಬಿಟ್ಟಳು ಅಮ್ಮ.

"ನಾನು ಕೇಳೋಕಿಂತ ನೀ ಕೇಳಿದ್ರೆ ಕೊಟ್ಟೇ ಕೊಡ್ತಾರೆ" ಎಂದ ಸ್ವಾಮಿ.

ಕೊನೆಗೆ ತಾನೇ ಹೋಗಬೇಕಾಯಿತು ಅಪ್ಪನ ಹತ್ತಿರ. "ಅಪ್ಪ ನಿಮ್ಮ ನ್ನೊಂದು ಕೇಳಬೇಕೂ ಅಂತ." ಅಪ್ಪ ಯಾವುದೋ ಕಾಗದ ಪತ್ರ ನೋಡುತ್ತಿದ್ದವರು ತಲೆ ಮೇಲೆತ್ತಿದರು.

"ಅಪ್ಪ, ನಿಮ್ಮ ರೂಂ ಬೇಕು ನನಗೆ ಸ್ವಲ್ಪ."

"ಯಾಕೆ?"

"ನನ್ನ ಸ್ನೇಹಿತ ಒಬ್ಬ ಬರ್‍ತಾನೆ, ಅದಕ್ಕೆ."

"ನಿನ್ನ ರೂಮೇ ಇದೆಯಲ್ಲ."

"ಛಿ. ಅದನ್ನು ರಾಜಂಗೆ ತೋರಿಸೋಕ್ಕಾಗಲ್ಲ."

"ಯಾರಪ್ಪಾ ಈ ರಾಜಂ ಅನ್ನೋವನು, ಅಂಥ ದೊಡ್ಡ ಮನುಷ್ಯ?"

"ಅವನು ಪೋಲೀಸು ಸೂಪರೆಂಟರ ಮಗ ಅಪ್ಪಾ ಅವನು - ಸಾಮಾನ್ಯನಲ್ಲ."

"ಓಹೋ, ಹಾಗೇನು?..... ನನ್ನ ರೂಂನ ಉಪಯೋಗಿಸ್ಕೋ. ಆದರೆ, ಮೇಜಿನ ಮೇಲಿರೋ ಸಾಮಾನು ಯಾವುದನ್ನಾದರೂ ಮುಟ್ಟಿಗಿಟ್ಟಿದರೆ ಬಲಿ."

"ಇಲ್ಲಾಪ್ಪ, ತುಂಬ ಹುಷಾರಾಗಿರ್ತೀನಿ.... ನಮ್ಮ ಅಪ್ಪ ಎಷ್ಟು ಒಳ್ಳೆಯವರು......"
ಅಪ್ಪ ಗಟ್ಟಿಯಾಗಿ ನಕ್ಕರು. "ಊ, ಇನ್ನು ಓಡಿಹೋಗಿ ಓದ್ಕೋ."

## ಎರಡು

ಸ್ವಾಮಿ ಭಾವಿಸಿದ್ದಕ್ಕಿಂತ ಸರಾಗವಾಗಿ ಕಳೆದುಹೋಯಿತು ರಾಜಂನ ಭೇಟಿ. ಅಪ್ಪ ಕೊಟಡಿ ಬಿಟ್ಟುಕೊಟ್ಟರು; ಅಮ್ಮ ಭರ್ಜರಿಯಾದ ಮೈಸೂರು ಪಾಕ್ ಮಾಡಿದಳು. ಕಾಫಿ ನಿಜವಾಗಿಯೂ ಚೆನ್ನಾಗಿತ್ತು. ಅಜ್ಜಿಯೂ ತನ್ನ ಮಾತು ಉಳಿಸಿಕೊಂಡಳು. ಆದರೆ ಒಂದೇ ಒಂದು ಕೊರತೆ. ಅಡಿಗೆಯವನು ಬಿಳೀಪಂಚೆ ಉಟ್ಟುಕೊಳ್ಳದೆ ಆ ಕೊಳಕು ಪಂಚೆಯೇ ಉಟ್ಟುಕೊಂಡಿದ್ದ.

ಅಪ್ಪನದೊಂದು ತಿರುಗಣೆಕುರ್ಚಿ ಇತ್ತು. ರಾಜಂನ ಅದರ ಮೇಲೆಯೇ ಕೂರಿಸಿದ ಸ್ವಾಮಿ. ರಾಜಂ ಬಂದು ಆಗಲೇ ಮೂರು ಗಂಟೆಗಳಾಗಿತ್ತು. ಮಣಿ, ಎಬನೀಜರ್, ರೈಲುಗಳು, ಹುಲಿ ಷಿಕಾರಿ, ಪೋಲೀಸಿನವರು, ದೆವ್ವಗಳು ಈ ಎಲ್ಲ ವಿಷಯವಾಗಿಯೂ ಹರಟೆಹೊಡೆದಾಗಿತ್ತು.

ರಾಜಂ ಕೇಳಿದ : "ನಿನ್ನ ರೂಂ ಯಾವುದೋ?"

ಉದ್ದನೆಮುಖ ಮಾಡಿಕೊಂಡು ಸ್ವಾಮಿ ಜವಾಬುಕೊಟ್ಟ : "ಇದೇ ನನ್ನ ರೂಮು, ಯಾಕೆ?"

ರಾಜಂ ಇದನ್ನು ನಂಬಲಿಲ್ಲ. ಸ್ವಲ್ಪಹೊತ್ತು ಬಿಟ್ಟು ಮೇಜಿನ ಮೇಲಿದ್ದ ದೊಡ್ಡ ದೊಡ್ಡ ಲಾ ಪುಸ್ತಕಗಳನ್ನೇ ತೋರಿಸಿ, "ಇಂಥ ಪುಸ್ತಕ ಎಲ್ಲಾ ಓದ್ತಿಯೇನೋ ನೀನು?" ಎಂದು ಕೇಳಿದ. ಸ್ವಾಮಿನಾಥನಿಗೆ ದಿಕ್ಕೇ ತೋಚಲಿಲ್ಲ.

ಇನ್ನೂ ಒಂದು ಪ್ರಶ್ನೆ ಕೇಳಿ ಹಸೀಹುಣ್ಣಿನ ಮೇಲೆ ಬರೆಹಾಕಿದ ರಾಜಂ. "ಅದೆಲ್ಲಾ ಸರಿ, ನಿನ್ನ ಪುಸ್ತಕಗಳೆಲ್ಲೋ?" ರಾಜಂ ತುಟಿಯ ಮೇಲೆ ತುಂಟ ನಗುವೊಂದು ಮಿಂಚಿತು.

"ಇಲ್ಲಿ ನೋಡೋ, ಈ ಮೇಜು ನಮ್ಮಪ್ಪನದು. ನಾನು ರೂಂನಲ್ಲಿಲ್ಲದಾಗ ಅವರ ಕಕ್ಷಿಗಾರರನ್ನು ಇದೇ ರೂಂನಲ್ಲೇ ಅವರು ನೋಡೋದು" ಎಂದ ಸ್ವಾಮಿ.

"ನಿನ್ನ ಪುಸ್ತಕಾನೆಲ್ಲ ಎಲ್ಲಿಟ್ಕೊಂಡಿದ್ದೀಯ?"

ಮಾತು ಬದಲಾಯಿಸಬೇಕೆಂದು ಸ್ವಾಮಿ ಮಹಾಸಾಹಸ ಮಾಡಿದ. "ನಮ್ಮಜ್ಜೀನ ನೋಡಿದ್ದೀಯೇನೋ ರಾಜಂ?"

"ಇಲ್ಲ. ತೋರಿಸ್ತೀಯೇನು? ಅಜ್ಜಿಗಳೂ ಅಂದ್ರೆ ನನಗೆ ಪ್ರಾಣ" ಎಂದ ರಾಜಂ.

"ಒಂದು ನಿಮಿಷ ತಡಿ ಹಾಗಾದ್ರೆ" ಎಂದು ಹೇಳಿ ಸ್ವಾಮಿ ಒಳಕ್ಕೆ ಓಡಿದ. ಅಜ್ಜಿ ಅದೃಷ್ಟವಶದಿಂದ ನಿದ್ದೆ ಮಾಡುತ್ತಿರಬಹುದು ಎಂಬ ಕೊನೆಯ ಆಸೆ ಒಂದಿತ್ತು ಅವನಿಗೆ. ಸ್ನೇಹಿತರಿಗೆ ಎದ್ದಿರುವ ಅಜ್ಜಿಗಿಂತ ನಿದ್ದೆ ಮಾಡುವ ಅಜ್ಜಿಯನ್ನು ತೋರಿಸುವುದೇ ಹೆಚ್ಚು ಕ್ಷೇಮ.

ಆದರೆ ತೆಪ್ಪಗೆ ಕೂತಿದ್ದಾಳೆ ಅಜ್ಜಿ, ತನ್ನ ಹಾಸಿಗೆ ಮೇಲೆ. ಸ್ವಾಮಿಗೆ ಭಾರಿ ಆಶಾಭಂಗವಾಯಿತು. ಎಲ್ಲೋ ನೋಡುತ್ತ ಯೋಚನೆಯಲ್ಲಿ ಮುಳುಗಿದವನಂತೆ ಅಜ್ಜಿ ಮುಂದೆ ನಿಂತ.

"ಏನು ಮಗೂ, ಏನಾದರೂ ಬೇಕೇನು?" ಎಂದು ಕೇಳಿದಳು ಅಜ್ಜಿ.

"ಏನೂ ಬೇಡ..... ಎದ್ದಿದ್ದೀಯೇನೂ?" ಒಂದು ನಿಮಿಷ ಆದ ಮೇಲೆ ಹೇಳಿದ:"ಅಜ್ಜಿ, ನಿನ್ನನ್ನು ನೋಡೋಕೆ ರಾಜಂನ ಕರೆದುಕೊಂಡು ಬಂದಿದ್ದೀನಿ."

"ಹಾಗೇನು? ಹತ್ತಿರ ಬಾಪ್ಪ ರಾಜಂ, ನಿನ್ನ ಮುಖ ಸರಿಯಾಗಿ ಕಾಣಿಸೋಲ್ಲ. ನಾನು ಮುದುಕಿ, ಕಣ್ಣು ಸ್ವಲ್ಪ ಹಾಗೆಹಾಗೇನೆ."

ಸ್ವಾಮಿನಾಥನಿಗೆ ಕೋಪವೇರಿತು...... ರಾಜಂ ಕೈಯಲ್ಲಿ ಇಂಥ ಕೆಲಸಕ್ಕೆ ಬಾರದ ಮಾತೇ ಆಡುವುದು? ಬುದ್ಧಿಯೇ ಇಲ್ಲ ಅಜ್ಜೀಗೆ.

ಅಜ್ಜಿಯ ಹಾಸಿಗೆ ಮೇಲೆ ಕುಳಿತುಕೊಂಡ ರಾಜಂ. ಅಜ್ಜಿ ಅವನ ತಲೆ ಕೂದಲೆಲ್ಲ ಸವರಿದಳು. ಅವನ ಕೂದಲು ಮೋಟಾಗಿ ಒರಟುಒರಟಾಗಿ ಚುಚ್ಚಿಕೊಳ್ಳುವ ಹಾಗಿದ್ದರೂ, "ತುಂಬ ನಯವಾಗಿದೆ" ಎಂದಳು. ರಾಜಂ ತಾಯಿ ಹೆಸರು, ಆಕೆಗೆ ಎಷ್ಟು ಮಕ್ಕಳು, ಎಷ್ಟು ಒಡವೆ ಇದೆ ಎಲ್ಲಾ ವಿಚಾರಿಸಿದಳು. ತನ್ನ ತಾಯಿ ಹತ್ತಿರ ದೊಡ್ಡದೊಂದು ಕರಿಯಪೆಟ್ಟಿಗೆ ಇದೆ. ಅದರ ತುಂಬ ಒಡವೆ ಇದೆ. ಇನ್ನೊಂದು ಹಸುರು ಬಣ್ಣದ ಪೆಟ್ಟಿಗೆ ಇದೆ. ಅದರ ತುಂಬ ಬೆಳ್ಳಿಬಂಗಾರದ ಪಾತ್ರೆ ಇದೆ ಎಂದು ರಾಜಂ ಹೇಳಿದ. ಆ ಮೇಲೆ ಮದರಾಸ್ ಹೇಗಿದೆ ಅನ್ನುವುದನ್ನೂ ಅಜ್ಜಿಗೆ ವಿವರಿಸಿದ. ಲೈಟ್‌ಹೌಸ್, ಸಮುದ್ರ, ಟ್ರಾಮುಗಳು, ಬಸ್ಸುಗಳು, ಸಿನಿಮಾಗಳು ಎಲ್ಲವನ್ನೂ ವರ್ಣಿಸಿದ. ಎಲ್ಲಾ ಕೇಳಿ ಅಜ್ಜಿ ಬಾಯಿಬಿಟ್ಟಳು.

## ಮೂರು

ಸ್ವಾಮಿನಾಥನ್ ತರಗತಿಯೊಳಕ್ಕೆ ಹೋದ ಕೂಡಲೇ ಎಲ್ಲರೂ ಕಿಲಕಿಲನೆ ನಗಲಾರಂಭಿಸಿದರು. ತನ್ನನ್ನು ಕಂಡು ನಗುತ್ತಿರಲಾರರೆಂದು ಭಾವಿಸಿ ತನ್ನ ಪಾಡಿಗೆ ತಾನು ಹೋಗಿ ಬೆಂಚಿನ ಮೇಲೆ ಕುಳಿತ. ಆದರೂ ನಗು ನಿಲ್ಲಲಿಲ್ಲ. ಸುತ್ತಮುತ್ತ ನೋಡಿದ. ಕಣ್ಣು ಬೋರ್ಡಿನತ್ತ ಸುಳಿಯಿತು. ಮುಖ ಉರಿಗೆಂಪಾಯಿತು. ಬೋರ್ಡಿನ ಮೇಲೆ ದೊಡ್ಡ ದೊಡ್ಡ ಅಕ್ಷರಗಳಲ್ಲಿ "ಬಾಲ" ಎಂದು ಬರೆದಿತ್ತು. ಸ್ವಾಮಿ ಬೋರ್ಡಿನ ಹತ್ತಿರ ಹೋಗಿ ಅಲ್ಲಿ ಬರೆದಿದ್ದನ್ನು ಕೈಯ್ಯಿಂದ ಒರೆಸಿಬಿಟ್ಟು ತರಗತಿಯ ಕಡೆ ನೋಡಿದ. ಶಂಕರ ತಲೆ ಬಗ್ಗಿಸಿಕೊಂಡು ಏನೋ ಬರೆಯುವಂತೆ ನಟಿಸುತ್ತಿದ್ದಾನೆ, ಬಟಾಣಿ ತನ್ನ ಚೀಲದಿಂದ ಪುಸ್ತಕ ತೆಗೆಯುವುದರಲ್ಲೇ ಮಗ್ನನಾಗಿದ್ದಾನೆ. ತುಟಿ ಪಿಟಕ್ಕೆನ್ನದೆ ಸ್ವಾಮಿನಾಥ ಬಟಾಣಿಯ ಹತ್ತಿರ ಬಂದು ಅವನ ಕೆನ್ನೆಗೆ ಫಟೀರೆಂದು ಒಂದು ಬಿಗಿದ. ಬಟಾಣಿ ತಕ್ಷಣ ಬಿಕ್ಕಿಬಿಕ್ಕಿ ಅಳುತ್ತಾ ತನ್ನಾಣೆ ಮಾಡಲಿಲ್ಲವೆಂದು ಹೇಳಿ ಶಂಕರನ ಕಡೆ ಕಣ್ಣು ಹೊರಳಿಸಿದ. ಶಂಕರ

ಯಾವುದೋ ಕೆಲಸಮಾಡುತ್ತಿದ್ದ. ಸ್ವಾಮಿನಾಥ ಅವನ ಹತ್ತಿರ ಹೋಗಿ ಅವನಿಗೂ ಒಂದು ಕೊಟ್ಟ ಬೆಚ್ಚಗೆ.

ರಗಳೆಯೋ ರಗಳೆ. ಶಂಕರ, ಬಟಾಣಿ, ಸ್ವಾಮಿ ಒಬ್ಬರ ಮೇಲೊಬ್ಬರು ಬಿದ್ದು, ಪರಚಿ, ಒದ್ದು, ಹೊಡೆದು ಗಲಾಟೆ ಮಾಡುತ್ತಿದ್ದಾರೆ. ಅಷ್ಟು ಹೊತ್ತಿಗೆ ಸರಿಯಾಗಿ ಬೆಲ್ಲು ಹೊಡೆಯಿತು. ರಾಜಂ, ಸೋಮು, ಮಣಿ ಬಂದರು. ಮೇಷ್ಟ್ರು ಬಂದರು. ಈ ರಾದ್ಧಾಂತವನ್ನೆಲ್ಲ ಕಂಡು ಬೆಕ್ಕಸಬೆರಗಾದರು. ಬೇರೇನು ತಾನೇ ಮಾಡಿಯಾರು? ಪಾಪ...... ಅವರು ತಮಿಳು ಪಂಡಿತರು. ಅವರಷ್ಟು ನಿಸ್ಸಹಾಯರು ಶಾಲೆಯಲ್ಲೇ ಬೇರೆ ಯಾರೂ ಇರಲಿಲ್ಲ.

ಜಗಳ ಆಡುತ್ತಿದ್ದವರನ್ನು ಸೋಮು ಮಣಿ ಇಬ್ಬರೂ ಬಿಡಿಸಿದರು. ಮೇಷ್ಟ್ರು ಹೋಗಿ ಕುರ್ಚಿ ಮೇಲೆ ಕುಳಿತುಕೊಂಡರು. ತರಗತಿ ತಹಬಂದಿಗೆ ಬಂತು. ಸೋಮು ಎದ್ದುನಿಂತು, "ಸಾರ್, ನಾವು ಸ್ವಲ್ಪ ಆಚೆ ಹೋಗಬೇಕು, ಬಿಡಿ ಸಾರ್ ಕ್ಲಾಸಿಗೆ ತೊಂದರೆ ಮಾಡೋಲ್ಲ" ಎಂದ. ಮೇಷ್ಟರು ವಿಧಿಯಿಲ್ಲದೆ ಆಗಲೆಂದರು. ಅವರು ಹೂಗುಟ್ಟುವುದಕ್ಕೆ ಮೊದಲೇ ಬಟಾಣಿಯನ್ನೂ ಸ್ವಾಮಿನಾಥನನ್ನೂ ಎಳೆದುಕೊಂಡು ಮಣಿ ಹೊರಟೇಬಿಟ್ಟಿದ್ದ. ಶಂಕರನೂ ಸೋಮುವೂ ಹಿಂಬಾಲಿಸಿದರು.

ಒಟ್ಟಿಗೆ ಹುಣಿಸೆಮರದ ಕೆಳಕ್ಕೆ ಹೋದರು. ಬಿಗುಮಾನದಿಂದ ಎಲ್ಲರೂ ಸುಮ್ಮನಿದ್ದರು. ಮೌನವನ್ನು ಮುರಿಯಲು ಮಣಿಯೇ ಮೊದಲು, "ಯಾಕ್ರೋ, ಏನ್ರೋ, ಗಲಾಟೆ ನಿಮ್ಮದು? ಮೂರು ಮಾವಿನಕಾಯಷ್ಟುದ್ದ ಇಲ್ಲ, ಹೊಡೆದಾಡ್ತಾರಂತೆ!" ಎಂದು ಕೂಗಾಡಿದ. ಮೂವರೂ ಒಟ್ಟಿಗೆ ಮಾತನಾಡಹತ್ತಿದರು. ಎಲ್ಲರಿಗಿಂತ ಸ್ವಾಮಿಯ ಗಂಟಲೇ ಜೋರು. "ಅವನು - ಆ ಬಟಾಣಿ - ಬಾಲ ಅಂತ ಬರೆದ - ಬಾಲ ಅಂತೆ - ದೊಡ್ಡ ಬಾಲ - ಬೋರ್ಡಿನ ಮೇಲೆ ದೊಡ್ಡ - "

"ಏನಿಲ್ಲ - ನಾನೇನೂ ಬರೀಲಿಲ್ಲ - ಕತ್ತೆ" ಎಂದು ಬಟಾಣಿ ಅರಚಿದ.

"ಅವನೂ ಬರೆದ" ಎಂದು ಸ್ವಾಮಿ ಶಂಕರನ ಕಡೆ ಬೆರಳು ತೋರಿಸಿದ

"ಭಡವ, ನೋಡಿದ್ಯೇನೋ ನಾ ಬರೆದ್ನ?" ಎಂದು ಶಂಕರ ಕೂಗಿದ.

ಅವರಿಬ್ಬರ ಬಾಯನ್ನು ಮಣಿ ತನ್ನ ಕೈಯಿಂದ ಮುಚ್ಚಿದ. "ಅದೆಲ್ಲ ಸರಿ, ಬಾಲ ಬರದಾಕ್ಷಣ ನಿನಗೇಕೆ ಅಳುಕಬೇಕು" ಎಂದು ಕೇಳಿದ, ಅಡ್ಡ ಹೆಸರಿನ ವಿಷಯ ಇದುವರೆಗೆ ಯಾರೂ ಅವನಿಗೆ ತಿಳಿಸಿರಲಿಲ್ಲ.

"ನನ್ನನ್ನ ಇವರೆಲ್ಲ ರಾಜಂ ಬಾಲ ಅಂತ ಕರೀತಾರೆ" ಎಂದು ಅಳ್ತಾ ಅಳ್ತಾ ಹೇಳಿದ ಸ್ವಾಮಿ.

ಮಣಿ ಮುಖ ಗಂಟುಹಾಕಿಕೊಂಡು, "ಯಾವನೋ ರಾಜಂ ವಿಷಯ ಮಾತಾಡೋವನು?" ಎಂದು ಸವಾಲ್ ಹಾಕಿದ.

"ನಾನು ಮಾತಾಡ್ತೀನಿ, ಏನುಮಾಡ್ತೀಯಾ" ಸೋಮು ಉತ್ತರ ಕೊಟ್ಟ.

ಶಂಕರ, ಬಟಾಣಿ ಇಬ್ಬರೂ ನಡುಗುತ್ತ ನಿಂತಿದ್ದರು.

"ನೀವೇನಾದರೂ ಮಾಡಿದರೆ-" ಮಣಿ ಅವರನ್ನು ಬೆದರಿಸಿದ.

"ಮಾಡಿದರೆ ನೀನೇನು ಮಾಡ್ತೀಯೋ ಮಹಾ?" ಎಂದು ಸೋಮು ಮೂದಲಿಸಿದ.

"ಬೇಡ ಸೋಮು, ಬೇಡ, ಸುಮ್ಮನೆ ಇರು"

"ಲೋ ಮಣಿ, ಸಾಕು ಸುಮ್ಮನಿರೋ, ನಿನ್ನ ಕೊಬ್ಬು ಯಾರ ಮುಂದೆ ತೋರಿಸ್ತೀಯ? ನಿನ್ನ ಸಮಾನ ಯಾರು ಇಲ್ಲಾ ಅಂದ್ಕೊಂಬಿಟ್ಟಿದ್ದೀಯೋ? ಬಹಳ ದಿನದಿಂದ ನಿನಗೆ ಪಾಠ ಕಲಿಸಬೇಕೂ ಅಂತ ಅಂದ್ಕೊಂಡಿದ್ದೆ" ಎಂದು ಸೋಮು ಹೇಳಿ ಮುಗಿಸಬೇಕು, ಅಷ್ಟರಲ್ಲಿ ಮಣಿಯ ಕೈ ಅವನ ಕುತ್ತಿಗೆ ಮೇಲಿತ್ತು. ಸೋಮು ಅವನನ್ನು ಝಾಡಿಸಿ ನೂಕಿದ. ಮಣಿ ಓಡಿಬಂದು ಗುರಿಯಿಟ್ಟು ಒದೆಯಬೇಕು; ಸೋಮು ತಟಕ್ಕನೆ ಪಕ್ಕಕ್ಕೆ ಸರಿದ. ಬಂದ ಜೋರಿಗೆ ತಾನೇ ಮುಗ್ಗರಿಸಬೇಕಾಯಿತು ಮಣಿ.

ಮೂವರು ಚಿಕ್ಕವರೂ ತಮ್ಮ ಕಣ್ಣನ್ನು ತಾವೇ ನಂಬಲಿಲ್ಲ. ಏನು? ಸೋಮು ಮಣಿ ಜಗಳ ಆಡೋದೆ! ಓ! ಒಬ್ಬರನ್ನೊಬ್ಬರು ಕೊಂದುಹಾಕಿ ಬಿಡುತ್ತಾರೆ. ನಿನ್ನಿಂದ ಹೀಗಾಯಿತು ಎನ್ನುವಂತೆ ಒಬ್ಬರನ್ನೊಬ್ಬರು ದುರುಗುಟ್ಟಿಕೊಂಡು ನೋಡುತ್ತಾ ಸ್ಕೂಲಿನ ಕಡೆ ಮೂವರೂ ಓಡೋಡಿಹೋದರು.

ಓಡಿದವರೇ ನುಗ್ಗಿದರು ಹೆಡ್‌ಮೇಷ್ಟರ ಕೋಣೆಯೊಳಕ್ಕೆ. ಇವರೇನು ಹೇಳುತ್ತಿದ್ದಾರೋ ಅರ್ಥವೇ ಆಗಲಿಲ್ಲ ಆತನಿಗೆ. ಬಹಳ ಹೊತ್ತಿಗೆ ಆತನಿಗೆ ಗೊತ್ತಾಯಿತು, ಪಕ್ಕದ ಮೈದಾನದಲ್ಲಿ ಅದೇ ಕ್ಷಣದಲ್ಲಿ ಎರಡು ಕೊಲೆಗಳು ನಡೆಯುತ್ತಿವೆಯೆಂದು. ಗಟ್ಟಿಯಾಗಿ ನಕ್ಕುಬಿಡೋಣವೆನ್ನಿಸಿತು. ಆದರೆ ಹುಡುಗರ ಮುಖದ ಮೇಲಿದ್ದ ಗಂಭೀರ ಮುದ್ರೆಯನ್ನು ಕಂಡು ನಗುವನ್ನು ತಡೆದುಕೊಂಡು ಬದಲಾಗಿ ಗಡ್ಡವನ್ನು ಕೆರೆದುಕೊಂಡು ಜವಾನನನ್ನು ಕರೆದುಕೊಂಡು ಮೈದಾನಕ್ಕೆ ಹೊರಟರು.

ಮೈದಾನದಲ್ಲೆಲ್ಲ ಹೊರಳಾಡುತ್ತಿದ್ದಾರೆ ಹೋರಾಟಗಾರರು. ಹೆಡ್ ಮೇಷ್ಟರೂ ಜವಾನನೂ ನಿರಾಯಾಸವಾಗಿ ಅವರನ್ನು ಹಿಡಿದು ನಿಲ್ಲಿಸಿದರು. ಸ್ವಾಮಿನಾಥನಿಗೆ ತುಂಬ ಆಶ್ಚರ್ಯ. ಸೋಮುವಿಗೂ ಮಣಿಗೂ ಇರುವಷ್ಟು ಬಲ ಭೂಮಿಯಲ್ಲೇ ಇನ್ನು ಯಾರಿಗೂ ಇಲ್ಲಾ ಅಂತ ಇಷ್ಟು ದಿನವೂ ಅವನು ತಿಳಿದುಕೊಂಡಿದ್ದ. ಅಂಥಾದ್ದು, ಸ್ಕೂಲು ಜವಾನ ಅವರನ್ನು ಕಟ್ಟಿಹಾಕಬಲ್ಲನೇ?

# ಆಪತ್ತಿಗೆ ಒದಗಿದವನೇ ನಂಟ

ಇದಾಗಿ ಮೂರು ವಾರ ಕಳೆದಿದೆ. ಮಧ್ಯಾಹ್ನದ ಸಮಯ. ಸ್ವಾಮಿನಾಥ ಮಣಿಯ ಮನೆಯ ಮುಂದೆ ನಿಂತು ಮೆಲ್ಲಗೊಂದು ಸಿಳ್ಳುಹಾಕಿದ. ಒಳಗಿಂದ ಮಣಿ ಬಂದ. ಇಬ್ಬರೂ ಹೊರಟರು ರಾಜಂ ಮನೆಯ ಕಡೆ. ಆ ದಿನ ಒಂದು ತಮಾಷೆ ಕೊಡ್ತೀನಿ ಎಂದಿದ್ದ ರಾಜಂ. ಅದೇನಿರಬಹುದು ಎಂದು ಇಬ್ಬರಿಗೂ ಯೋಚನೆ.

"ಏ, ಆ ರಾಜಂ ಸುಮ್ಮಸುಮ್ಮನೆ ಹೇಳಿರಬೇಕು ಕಾಣೋ, ತಮಾಷೆಯೂ ಇರೊಲ್ಲ, ಗಿಮಾಷೆಯೂ ಇರೊಲ್ಲ. ತನ್ನ ಮನೆಗೆ ಬಾ ಎನ್ನೋಕೆ ಇದೊಂದು ಯುಕ್ತಿ" ಎಂದ ಸ್ವಾಮಿ. ಈ ರೀತಿ ಹೇಳಿದ್ದಕ್ಕೆ ಮಣಿ ಅವನನ್ನು ಚರಂಡಿಗೆ ತಳ್ಳಿಬಿಡುವುದರಲ್ಲಿದ್ದ.

ಸ್ವಾಮಿನಾಥನ್‌ಗೆ ಇನ್ನೂ ಒಂದು ತೋರಿತು. "ಕೋತೀನೋ ಏನೋ ತಂದಿರಬೇಕು ಕಾಣೋ ಮನೇಗೆ" ಎಂದ. ಇದ್ದರೂ ಇರಬಹುದು ಎನಿಸಿತು ಮಣಿಗೆ. ಇನ್ನೂ ಏನೇನಿರಬಹುದೊ ಎಲ್ಲ ಊಹೆಯನ್ನೂ ಮಾಡಿ ಕೊನೆಗೆ ಬೇಸರದಿಂದ ಸುಮ್ಮನಾದರು.

ಆಮೇಲೆ ಅವರ 'ಎನಿಮಿ'ಗಳ ಮಾತು ಬಂತು. "ನಾನೇನು ಮಾಡ್ತೀನಿ ಗೊತ್ತೇನೋ?" ಎಂದ ಮಣಿ, "ಆ ಸೋಮು ಇದ್ದಾನಲ್ಲ. ಅವನ ಸೊಂಟ ಮುರಿದಾಕಿಬಿಡ್ತೀನಿ. ಅವನ ಮನೆ ಎಲ್ಲಿದೇ ಅಂತ ನನಗೆ ಗೊತ್ತು. ಮಾರ್ಕೆಟ್ ಹಿಂದೆ ಕಬೀರ್ ರಸ್ತೇಲಿದೆ ಕಣೊ. ರಾತ್ರಿ ಹೊತ್ತು ವೀಳೆದೆಲೆ ಕೊಂಡ್ಕೊಳ್ಳೋಕೆ ಅಂತ ನಿತ್ಯ ಒಂದು ಅಂಗಡೀಗೆ ಬರ್ತಾನೆ. ಎಷ್ಟೋ ಸಲ ನೋಡಿದ್ದೇನೆ ನಾನು. ಹೋದದ್ದೇ, ಒಂದು ಕಲ್ಲು ತೊಕೊಂಡದ್ದೇ ಬೀದಿಯ ಲಾಂದ್ರಕ್ಕೆ ರೊಯ್ ಅಂತ ಬೀರ್ತೀನಿ. ದೀಪ ಆರಿಹೋಗಬೇಕ್...... ಕಬೀರ್ ರಸ್ತೇಲಿ ಎಷ್ಟು ಕತ್ತಲೂಂತ ನಿನಗೆ ಗೊತ್ತಿಲ್ಲ. ಆಮೇಲೆ ನನ್ನ ಗದೆ ಇಟ್ಟುಕೊಂಡು ಕಾದಿರ್ತೀನಿ. ಬರ್ತಾನೆ. ಬಂದ ಕೂಡಲೆ - ಅಲ್ಲೇ ಆ ಧೂಳಲ್ಲೇ ಬಿದ್ದು ಒದ್ದಾಡಬೇಕು, ಮೂಳೆಯೆಲ್ಲಾ ಪುಡಿಪುಡಿ........" ಸ್ವಾಮಿನಾಥನ ಮೈಯೆಲ್ಲಾ ಜುಮ್ಮೆಂದಿತು. "ಅಷ್ಟೇ ಅಲ್ಲಾಮ್ಮಾ!" ಮಣಿ ತನ್ನ ಏರ್ಪಾಡನ್ನು ಇನ್ನೂ ವಿವರಿಸಿದ. "ಆ ಬಟಾಣೀನ ಕಾಲ ಕೆಳಗೆ ಹಾಕಿಕೊಂಡು ಅದುಮಿ ಅಪ್ಪಚ್ಚಿ ಮಾಡಿಬಿಡ್ತೀನಿ. ಆಮೇಲೆ ಆ ಶಂಕರನನ್ನ ಜುಟ್ಟು ಹಿಡಿದು ಎತ್ತಿಕೊಂಡು ಹೋದ್ದೇ, ಸರಯೂ ನದಿಯ ಅರಳೀಮರಕ್ಕೆ ನೇತುಹಾಕ್ತೀನಿ ನೋಡ್ತಾ ಇರು."

"ಯಾಕ್ರೋ ಗೋಡೆ ಹತ್ತಿದ್ದು" ಅಂತ ತರಾಟೆಗೆ ತೆಗೆದು ಕೊಂಡ. ಮಣಿ ಫಕ್ಕಂತ ನಕ್ಕು "ಏನೋ, ನಿಮ್ಮಪ್ಪನ ಮನೇ ಗಂಟೇನೋ ಹೋಯ್ತು. ಹಾಗಾಡ್ತೀಯ?" ಎಂದು ಕೇಳಿದ.

"ನಿಮ್ಮ ಮೂಳೆ ಏನಾದ್ರೂ ಮುರಿದು ಹೋಗಿದ್ದರೆ -" ಜವಾನ ಷುರು ಮಾಡಿದ.

"ನಿನಗೇನಂತೆ? ಲೋ ಮಣಿ, ಏನಾಗಿದೆಯೋ ನಮ್ಮ ಮೂಳೇಗೆ" ಎಂದು ಸ್ವಾಮಿಯೂ ಗೊಳ್ಳಂತ ನಕ್ಕ.

"ಇನ್ನೊಂದು ಮಾತು, ನೀನು ಪೋಲೀಸ್ ಸೂಪರಂಟೆರ ಮಗನೇನೋ" ಎಂದು ಮಣಿ ಪೋಣಿಸಿದ.

"ಅಲ್ಲ, ನಾನ್ಯಾಕಾದೇನು?" ಎಂದ ಜವಾನ.

"ಸರಿ, ಬಿಡು ಹಾಗಾದ್ರೆ. ನಾವು ಪೋಲೀಸ್ ಸೂಪರಂಟೆರ ಮಗ ಇದ್ದಾನಲ್ಲ, ಅವನನ್ನ ನೋಡೋಕೇ ಬಂದಿರೋದು. ಗೊತ್ತಾಯ್ತೋ?......"ಜವಾನ ಬಾಯಿ ಮುಚ್ಚಿಕೊಂಡು ಹೊರಟುಹೋದ.

ರಾಜಂ ಕೋಣೆಯ ಬಾಗಿಲನ್ನು ಇಬ್ಬರೂ ಬಲವಾಗಿ ತಟ್ಟಿದರು. ಚಿಲಕದ ಸದ್ದಾಯಿತು. ತಕ್ಷಣ ಇಬ್ಬರೂ ಅಲ್ಲೇ ಇದ್ದ ಭಾರಿ ಕಂಬದ ಮರೆಯಲ್ಲಿ ಅವಿತುಕೊಂಡುಬಿಟ್ಟರು. ರಾಜಂ ಇಣಿಕಿ ನೋಡಿದ. ಯಾರೂ ಇರಲಿಲ್ಲ. ಬಾಗಿಲು ಮತ್ತೆ ಹಾಕಿಕೊಂಡ.

ಕಂಬದ ಮರೆ ಬಿಟ್ಟು ಇಬ್ಬರೂ ಬಂದರು. ಬಾಗಿಲ ಹತ್ತಿರ ನಿಂತು, ಏನು ಮಾಡುವುದೆಂದು ಯೋಚಿಸಿದರು. ಬಾಗಿಲ ಕಿಂಡೀಗೆ ಸ್ವಾಮಿನಾಥ ತನ್ನ ಬಾಯಿಟ್ಟು 'ಮಿಯಾವ್' ಎಂದು ಬೆಕ್ಕಿನ ಹಾಗೆ ಕೂಗಿದ. ಮಣಿ ಅವನನ್ನೆಳೆದು ಹಾಕಿ ತಾನೂ ತನ್ನ ಬಾಯಿಟ್ಟು 'ಬೌಬೌ' ಎಂದು ನಾಯಿಯ ಹಾಗೆ ಬಗುಳಿದ. ಮತ್ತೆ ಚಿಲಕದ ಸದ್ದಾಯಿತು. ಬಾಗಿಲು ಕೊಂಚ ಓರೆಯಾಯಿತು. ಸ್ವಾಮಿನಾಥನ ಕಿವಿಯಲ್ಲಿ ಮಣಿ ಪಿಸುಗುಟ್ಟಿದ. "ನೀನು ಕುರುಡು ಬೆಕ್ಕು, ನಾನು ಕುರುಡು ನಾಯಿ, ಆಗಲೀನಾ?"

ಮಣಿ ಅಂಬೆಗಾಲಿಟ್ಟಿದ್ದೇ, ಕಣ್ಣು ಮುಚ್ಚಿಕೊಂಡು ತಲೆಯಿಂದ ಬಾಗಿಲನ್ನು ನೂಕಿಕೊಂಡು, ಕುರುಡು ನಾಯಿಯ ವೇಷದಲ್ಲಿ ಕೊಠಡಿಯೊಳಕ್ಕೆ ಹೋದ. ಬಲವೆಲ್ಲ ಬಿಟ್ಟು ಮಿಯಾವ್ ಎಂದು ಕೂಗುತ್ತ ಸ್ವಾಮಿ ಅವನ ಹಿಂದೆಯೇ ತೆವಳಿಕೊಂಡು ಹೋದ. ಈ ನಾಯಿ, ಈ ಬೆಕ್ಕು ಎರಡೂ ರೂಮಿನ ಸುತ್ತ ಸುತ್ತಿದ್ದೂ ಸುತ್ತಿದ್ದೇ. ಆಟದ ಸ್ವಾರಸ್ಯ ಹೆಚ್ಚಿಸುವುದಕ್ಕೆ ರಾಜಂ ಒಂದೊಂದು ಸಲ ನಾಯಿ ಹಾಗೂ ಒಂದೊಂದು ಸಲ ಬೆಕ್ಕಿನ ಹಾಗೂ ಕೂಗುತ್ತಿದ್ದ. ಕುರುಡು ನಾಯಿಗೆ ಯಾರದೋ ಒಂದು ಕಾಲು ಸಿಕ್ಕಿತು. ರಾಜಂದೇ ಆ ಕಾಲು ಎಂದು ಅದನ್ನು ಮೆಲ್ಲಗೆ ಕಚ್ಚಿದ. ಕಚ್ಚಿ ಕಣ್ಣು ತೆಗೆದು ನೋಡುತ್ತಾನೆ, ಆ ಕಾಲು ಸೋಮೂದು. ತನ್ನ ಶತ್ರು ಸೋಮೂದು! ಹೇಗಿರಬೇಕು ಅವನ ಫಜೀತಿ? ಕುರುಡು ಬೆಕ್ಕಿಗೆ ಇನ್ನು ಯಾವುದೋ ಒಂದು ಕಾಲು ಸಿಕ್ಕಿತು. ರಾಜಂ ಕಾಲು ತಾನೇ ಎಂಬ ಧೈರ್ಯದಿಂದ ಬಲವಾಗಿ ಪರಚಿದ. ಕಣ್ಣು ಬಿಟ್ಟು ನೋಡಿದರೆ ಅದು ಶಂಕರನ ಕಾಲು, ತನ್ನ 'ಎನಿಮಿ' ಶಂಕರನ ಕಾಲು!

ಮಣಿ ಒಂದು ಕ್ಷಣ ಕಲ್ಲಿನಂತೆ ಸ್ತಬ್ಧನಾಗಿದ್ದ. ಆಮೇಲೆ ಸರ್ರನೆ ಎದ್ದು ನಿಂತು ಸುತ್ತುಮುತ್ತು ನೋಡಿದ. ನಾಚಿಕೆ, ರೋಷ ಎರಡೂ ಸೇರಿ ಮುಖ ವೆಲ್ಲ ಥರಥರಿಸುತ್ತಿತ್ತು. ಬಟಾಣಿ ಒಂದು ಮೂಲೆಯಲ್ಲಿ ಕುಳಿತುಕೊಂಡು ಅವನನ್ನು ನೋಡಿ ಕುಹಕದಿಂದ ನಗುತ್ತಿದ್ದ. ಅವನ ಕತ್ತು ಕಿವಿಚಿ ಹಾಕಿ ಬಿಡೋಣವೆ ಎನ್ನಿಸಿತು, ಮಣಿಗೆ. ಇನ್ನೊಂದು ಕಡೆ ತಿರುಗಿದರೆ, ರಾಜಂ ಕೂಡ ಹಲ್ಲು ಕಿಸಿಯುತ್ತಿದ್ದಾನೆ.

ಈ ಅವಮಾನವನ್ನು ತಾಳಲಾರದೆ ಸ್ವಾಮಿನಾಥ ಮೇಜಿನ ಕೆಳಗೆ ಕತ್ತಲೆಯಲ್ಲಿ ಅವಿತುಕೊಂಡುಬಿಟ್ಟ.

"ರಾಜಂ, ಏನಯ್ಯಾ ಇದರರ್ಥ?" ಎಂದ ಮಣಿ.

"ಯಾಕೆ ಹೀಗಾಡ್ತೀಯೋ ಕಾಡು ಪ್ರಾಣೀ ಹಾಗೆ?"

"ಮತ್ತಿನ್ನೇನೋ, ತಪ್ಪೆಲ್ಲಾ ನಿನ್ನದೇ-ನನಗೆ ಗೊತ್ತಿರಲಿಲ್ಲ...." ಮಣಿ ಎಲ್ಲರ ಕಡೆಯೂ ತಿರುಗಿದ.

"ಅದು ಹಾಗಿರಲೋ, ಅಂಬೆಗಾಲಿಟ್ಟುಕೊಂಡು ಓಡಾಡು, ನಾಯಿ ಹಾಗೆ ಬೊಗಳು ಅಂತ ನಾ ಹೇಳಿದ್ನೇ ನಿನಗೆ?"

ಸೋಮೂ ಮತ್ತು ಗುಂಪಿನವರೂ ಗೊಳ್ಳೆಂದು ನಕ್ಕುಬಿಟ್ಟರು. ಮಣಿ ಬಿರುಗಣ್ಣಿನಿಂದ ನೋಡ್ತಾ, "ಅಯ್ಯ ರಾಜಂ, ನಾನು ಹೋಗ್ತೀನಯ್ಯ. ನನ್ನಂಥಾವರಿಗೆ ಇದು ಸ್ಥಳವಲ್ಲ" ಎಂದ.

"ತಿರುಗಿ ನನ್ನ ಸಂಗ ಬಿಡಬೇಕು ಅಂತ ನಿನಗೆ ಇಷ್ಟವಾದರೆ ಆಗತ್ಯವಾಗಿ ಹೋಗಬಹುದು" ಎಂದ ರಾಜಂ.

ಮಣಿ ಹಿಂದೆ ಮುಂದೆ ನೋಡಿದ. ರಾಜಂ ಅವನನ್ನು ಒಂದು ಪಕ್ಕಕ್ಕೆ ಕರೆದುಕೊಂಡು ಹೋಗಿ, ಒಳ್ಳೆಯ ಮಾತಾಡಿ ಸಮಾಧಾನ ಮಾಡಿದ. ಆಮೇಲೆ ಸ್ವಾಮಿನಾಥನ ಹತ್ತಿರ ಬಂದ. ಅವನಂತೂ ಸಂಕಟದಲ್ಲಿ ಮುಳುಗಿ ಹೋಗಿದ್ದ. ಅವನನ್ನು ಸಮಾಧಾನ ಪಡಿಸುವುದಕ್ಕೆಂದು ರಾಜಂ ಹೇಳಿದ : "ಅಬ್ಬಾ, ನನ್ನ ಜೀವಮಾನದಲ್ಲೇ ನೋಡಿಲ್ಲ, ಇಷ್ಟು ಚೆನ್ನಾಗಿ ನಾಯಿ ಬೆಕ್ಕಿನ ವೇಷ ಹಾಕೋದನ್ನ. ನಿಜವಾದ ಬೆಕ್ಕೇ ಅಂತ ಅಂದುಕೊಂಡುಬಿಟ್ಟಿದ್ದೆ ಬಹಳ ಹೊತ್ತು. ಸ್ಕೂಲ್ ಡೇನಲ್ಲಿ ಮಾಡಿದರಂತೂ ಖಂಡಿತ ಪ್ರೈಜ್ ಬರುತ್ತೆ. ನೀವು ಇನ್ನೂ ಒಂದು ಸಲ ಮಾಡೋದಾದರೆ ನಮ್ಮ ತಂದೇನೂ ಕರ್ಕೊಂ ಬರ್ತೀನಿ."

ಸ್ವಾಮಿಗೂ ಮಣಿಗೂ ಬಹಳ ಖುಷಿಯಾಯಿತು. ಇದಾದಮೇಲೆ ರಾಜಂ ಎಲ್ಲರಿಗೂ ತಿಂಡಿ ತರಿಸಿಕೊಟ್ಟ. ಇದರಿಂದ ಅವರಿಗೆ ಮತ್ತೂ ಸಮಾಧಾನವಾಯಿತು. ಆದರೆ ಆ ಮೂರು ಜನರು ಇದ್ದಾರಲ್ಲ..... ಅವರು ಇಲ್ಲದೆ ಹೋಗಿದ್ದರೆ?

ಎಲ್ಲರೂ ಹೀಗೆ ತೃಪ್ತಿಯಿಂದಿರುವುದನ್ನು ನೋಡಿ, ಸ್ನೇಹದ ಮಹತ್ವದ ಮೇಲೆ ರಾಜಂ ಒಂದು ಉಪನ್ಯಾಸವನ್ನೇ ಆರಂಭಿಸಿದ. ಸ್ನೇಹದ ವಿಷಯವಾಗಿ ಅನೇಕ ಸಂಗತಿ

ಹೇಳಿದ. ಸಾಯುವ ಮುದುಕನೊಬ್ಬ ತನ್ನ ಮಕ್ಕಳಿಗೆ ಒಗ್ಗಟ್ಟಿನ ಬಲ ಹೇಳಿಕೊಡಲು ಎಲ್ಲರನ್ನೂ ಒಂದೊಂದು ಕೋಲು ತನ್ನಿ ಎನ್ನುತ್ತಾನಲ್ಲ ಆ ಕತೆಯನ್ನು ತನ್ನ ಪುಸ್ತಕದಿಂದ ತೆಗೆದು ಉದಾಹರಣೆಯಾಗಿ ಕೊಟ್ಟ. ಒಗ್ಗಟ್ಟಿನಲ್ಲೇ ಬಲವುಂಟು, ಆಪತ್ತಿಗೆ ಒದಗಿದವನೇ ನಿಜವಾದ ನಂಟ, ದ್ವೇಷ ಬೆಳಸಿದವರ ಗತಿ ಏನಾಗುವುದೆಂದು ಮೈಮುಳ್ಳೇಳುವಂಥ ಕತೆಗಳನ್ನು ಹೇಳತೊಡಗಿದ ರಾಜಂ. ಹಗೆತನ ಸಾಧಿಸಿದವನನ್ನು ಸತ್ತಮೇಲೆ ಒಂದು ಸಣ್ಣ ಕೋಣೆಯಲ್ಲಿ ಕೂಡಿಹಾಕಿಬಿಡುತ್ತಾರೆಂದು ವೇದದಲ್ಲೇ ಹೇಳಿದೆಯಂತೆ. ಕೆಂಪಗೆ ಕಾದಿರುವ ಕಬ್ಬಿಣದ ಕಂಬದ ಮೇಲೆ ಬೆತ್ತಲೆಯಾಗಿ ನಿಲ್ಲಿಸುತ್ತಾರಂತೆ. ತಲೆಯ ಸುತ್ತ ದೊಡ್ಡ ದೊಡ್ಡ ಜೇನುಗೂಡುಗಳಿರುತ್ತವಂತೆ. ಒಂದೊಂದು ಜೇನು ನೊಣವೂ ಒಂದೊಂದು ನಿಂಬೇಕಾಯಿ ಗಾತ್ರ ಇರುತ್ತವಂತೆ. ಕಂಬದಿಂದ ಆ ಪಾಪಿಯೇನಾದರೂ ಇಳಿದನೆಂದರೆ ಕಾಲಿಡುವ ಕಡೆಯೆಲ್ಲ ಚೇಳುಗಳು ಜರಿಗಳು ಕಾದಿರುವುವಂತೆ. ಒಂದೊಂದು ಚೇಳೂ ಒಂದೊಂದು ಮೊಸಳೆ ಗಾತ್ರ ಇರುತ್ತವಂತೆ -

ಮಣಿ, ಶಂಕರ, ಬಟಾಣಿ, ಸ್ವಾಮಿ - ಎಲ್ಲರ ಮೈಯೂ ಬೆವರಿತು.

- ಆ ಪಾಪಿಯು ಈ ರೀತಿ ಒಂದು ತಿಂಗಳಕಾಲ ಊಟ ನಿದ್ದೆ ಒಂದೂ ಇಲ್ಲದೆ ನಿಂತಿರಬೇಕಂತೆ. ಈ ಒಂದು ತಿಂಗಳಾದ ಮೇಲೆ ಅವನನ್ನು ಇನ್ನೊಂದು ಕಡೆಗೆ ಕರೆದುಕೊಂಡು ಹೋಗುತ್ತಾರೆ. ಕುದಿಯುವ ಎಣ್ಣೆಯ ದೊಡ್ಡ ಸರೋವರ. ಅದರ ಮೇಲೆ ಒಂದು ಸೇತುವೆ. ಆ ಸೇತುವೆ ಎಷ್ಟು ಇಕ್ಕಟ್ಟೋ ಅಂದರೆ ಅದರ ಮೇಲೆ ಒಂದೇ ಕಾಲಿಡಲಿಕ್ಕಾಗುವುದು. ಇಂಥ ಇಕ್ಕಟ್ಟಿನ ಸೇತುವೆ ಮೇಲೂ ಬ್ರಹ್ಮಾಂಡವಾಗಿ ಪಾಪಾಸುಕಳ್ಳಿ, ಗೊಬ್ಬಳೀ ಮುಳ್ಳು ಬೆಳೆದು ಕೊಂಡಿರುತ್ತವಂತೆ. ಅವರ ಮಧ್ಯೆ ಮಂಡರಗಪ್ಪೆಗಳು ಮನೆ ಮಾಡಿಕೊಂಡಿರುತ್ತವಂತೆ. ಆ ತಪ್ಪು ಮಾಡಿದವನನ್ನು "ನಡಿ ನಡಿ" ಎಂದು ಹಿಂದಿನಿಂದ ಅಟ್ಟುತ್ತಾರಂತೆ. ಅವನು ಒಂದೇ ಕಾಲಿನ ಮೇಲೆ ಕುಪ್ಪಳಿಸಿಕೊಂಡು ಹೋಗಬೇಕು. ಕಾಲು ಬದಲಾಯಿಸಕೂಡದು. ಹೀಗೆ ಸಾವಿರಾರು ವರ್ಷ, ಕೊನೆಮೊದಲು ಇಲ್ಲದೆ ಹೋಗುತ್ತಲೇ ಇರಬೇಕು.ಇಲ್ಲವೆ, ಕುದಿಯುವ ಎಣ್ಣೆಯಲ್ಲಿ ಬೀಳಬೇಕು.

ಸೇರಿದ್ದವರ ಮನಸ್ಸಿಗೆಲ್ಲ ಇದು ನಾಟಿತು. ರಾಜಂ ಹೇಳಿದ : "ಅದಕ್ಕೇನೇಪ್ಪಾ ನಾನು ಹೇಳೋದು, ನೀವೆಲ್ಲ ದ್ವೇಷ ಬಿಟ್ಟು ಸ್ನೇಹಿತರಾಗಿರೀ ಅಂತ. ಎಲ್ಲಿ, ಒಬ್ಬೊಬ್ಬರಾಗಿ ಹೇಳಿ, 'ಇನ್ನುಮೇಲೆ ನಾನು ದ್ವೇಷ ಮಾಡೊಲ್ಲ' ಅಂತ. ಶಂಕರಾ, ನೋಡು. ನೀನು ಹೇಳಿದೆ ಅಂದರೆ, ನಿನಗೊಂದು ದಪ್ಪ ನೋಟ್‌ಬುಕ್ಕು ಕೊಡ್ತೀನಿ, ನಾನೂರು ಹಾಳೇದು. ಸ್ವಾಮಿ, ನೀನು ಹೇಳಿದರೆ ನಿನಗೊಂದು ಇಂಜನ್ನು ಕೊಡ್ತೀನಿ. ಸೋಮು, ನಿನಗೊಂದು ಬೆಲ್ಟು ಕೊಡ್ತೀನಿ. ಮಣಿ, ನಿನಗೊಂದು ಒಳ್ಳೇ ಚಾಕು ಕೊಡ್ತೀನಿ. ಬಟಾಣಿ, ನೀನು ಆಗಲಿ ಎನ್ನುವುದಾದರೆ ನಿನಗೊಂದು ಪೆನ್ನು ಕೊಡ್ತೀನಿ."

ಬೀರೂ ಬಾಗಿಲನ್ನು ಅಗಲವಾಗಿ ತೆಗೆದು ಎಲ್ಲರಿಗೂ ಬಹುಮಾನಗಳನ್ನು ಪ್ರದರ್ಶಿಸಿದ. ಎಲ್ಲರೂ ನಿಶ್ಶಬ್ದವಾಗಿದ್ದರು. ಸ್ವಾಮಿನಾಥ ತನ್ನ ಉಗುರು ಕಚ್ಚಿಕೊಳ್ಳುತ್ತಿದ್ದ.

ರಾಜಂ ಹಣೆಯ ಮೇಲೆ ಬೆವರೂರಿತು.

ಬಟಾಣಿ ಎದ್ದ. ರಾಜಂ ಹತ್ತಿರ ಬಂದ. "ಎಲ್ಲಿ ಆ ಫೌಂಟೆನ್‌ಪೆನ್ ತೋರಿಸು" ಎಂದ. ರಾಜಂ ಅದನ್ನು ಕೊಟ್ಟ. ಬಟಾಣಿ ಅದನ್ನ ಹೀಗೆ ಹಾಗೆ ತಿರುಗಿಸಿ ನೋಡಿ, ಏನೂ ಮಾತಾಡದೆ ವಾಪಸು ಕೊಟ್ಟ. "ಯಾಕೋ, ಚೆನ್ನಾಗಿಲ್ಲವೇನೋ?" ಎಂದ ರಾಜಂ. ಬಟಾಣಿ ಬೀರುವನ್ನೇ ನೋಡುತ್ತಿದ್ದವ, "ಆ ಪೆಟ್ಟಿಗೆ ಕೊಡ್ತೀಯೇನೋ?" ಎಂದು ಕೇಳಿದ. ಅಲ್ಲೊಂದು ಸಣ್ಣ ಪೆಟ್ಟಿಗೆಯಿತ್ತು. ಅದರ ಮೇಲೆ ಕಪ್ಪು ಹಳದಿ ಬಣ್ಣಗಳಲ್ಲಿ ತಾಜ್‌ಮಹಲ್ ಕೆತ್ತಿತ್ತು. "ಅದು ಕೊಡೊಲ್ಲ, ಅದು ನನಗೆ ಬೇಕು" ಎಂದ ರಾಜಂ. ಯೋಚನೆ ಮಾಡಿದ. ತನ್ನ ಟ್ರಂಕಿನಲ್ಲಿ ಅದೇ ಥರದ ಪೆಟ್ಟಿಗೆ ಇನ್ನೂ ಎರಡಿತ್ತು. ಮನಸ್ಸು ಬದಲಾಯಿಸಿ, "ಬಟಾಣಿ, ಆ ಪೆಟ್ಟಿಗೆ ನನಗೆ ಬೇಡ. ಬೇಕಾದರೆ ನೀನೇ ತೊಗೋಬಹುದು" ಎಂದ.

ಸ್ವಲ್ಪ ಹೊತ್ತಾದ ಮೇಲೆ, ಮಣಿ ಚಾಕುವನ್ನು ತನ್ನ ಅಂಗೈ ಮೇಲೆ ಹರಿತಮಾಡಿಕೊಳ್ಳುತ್ತಿದ್ದ. ಸೋಮು ಸೊಂಟಕ್ಕೆ ಬೆಲ್ಟು ಬಿಗಿದುಕೊಳ್ಳುತ್ತಿದ್ದ. ನೋಟ್ ಬುಕ್ಕಿನಲ್ಲಿ ಎಷ್ಟು ಹಾಳೆಯಿದೆಯೋ ಎಣಿಸುತ್ತಿದ್ದ ಶಂಕರ. ಸ್ವಾಮಿ ಅಂಗತ್ತನಾಗಿ ಮಲಗಿಕೊಂಡು ಹಸುರು ಕೀಲಂಜಿನ್ನನ್ನು ಹೊಟ್ಟೇ ಮೇಲೆ ಬಿಟ್ಟುಕೊಳ್ಳುತ್ತಿದ್ದ.

# ಹೊಸಬ

ಎರಡು ದಿನದಿಂದ ಅಮ್ಮ ಹಾಸಿಗೆ ಹಿಡಿದು ಮಲಗಿದ್ದಳು. ಊಟದ ಮನೆಯಲ್ಲಿ ಅವಳ ಉಪಚಾರವಿಲ್ಲದೆ ಸ್ವಾಮಿನಾಥನಿಗೆ ಸಾಕುಸಾಕಾಗಿ ಹೋಗಿತ್ತು. ಅಮ್ಮ ಮಲಗಿದ್ದ ಕೊಠಡಿಗೆ ಹೋಗಿ ನೋಡಿದ. ತಲೆಯೆಲ್ಲ ಕೆದರಿ ಹೋಗಿದೆ. ಮುಖವೆಲ್ಲ ಬಿಳಿಚಿಕೊಂಡಿದೆ. "ಹತ್ತಿರ ಬಾ ಮಗೂ" ಎಂದಳು. "ಯಾಕಪ್ಪಾ, ಇಷ್ಟು ಇಳಿದು ಹೋಗಿದ್ದೀಯಾ? ಊಟ ನಿದ್ದೆ ಸರಿಯಾಗಿ ಮಾಡುತ್ತಿಲ್ಲವೇನು?" ಎಂದು ಕೇಳಿದಳು. ಸ್ವಾಮಿನಾಥ ಪೆಚ್ಚು ಪೆಚ್ಚಾಗಿ ಅವಳ ಕಡೆಗೆ ನೋಡಿದ. ಯಾರೋ ಬೇರೆ ಅಮ್ಮನಿದ್ದಂತೆ ಕಂಡಿತು. ಅವಳಿಗೆ ಉತ್ತರ ಕೊಡುವಾಗ ಬಹಳ ಬಿಗುಮಾನದಿಂದಿದ್ದ. ಏಕೋ ಅವಳನ್ನು ನೋಡಿದರೆ ಸಂಕಟವಾಗುತ್ತಿತ್ತು. ಕಷ್ಟಪಟ್ಟು ಹೊರಕ್ಕೆ ತಪ್ಪಿಸಿಕೊಂಡು ಓಡಿಹೋದ.

ಅಜ್ಜಿ ಹತ್ತಿರ ಹೋದ. "ಮಗೂ, ನಿನಗೊಬ್ಬ ತಮ್ಮ ಬರ್‍ತಾನೆ" ಎಂದಳು ಅಜ್ಜಿ. ಅದನ್ನು ಕೇಳಿಯೂ ಇವನಿಗೆ ಉತ್ಸಾಹವೇರಲಿಲ್ಲ.

ಆ ರಾತ್ರಿ ಅಜ್ಜಿಯ ಹಾಸಿಗೆಯಲ್ಲೇ ಮಲಗಿಕೊಂಡ. ರಾತ್ರಿಯೆಲ್ಲಾ ದೀಪ ಉರಿಯುತ್ತಿತ್ತು. ಆಗಾಗ ಎಚ್ಚರವಾಗುವುದು. ಕಣ್ಣು ಬಿಟ್ಟಾಗಲೆಲ್ಲ, ಅಲ್ಲಿಂದಿಲ್ಲಿಗೆ ತರಾತುರಿಯಲ್ಲಿ ಓಡಾಡುವ ಹೆಜ್ಜೆಗಳ ಸಪ್ಪಳ ಕೇಳುತ್ತಿತ್ತು. ಇನ್ನೂ ಕೊಂಚ ಹೊತ್ತಾದ ಮೇಲೆ ಸ್ವಾಮಿಗೆ ಇನ್ನೊಮ್ಮೆ ಎಚ್ಚರವಾಯಿತು. ಹಜಾರದಲ್ಲೊಬ್ಬಳು ಲೇಡಿ ಡಾಕ್ಟರ್ ಇದ್ದಳು. ಮನೆಯೆಲ್ಲ ತನ್ನದೇ ಎನ್ನುವ ರೀತಿ ವರ್ತಿಸುತ್ತಿದ್ದಳು ಅವಳು. ಅಮ್ಮನ ಕೋಣೆಯೊಳಕ್ಕೆ ಹೋದಳು. ಸ್ವಲ್ಪ ಹೊತ್ತಾದ ಮೇಲೆ ಒಳಗಿಂದ ನರಳಿದ ಶಬ್ದ, ಪಿಸುಗುಟ್ಟಿದ ಶಬ್ದ ಎಲ್ಲವೂ ಒಟ್ಟಿಗೇ ಕೇಳಿಬರುತ್ತಿತ್ತು. ಆ ಡಾಕ್ಟರು ಸಿಡುಕು ಮೋರೆ ಮಾಡಿಕೊಂಡು ಕೊಠಡಿಯಿಂದ ಹೊರಕ್ಕೆ ಬಂದು ಎಲ್ಲರನ್ನೂ ಅದು ಬೇಕು, ಇದು ಬೇಕು ಎಂದು ಆರ್ಡರ್ ಮಾಡತೊಡಗಿದಳು. ಅಪ್ಪನಿಗೆ ಕೂಡ ಅಪ್ಪಣೆ ಮಾಡಿದಳು. ಅವಳ ಮಾತಿಗೆ ತಲೆಬಾಗಿ ಅಪ್ಪ ಆಫೀಸ್ ರೂಮಿಗೆ ಓಡಿ ಯಾವುದೋ ಸಣ್ಣ ಸೀಸೆ ತೆಗೆದುಕೊಂಡು ಬಂದರು. ಅಪ್ಪ ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇಲ್ಲಿಗೆ ಓಡಾಡುತ್ತಿದ್ದರು. ಈ ಪಿಸು ಮಾತು, ಈ ಅವಸರ, ಈ ಅವಾಂತರ, ಈ ಕಾತರ, ಈ ಔಷಧಗಳು, ಈ ಬಿಸಿ ನೀರು - ಹೊಸಬನೊಬ್ಬನನ್ನು ಈ ಜಗತ್ತಿಗೆ ಬರಮಾಡಿಕೊಳ್ಳಲು ಮಾಡಿದ ಈ ಸನ್ನಾಹಗಳೊಂದೂ ಸ್ವಾಮಿನಾಥನಿಗೆ ಅರ್ಥವಾಗಲಿಲ್ಲ. ಯಾರು ಹಾದುಹೋಗಲಿ ಅವರನ್ನೆಲ್ಲ ಅಜ್ಜಿ ಏನಾದರೂ ಒಂದು ಕೇಳುವಳು. ಒಬ್ಬರಾದರೂ ಉತ್ತರ ಕೊಡರು.

ಏನಾದರೆ ತನಗೇನು? ಅಜ್ಜಿಯ ಹಾಸಿಗೆಯ ಐದು ಜಮಖಾನಗಳೂ ಬೆಚ್ಚಗಿದ್ದುವು; ಐದು ದಿಂಬುಗಳೂ ಮೆತ್ತಗಿದ್ದುವು. ಅಜ್ಜಿ ಹತ್ತಿರದಲ್ಲೇ ಇದ್ದಳು. ಆ ಧೈರ್ಯ ಬೇರೆ. ಎಲ್ಲಕ್ಕಿಂತ ಹೆಚ್ಚಾಗಿ, ಕಣ್ಣು ಎಳೆದುಕೊಂಡು ಹೋಗುತ್ತಿತ್ತು. ಇನ್ನೇನು ಬೇಕು? ಸ್ವಾಮಿನಾಥನಿಗೆ ನಿದ್ರೆಹತ್ತಿತು.



ಗಡ್ಡವನ್ನು ಬೋಳಿಸಿಕೊಳ್ಳದೆ ಬಿಳಿಯ ದಾಡಿ ಬೆಳೆಸಿಕೊಂಡು, ಬೆಳ್ಳಿ ಕಟ್ಟು ಹಾಕಿದ ಕನ್ನಡಕವನ್ನು ಅರೆಮೂಗಿಗೇರಿಸಿ, ಅದರ ತುದಿಗೆ ಕಟ್ಟಿದ ದಾರವನ್ನು ಕಿವಿಯ ಸುತ್ತ ಸುತ್ತಿಕೊಂಡು ತಮಿಳು ಪಂಡಿತರು ವ್ಯಾಕರಣದ ನಿಗೂಢ ಸಮಸ್ಯೆಗಳನ್ನೆಲ್ಲ ಬಿಚ್ಚಿ ವಿವರಿಸುತ್ತಿದ್ದರು. ಕಲಿಯುವವರಿಗಿಂತ ಕಲಿಸುವವರಿಗೇ ಹೆಚ್ಚು ಉತ್ಸಾಹ! ಹುಡುಗರು ಅಲ್ಲಲ್ಲಿ ತಮ್ಮ ತಮ್ಮ ಉಪಸಮಿತಿಗಳನ್ನು ರಚಿಸಿಕೊಂಡು ಸಂಭಾಷಣೆ ನಡೆಸುತ್ತಿದ್ದರು. ಈ ಶಬ್ದ ಅಡಗಿಸುವುದಕ್ಕಾಗಿ ಪಂಡಿತರು ಎಂಟು ಹತ್ತು ಸಲ ಅಂಗೈಯನ್ನು ಮೇಜಿನ ಮೇಲೆ ತಟ್ಟಿದರು. ಪ್ರಯೋಜನವಾಗಲಿಲ್ಲ. ಅದರಿಂದ ಆ ಪ್ರಯತ್ನವನ್ನೇ ಬಿಟ್ಟು ತಮ್ಮಷ್ಟಕ್ಕೆ ತಾವೇ ಪಾಠ ಮಾಡಿಕೊಂಡು ಹೋದರು. ಅವರ ಸೊಲ್ಲು ಯಾರಿಗೂ ಕೇಳದ ಹಾಗಿತ್ತು.

ಮೊದಲನೆಯ ಬೆಂಚಿನಲ್ಲಿ ಶಂಕರ ಮತ್ತು ಇನ್ನೂ ಕೆಲವರು ಬರಕೊಂಡದ್ದೂ ಬರಕೊಂಡದ್ದೇ.

ಸ್ವಾಮಿನಾಥನೂ ಬಟಾಣಿಯೂ ಕೊನೆ ಬೆಂಚಿನಲ್ಲಿ ಕೂತಿದ್ದರು.

"ಲೋ ಬಟಾಣಿ, ಇವತ್ತು ಬೆಳಿಗ್ಗೆ ನನಗೊಬ್ಬ ತಮ್ಮ ಹುಟ್ಟಿದ ಕಾಣೋ" ಎಂದ ಸ್ವಾಮಿನಾಥ.

ಬಟಾಣಿಯ ಕಿವಿ ನಿಮಿರಿತು. "ಹೇಗಿದ್ದಾನೋ?" ಎಂದ.

"ಹೇಗಿದ್ದಾನೆ! ಹೇಗೂ ಇಲ್ಲ. ತುಂಬ ವಿಚಿತ್ರವಾಗಿದ್ದಾನೆ. ಇಲ್ಲಿ ನೋಡು, ಹೀಗಿದ್ದಾನೆ" ಎಂದು ಹೇಳಿ ಕಣ್ಣು ಎರಡೂ ಮುಚ್ಚಿಕೊಂಡು, ತುಟಿಗಳನ್ನು ಅದುಮಿಕೊಂಡು ಕೈಯೆರಡನ್ನೂ ಮುಷ್ಟಿ ಕಟ್ಟಿ ಎದೆಗೆ ಅವಚಿಕೊಂಡು ನಾಲಗೆ ಹೊರಗೆ ಕೊಂಚ ಚಾಚಿ ತಲೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ವಾಲಿಸಿ ಮಗು ಹೇಗಿದೆ ಅನ್ನುವುದನ್ನು ಅನುಕರಣ ಮಾಡಿ ತೋರಿಸಿದ. ಬಟಾಣಿ ಪಕ್ಕೆ ಹಿಡಿದುಕೊಂಡು ನಗಲು ಸುರು ಮಾಡಿದ. "ಆ ಮಗೂಗೆ ಎರಡು ಕೈಯಿದೆ ಕಾಣೋ, ಪುಟ್ಟಗೆ ದುಂಡಗೆ ಮುದ್ದಾಗಿದೆ. ಆದರೆ ನೋಡು. ಅದರ ಮುಖ ನೋಡೋಕಾಗೊಲ್ಲ. ಕೆಂಪಗೆ, ಒಣ ಮೆಣಸಿನಕಾಯಿ ಇರೋಲ್ಲವೇ, ಹಾಗೇ ಇದೆ ಬಣ್ಣ" ಎಂದು ಸ್ವಾಮಿ ಹೇಳಿದ.

ಆಮೇಲೆ ಏಳೆಂಟು ನಿಮಿಷ ಮೇಷ್ಟರು ಹೇಳುತ್ತಿದ್ದ ಪಾಠ ಕಿವಿಗೊಟ್ಟು ಕೇಳಿದ್ದಾಯಿತು. ಬಟಾಣಿ ಮತ್ತೆ ಹೇಳಿದ : "ಲೋ ಸ್ವಾಮಿ, ನಿನಗೆ ಗೊತ್ತಿಲ್ಲ ಕಾಣೋ. ಈ ಎಳೆಮಕ್ಕಳು ಚೋಟುದ್ದ ಇರ್ತಾರಲ್ಲ, ಎಷ್ಟು ಬೇಗ ಬೆಳೆದುಬಿಡ್ತಾರೆ ಗೊತ್ತಾ? ನಿನ್ನ ತಮ್ಮನ ಥರಾನೆ ಇದ್ದ ಮಗು ಒಂದನ್ನ ನಾನೂ ನೋಡಿದ್ದೆ ಹೋದ ವರ್ಷ. ಆದರೆ ತಿರುಗಿ ದಸರಾದಲ್ಲಿ ಅದನ್ನ ನೋಡ್ತೀನಿ, ಗುರ್ತೇ ಸಿಕ್ಕಲಿಲ್ಲ, ಹಾಗೆ ಬೆಳೆದುಬಿಟ್ಟಿತ್ತು."

# ಪರೀಕ್ಷೆಗೆ ಮುಂಚೆ

ಏಪ್ರಿಲ್ ತಿಂಗಳು. ಪರೀಕ್ಷೆಗೆ ಎರಡೇ ಎರಡು ವಾರ ಇದೆ. ಅಪ್ಪ ಅದೇಕೆ ಹೀಗಾಡುತ್ತಿದ್ದಾರೆ ಎಂಬುದು ಸ್ವಾಮಿಗೆ ಅರ್ಥವಾಗದೆ ಹೋಯಿತು. ಅವರ ಕೋಪಕ್ಕೇನು ಲಂಗುಲಗಾಮೇ ಬೇಡವೆ? ಯಾವಾಗಲೂ ದುಮುಗುಟ್ಟುತ್ತ ಇರುವುದೇಕೆ? ಇದ್ದಕ್ಕಿದ್ದಂತೆ ತನಗೆ ಚಿತ್ರಹಿಂಸೆ ಕೊಡಬೇಕೆಂದು ಸಂಕಲ್ಪ ಮಾಡಿದ ಹಾಗಿದೆ. ತಾನೇನಾದರೂ ಅಜ್ಜಿಯ ಕೈಲಿ ಮಾತನಾಡುತ್ತಿದ್ದ ಅಂದರೆ ಅಪ್ಪ ತಕ್ಷಣ ಬಂದು ಹೇಳುವರು : "ಮಗೂ, ಪರೀಕ್ಷೆ ಹತ್ತಿರ ಬಂತು. ನಿಮ್ಮಜ್ಜಿ ಇರ್ತಾಳೆ. ಪರೀಕ್ಷೆ ಇರುತ್ಯೇ?" ಅಮ್ಮನ ಜೊತೆಯಲ್ಲಿ ಕುಳಿತಿದ್ದರೆ ಸರಿ, ತನ್ನ ರೂಮಿಗೆ ಅಟ್ಟುವರು. ತಾಲ್ಲೂಕು ಕಚೇರಿ ಗಂಟೆ ಒಂಬತ್ತು ಹೊಡೆದ ಮೇಲೇನಾದರೂ ತನ್ನ ಸ್ವರ ಕೇಳಿಸಿದರೆ ಸಾಕು, ತಮ್ಮ ಕೋಣೆಯಿಂದಲೇ ಕೂಗುವರು : "ಲೋ ಸ್ವಾಮೀ, ಯಾಕೋ ಇನ್ನೂ ಮಲಗಿಕೊಂಡಿಲ್ಲ? ಬೆಳಿಗ್ಗೆ ಆ ವೇಳೆಗೇ ಎದ್ದು ಓದಿಕೋ ಬೇಡವೇನೋ?" ಸ್ವಾಮಿನಾಥನ ಜೀವನದಲ್ಲಿ ಇಂತಹ ತೊಂದರೆ ಹಿಂದೆಂದೂ ಬಂದಿರಲಿಲ್ಲ. ಒಂದು ದಿನ ಇವನಿಗೆ ಅಪ್ಪನ ನಡವಳಿಕೆಯನ್ನು ಕಂಡು ತುಂಬ ರೋಸಿಹೋಗಿ, "ಅಪ್ಪ, ನಿಮಗೆ ಪರೀಕ್ಷೆ ಅಂದರೆ ಯಾಕಪ್ಪಾ ಅಷ್ಟು ಭಯ?" ಎಂದು ಕೇಳಿಯೇ ಬಿಟ್ಟ.

"ನೀನು ಫೇಲಾಗಿಬಿಟ್ರೆ?"

"ಇಲ್ಲ, ನಾ ಫೇಲಾಗೋಲ್ಲ."

"ಕಷ್ಟಪಟ್ಟು ಓದಿ ಚೆನ್ನಾಗಿ ಉತ್ತರ ಬರೆದರೆ ಫೇಲಾಗೋಲ್ಲ, ನಿಜ. ....ನೀನೊಬ್ಬ ಹಿಂದುಬಿದ್ದು ನಿನ್ನ ಕ್ಲಾಸ್‌ನವರೆಲ್ಲ ಮುಂದಿನ ಕ್ಲಾಸಿಗೆ ಹೊರಟುಹೋಗಿಬಿಟ್ರೆ? ಪರೀಕ್ಷೆ ಮುಗಿದ ಮೇಲೆ ನಿನಗೆ ಇಷ್ಟ ಬಂದ ಹಾಗೆ ಮಾಡು; ಅದುವರೆಗೂ ಓದಿಕೋ."

ಸ್ವಾಮಿನಾಥನ್ ಆಲೋಚಿಸಿದ : ಬಟಾಣಿ, ಶಂಕರ, ಮಣಿ, ರಾಜಂ ಎಲ್ಲರೂ ತನ್ನನ್ನು ಬಿಟ್ಟು ಸೆಕೆಂಡ್ 'ಎ' ಗೆ ಹೊರಟು ಹೋದರೆ? ಅಪ್ಪ ಹೇಳಿದ್ದೇ ಸರಿ. ಅಪ್ಪ ಇನ್ನೂ ಒಂದು ಮಾತು ಹೇಳಿದರು : "ಅಷ್ಟೇ ಅಲ್ಲ ನೋಡು; ಪ್ರೈಮರಿ ಸ್ಕೂಲಿನವರೆಲ್ಲ ನಿನ್ನ ಜೊತೇಗೆ ಬಂದುಬಿಟ್ರೆ?"

ಸ್ವಾಮಿನಾಥ ಅರ್ಧ ಗಂಟೆ ಹೊತ್ತು ಕುಳಿತು ಭಿನ್ನರಾಶಿ ಲೆಕ್ಕ ಮಾಡಿದ.

## ಎರಡು

ಸ್ಕೂಲಿನಲ್ಲಿ ಪ್ರತಿಯೊಬ್ಬರನ್ನೂ ಪರೀಕ್ಷೆಯ ಪಡಂಭೂತ ಹಿಡಿದು ಕೊಂಡುಬಿಟ್ಟಿತ್ತು. ಶಂಕರನ ಮುಖದ ಮೇಲೆ ನಗು ಸುಳಿದಿದ್ದನ್ನು ನೋಡಿ ಎಷ್ಟೋ ವಾರಗಳಾಗಿ

ಹೋಗಿತ್ತು. ಸೋಮು ತಾನಾಯಿತು ತನ್ನ ಕೆಲಸವಾಯಿತು ಎಂದು ಇದ್ದುಬಿಟ್ಟ. ಬಟ್ಟಾಣಿಗೆ ಮುಂಚಿನ ಹಾಗೆ ಹಾಸ್ಯ ಅರ್ಥವೇ ಆಗುತ್ತಿರಲಿಲ್ಲ. ತಾನಂತೂ ಕುಚೋದ್ಯ ಮಾಡುವುದನ್ನೇ ಬಿಟ್ಟು ಬಿಟ್ಟಿದ್ದ. ಇನ್ನು ರಾಜಂ. ಮೊದಲನೆಯ ಬೆಲ್ ಹೊಡೆಯುವ ವೇಳೆಗೆ ಸರಿಯಾಗಿ ಬಂದು, ಮೇಷ್ಟರು ಏನು ಹೇಳುತ್ತಾರೋ ಎಲ್ಲಾ ಬರಕೊಂಡು, ಕೊನೇ ಬೆಲ್ ಹೊಡೆದ ತಕ್ಷಣ ಹೊರಟುಹೋಗುತ್ತಿದ್ದ. ಹತ್ತು ಮಾತಾಡಿದರೆ ಹೆಚ್ಚು. ಮಣಿಯ ಮುಖದ ಮೇಲೂ ಚಿಂತೆ ಮೂಡಿತ್ತು. ಅವನು ಕೂಡಾ ಓದುವುದಕ್ಕೆ ಪ್ರಾರಂಭಿಸಿ ಬಿಟ್ಟಿದ್ದ. ಅರ್ಥ ಆಗದೆ ಹೋದುದನ್ನೆಲ್ಲ ಗುರುತು ಮಾಡಿಕೊಂಡು, ಸಮಯ ಸಿಕ್ಕಿದಾಗಲೆಲ್ಲ ಶಂಕರನನ್ನು ಒಂದು ಪಕ್ಕಕ್ಕೆ ಕರೆದುಕೊಂಡು ಹೋಗಿ ಹೇಳಿಸಿಕೊಳ್ಳುತ್ತಿದ್ದ. ಅಲ್ಲದೆ ಯಾವಾಗಲೂ ಶಾಲೆಯ ಗುಮಾಸ್ತೆಯ ಹಿಂದೆಯೆ ಅಲೆಯುತ್ತಿದ್ದ. ಗುಮಾಸ್ತೆ ಸರ್ವಜ್ಞ, ಎಲ್ಲಾ ಕ್ಲಾಸಿನ ಪ್ರಶ್ನೆಪತ್ರಿಕೆಗಳೂ ಅವನಿಗೆ ಗೊತ್ತು ಎಂಬುದಾಗಿ ಹುಡುಗರ ನಂಬಿಕೆ.

ಒಂದು ದಿನ ಮಣಿ ಗುಮಾಸ್ತೆಯ ಮನೆಗೆ ಹೋಗಿ ಅವರ ಮುಂದೆ ಒಂದು ಸಣ್ಣ ಗಂಟನ್ನಿರಿಸಿದ. ಅದರ ತುಂಬ ಮೊಗರು ಬದನೇಕಾಯಿ. ಗುಮಾಸ್ತೆಗೆ ತುಂಬ ಸಂತೋಷವಾಯಿತು. ಮಣಿಯನ್ನು ಒಳಗೆ ಕರೆದುಕೊಂಡು ಹೋಗಿ ಒಂದು ಸ್ಟೂಲನ್ನು ತೋರಿಸಿ, "ಕೂತುಕೋಣ್ಣಾ" ಎಂದ.

ಗುಮಾಸ್ತೆ ಇಷ್ಟೊಂದು ಸಲಿಗೆಯಿಂದ ಇರುವುದನ್ನು ನೋಡಿ, ಏನು ಬೇಕಾದರೂ ಗಿಟ್ಟಿಸಬಹುದು ಈಗ ಎಂದುಕೊಂಡ ಮಣಿ. ಗುಮಾಸ್ತೆಯ ಮನೆಯ ಬಡಕಲು ಬೆಕ್ಕು ಅಲ್ಲೇ ಓಡಾಡುತ್ತಿತ್ತು. ಅದರ ವಿಷಯವಾಗಿ ಏನೋ ಗೊಣಗುಟ್ಟಿದ ಗುಮಾಸ್ತೆ. ಅವನೇನು ಹೇಳಿದನೋ ಒಂದೂ ಮಣಿಯ ತಲೆಗೆ ಹತ್ತಲಿಲ್ಲ. ಪ್ರಶ್ನೆಪತ್ರಿಕೆಗಳ ಮಾತು ಹೇಗೆ ಎತ್ತೋಣ ಎಂಬುದೊಂದೇ ಅವನ ಚಿಂತೆ. ಈ ಮಧ್ಯೆ ಗುಮಾಸ್ತೆಯು ಬೆಕ್ಕಿನ ವಿಷಯ ಬಿಟ್ಟು ಗುಂಗಾಣಿಗಳ ವಿಷಯ ಎತ್ತಿದ್ದ. ಯಾವುದಾದರೇನು? ಮಣಿಗೆ ಎರಡೂ ಒಂದೇ. ಆ ಗುಮಾಸ್ತೆ ಮಾತು ನಿಲ್ಲಿಸಿದರೆ ಸಾಕು, ತಾನು ಆರಂಭಿಸಬಹುದು ಎಂದು ಕಾಯುತ್ತಿದ್ದ. "ಏನೇ ಆಗಲಿ, ಗುಂಗಾಣಿಗಳನ್ನು ಹತ್ತಿರ ಸೇರಿಸಬಾರದು. ಕಣ್ಣು ನೋವು ಬರೋದೆಲ್ಲ ಅದರಿಂದಲೇ. ಕಣ್ಣೋವು ಬಂದಾಗ ಇನ್ನೇನೂ ಮಾಡಬೇಕಾಗಿಲ್ಲ. ಒಂದು ಹಸೀ ಈರುಳ್ಳೀನ........."

ಓಹೋ ಇವನು ನಿಲ್ಲಿಸುವುದೇ ಇಲ್ಲ ಎಂಬುದು ಮಣಿಗೆ ತಿಳಿಯಿತು. ಅದರಿಂದ ತಾನೇ ಮಾತೆತ್ತಬೇಕಾಯಿತು. "ಸಾರ್, ಪರೀಕ್ಷೆಗೆ ಇನ್ನೊಂದೇ ವಾರ ಇದೆ, ಸಾರ್........"

ಗುಮಾಸ್ತೆಗೆ ಸುಳಿವು ಗೊತ್ತಾಗಲಿಲ್ಲ. ತಕ್ಷಣವೇ "ಹೌದು, ಹೌದು, ಒಂದೇ ವಾರ ಇನ್ನು...... ಈರುಳ್ಳಿ ತಗೋತೀಯಲ್ಲ, ದೊಡ್ಡದನ್ನ ಆರಿಸಿಕೋಬೇಕು, ತುಂಬ ರಸ ಇರಬೇಕು. ಸಣ್ಣದು ತೊಗೊಂಡರೆ ಉಪಯೋಗ ಇಲ್ಲ......."

ಆ ರಸ ಇರೋ ಈರುಳ್ಳಿಯನ್ನು ಅದರ ಗತಿಗೇ ಬಿಟ್ಟು ಬಿಟ್ಟು, ಮಣಿ ತಿರುಗಿ ಹೇಳಿದ : "ಸಾರ್, ಪರೀಕ್ಷೆ ಎಂದರೆ ನನಗೆ ತುಂಬ ಯೋಚನೆ ಆಗಿ ಬಿಟ್ಟಿದೆ ಸಾರ್." ಎಷ್ಟು ದೈನ್ಯ ಪ್ರಕಟಿಸಲು ಸಾಧ್ಯವೋ ಅಷ್ಟನ್ನೂ ತನ್ನ ಮುಖಚರ್ಯೆಯಿಂದಲೇ ಸೂಚಿಸಿದ.

"ಬಹಳ ಸಂತೋಷ. ಚೆನ್ನಾಗಿ ಓದು, ಖಂಡಿತ ಪ್ಯಾಸ್ ಆಗ್ತೀಯ" ಎಂದು ನಮ್ಮ ಬೃಹಸ್ಪತಿ ಅಪ್ಪಣೆ ಕೊಡಿಸಿದ.

"ನೋಡಿ ಸಾರ್; ನನಗೆ ಎಷ್ಟು ಚಿಂತೆ ಅಂತೀರಿ ಸಾರ್? ರಾತ್ರೀ ಎಲ್ಲಾ ನಿದ್ರೇನೇ ಹತ್ತೊಲ್ಲ ಸಾರ್. ಈ ಪರೀಕ್ಷೆಯ ವಿಷಯ ಯೋಚಿಸೀ ಯೋಚಿಸೀ.... ನನಗೇನಾದರೂ ಮುಖ್ಯವಾದ್ದನ್ನು ನೀವು ಹೇಳಿಕೊಟ್ಟರೆ..... ಇನ್ನೇನೂ ಇಲ್ಲಾ ಸಾರ್, ಓದೋದು ಎಷ್ಟೊಂದಿದೆ, ಮುಖ್ಯ ಅಲ್ಲದೆ ಇರೋವನ್ನೆಲ್ಲ ಈಗ ಓದ್ತಾ ಹೋದರೆ ಆಗತ್ಯೇ ಸಾರ್?" ಈ ರೀತಿ ಮಾತಾಡುತ್ತಾ ಹೋದ ಮಣಿ. ಯಾವುದಕ್ಕೆ ಏಟು ಹಾಕುತ್ತ ಇದಾನೆ ಇವನು ಎನ್ನುವುದು ಗುಮಾಸ್ತೆಗೆ ಗೊತ್ತಾಯಿತು. "ನಿಮಗೆ ಮಾಡಿರೋ ಪಾಠಾನೆಲ್ಲ ಓದಿಕೋಪ್ಪ, ಪಾಸಾಗ್ತೀಯೆ" ಎಂದ. ಯುಕ್ತಿಯಿಂದ ಗೆಲ್ಲುವುದು ತನ್ನಿಂದ ಸಾಧ್ಯವಿಲ್ಲವೆಂದು ಮಣಿ ಅರಿತುಕೊಂಡು, ಬಾಯಿಬಿಟ್ಟು ಕೇಳಿಯೇ ಬಿಟ್ಟ : "ಸಾರ್, ನಮ್ಮ ಪರೀಕ್ಷೆಗೆ ಯಾವ ಯಾವ ಪ್ರಶ್ನೆ ಬರುತ್ತೆ, ದಯವಿಟ್ಟು ಹೇಳಿ ಸಾರ್."

ತನಗೆ ಯಾವ ಪ್ರಶ್ನೆಯೂ ಗೊತ್ತಿಲ್ಲ ಎಂದುಬಿಟ್ಟ ಗುಮಾಸ್ತೆ. ತಮಗೇ ಗೊತ್ತಿಲ್ಲದೆ ಹೋದರೆ ಇನ್ನು ಯಾರಿಗೆ ಸಾರ್ ಎಂದು ಮಣಿ ಸ್ವಲ್ಪ ಗಿಲೀಟ್ ಹೊಡೆದ. ಇದೇ ರೀತಿಯ ಹೊಗಳಿಕೆ ಮುಂದುವರಿದಂತೆ ಗುಮಾಸ್ತೆ ಇನ್ನೊಂದಷ್ಟು ಗುಟ್ಟು ಬಿಟ್ಟುಕೊಟ್ಟ. ಮೊದಲನೆಯ ತರಗತಿಯ ಪಠ್ಯಪುಸ್ತಕಗಳು ಯಾವುದು ಏನು ಅನ್ನುವುದೇ ತಿಳಿಯದೆ ಹೋದರೂ, "ಭೂಗೋಳವನ್ನು ಹುಷಾರಾಗಿ ನೋಡಿಕೋ. ಮ್ಯಾಪ್ ಬರೆಯೋದನ್ನ ಅಭ್ಯಾಸ ಮಾಡಿಕೋಬೇಕಾದೀತು. ಲೆಕ್ಕದಲ್ಲಿ, ನಿತ್ಯಾ ಐದೈದು ಲೆಕ್ಕ ಮಾಡ್ತಾ ಹೋಗು, ಪರೀಕ್ಷೆಗೆ ಸುಲಭವಾಗುತ್ತೆ. ನೀರು ಕುಡಿದ ಹಾಗೆ ಮಾಡಿಬಿಡಬಹುದು ಲೆಕ್ಕಾನ" ಎಂದು ಬುದ್ಧಿವಾದ ಹೇಳಿದ.

"ಇಂಗ್ಲಿಷ್ ಹೇಗೆ, ಸಾರ್?"

"ಓ, ಅದರ ಚಿಂತೆ ಬಿಡು. ಎಲ್ಲಾ ಪಾಠ ಓದಿದ್ದೀಯಾ ತಾನೇ?"

ಅರ್ಧಂಬರ್ಧ ಮನಸ್ಸಿನಿಂದ ಮಣಿ "ಹೂ" ಎಂದ.

"ಸರಿ ಹಾಗಾದರೆ ಮುಖ್ಯವಾದ ಪಾಠವನ್ನು ಇನ್ನೊಂದು ಸಲ ಓದಿಕೊ. ಟೈಮಿದ್ದರೆ ಮತ್ತೂ ಒಂದು ಸಲ ಓದಿಕೊ, ಸಾಕು ಸಾಕು."

ಈ ಉತ್ತರಗಳಿಂದ ಮಣಿಗೆ ತೃಪ್ತಿಯಾಯಿತು. ಬದನೇಕಾಯಿಗೆಂದು ತಾನು ಖರ್ಚುಮಾಡಿದ ನಾಲ್ಕಾಣೆ ಕೊಂಚವೂ ದಂಡವಾಗಲಿಲ್ಲವಲ್ಲ ಸದ್ಯ ಎಂದು ಹಿಗ್ಗಿಹೋದ, ಮನೆಗೆ ಹಿಂದಿರುಗುವಾಗ.

## ಮೂರು

ತನ್ನ ತರಗತಿಯ ಹುಡುಗರೆಂದರೆ ಮಣಿಗೆ ಬಹಳ ಕನಿಕರ. ತನಗೇನೋ ಗುಮಾಸ್ತೆ ಮುಖ್ಯವಾದ್ದೆಲ್ಲ ಹೇಳಿಬಿಟ್ಟಿದ್ದಾನೆ. ಅವರಿಗೆ? ಪಾಪ,ಅವರ ಹೊರೆಯನ್ನು ಇಳಿಸುವವರು ಯಾರು?...... ಸ್ವಾಮಿನಾಥನೊಬ್ಬನಿಗಾದರೂ ಈ ಗುಟ್ಟನ್ನು ಹೇಳಬೇಕು ಎಂದು ಮಣಿಗೆ ಇಚ್ಛೆಯಾಯಿತು.

ಶಾಲೆ ಮುಗಿಸಿಕೊಂಡು ಇಬ್ಬರೂ ಮನೆಗೆ ಹೋಗುತ್ತಿದ್ದರು. ವಿನಾಯಕ ಮೊದಲಿಯಾರ್ ಬೀದಿಯೂ ತೋಪಿನ ರಸ್ತೆಯೂ ಕವಲೊಡೆಯುವ ಜಾಗದಲ್ಲಿ ಕೊಂಚ ಹೊತ್ತು ನಿಂತುಕೊಂಡರು. ಮಣಿ ಕೇಳಿದ : "ಲೋ ಸಣ್ಣಾ, ಪರೀಕ್ಷೆಗೆ ಏನು ಬರುತ್ತೆ ಅಂತ ನಿನಗೇನಾದರೂ ಗೊತ್ತೇನೊ?"

"ನಮಗಿಟ್ಟಿರೋ ಪುಸ್ತಕಗಳಲ್ಲಿರೋದೇ ಬರುತ್ತೆ ಕಾಣೊ."

ಮಣಿಗೆ ಈ ಹಾಸ್ಯ ಬೇಕಾಗಿರಲಿಲ್ಲ. "ಇಲ್ಲಿ ಕೇಳು, ಜೋಪಾನವಾಗಿ. ನಿನ್ನೆ ರಾತ್ರಿ ಏಳು ಗಂಟೆಯಿಂದ ಹತ್ತು ಗಂಟೆವರೆಗೆ ನಾನು ಏನು ಮಾಡಿದೆ ಗೊತ್ತೇ?"

"ಕಳ್ಳೇಕಾಯಿ ಮುಕ್ತಿದ್ಯಾ?"

"ಅಯೋಗ್ಯ. ನಿನ್ನ ಲೇವಡಿ ಸಾಕೊ, ಇಂಡಿಯಾದ್ದು ಎರಡು ಮ್ಯಾಪು, ಆಫ್ರಿಕಾದ್ದು ಎರಡು, ಯೂರೋಪು ಮ್ಯಾಪು ಒಂದು ಬರೆದೆ."

"ಅಟ್ಲಾಸಿನಲ್ಲಿರೋ ಮ್ಯಾಪೆಲ್ಲ ಬರ್ದೇ ಅನ್ನು."

ಮಣಿಗೆ ಇದು ಹಿಡಿಸಲಿಲ್ಲ. "ಇರಬಹುದು, ಆದರೆ ನಾನು ಇದನ್ನು ಹುಡುಗಾಟಕ್ಕೆ ಮಾಡ್ತಾ ಇಲ್ಲ, ಗೊತ್ತಾಯ್ತೋ? ನನಗೂ ಒಂದೆರಡು ಪ್ರಶ್ನೆ ಗೊತ್ತಿರಬಹುದು. ಆದರೆ ಯಾರಿಗೂ ಹೇಳಬೇಡ ಇದನ್ನು. ಆಮೇಲೆ ನನ್ನ ತಲೆ ಹೋಗುತ್ತೆ." ಇದನ್ನು ಹೇಳುವಾಗ ಮಣಿಯ ಮುಖದ ಗಾಂಭೀರ್ಯ ನೋಡಿ ಸ್ವಾಮಿಯೂ ಒಂದು ನೀತಿ ಕಲಿತುಕೊಂಡ.

## ನಾಲ್ಕು

ಮನೆಗೆ ಬಂದ. ಏಕೋ ತುಂಬ ಬೇಜಾರಾಗುತ್ತಿತ್ತು. ಅಮ್ಮ ಮನೆಯಲ್ಲಿ ಇರಲಿಲ್ಲ. ಅಜ್ಜಿಗೆ ಕೂಡ ಮಾತಾಡುವ ಮನಸ್ಸಿರಲಿಲ್ಲ. ಆವತ್ತು ತಮ್ಮ ಸ್ಕೂಲಲ್ಲಿ ನಡೆದ ಮುಖ್ಯ ಘಟನೆಗಳನ್ನು ಅಜ್ಜಿಗೆ ವಿವರಿಸಿದ : "ಅಜ್ಜಿ, ಇವತ್ತು ಸ್ಕೂಲಲ್ಲಿ ಎಂಥಾ ಗಲಾಟೆ ನಡೀತೂ ಅಂತೀಯ. 'ಸಿ' ಸೆಕ್ಷನ್ ಹುಡುಗ ಒಬ್ಬ ಚಾಕೂ ತೊಗೊಂಡು ಇನ್ನೊಬ್ಬನ ತೋಳಿಗೆ ತಿವಿದುಬಿಟ್ಟ."

ಅಜ್ಜಿ ತೂಕಡಿಸುತ್ತ "ಯಾತಕ್ಕೆ?" ಎಂದಳು.

"ಅವರಿಬ್ಬರೂ ಎರಡು ತಿಂಗಳಿಂದ ಎನ್ಮಿಗಳು ಅಜ್ಜೀ." ಅಜ್ಜಿ ಮನಸ್ಸಿನ ಮೇಲೆ

ಇದು ಯಾವ ಪರಿಣಾಮವನ್ನೂ ಉಂಟುಮಾಡದೆ ಹೋಯಿತು. ಆದ್ದರಿಂದ ಶಾಲೆಯ ಇನ್ನೊಂದು ಭಾರಿ ಸಮಾಚಾರ ಹೇಳಿದ : "ನಮ್ಮ ಹೆಡ್‌ಮೇಷ್ಟರು ಹೊಸಿಲನ್ನ ಬಲವಾಗಿ ಎಡವಿಬಿಟ್ಟರು ಅಜ್ಜಿ. ಹೆಬ್ಬೆಟ್ಟಿನಿಂದ ಒಂದು ರಕ್ತ ಸುರೀತೂ ಸುರೀತೂ......ಪಾಪ, ಈವತ್ತೆಲ್ಲ ಹೆಡ್‌ಮೇಷ್ಟರು ಕುಂಟ್ಕೊಂಡೇ ಓಡಾಡುತ್ತಿದ್ದರು. ಥರ್ಡ್ ಇಯರ್ ತೊಗೋಬೇಕಾಗಿತ್ತು. ಆದು ಕೂಡ ತೊಗೋಳ್ಳಿಲ್ಲ. ರಜಾ ಕೊಟ್ಟುಬಿಟ್ಟರು. ಆ ಹುಡುಗರ ಅದೃಷ್ಟವೇ ಅದೃಷ್ಟ."

"ಹಾಗೇನು?" ಎಂದಳು ಅಜ್ಜಿ, ಅರೆನಿದ್ರೆಯಲ್ಲಿ.

ಥೂತ್, ಈ ಅಜ್ಜೀಗೆಲ್ಲೋ ನಿದ್ದೇ ಜೊಂಪು ಹತ್ತಿದೆ, ಅವಳ ಕೈಯಲ್ಲಿ ಏಗೋವರು ಯಾರು ಎಂದು ಸ್ವಾಮಿ ಹೊರಟು ಹೋದ.

ಆಮೇಲೆ ಮಗು ಮಲಗಿದ್ದ ತೊಟ್ಟಿಲು ಹತ್ತಿರ ಹೋದ. ಮೊದಮೊದಲು ತಮ್ಮನ ಮೇಲೆ ಇವನಿಗೆ ಇಷ್ಟ ಇರಲಿಲ್ಲ. ಶುದ್ಧ ಮೊದ್ದು ಎಂದು ಅವನ ಕಡೆ ತಿರುಗಿ ಕೂಡ ನೋಡುತ್ತಿರಲಿಲ್ಲ. ಆದರೆ ಬರುತ್ತ ಬರುತ್ತ ಅವನ ಚಟುವಟಿಕೆ ಕಂಡು ಆ ಮಗು ಮೇಲೆ ತುಂಬ ಪ್ರೀತಿ ಹುಟ್ಟಿತು. ಮಗುವಿಗೆ ಈಗ ಆರು ತಿಂಗಳು. ಬಹಳ ಮುದ್ದಾಗಿದ್ದ. ಯಾರಾದರೂ ಈ ಕಡೆ ಆ ಕಡೆ ಹೋದರೆ ಅವರನ್ನು ಕಂಡು ಕಿರ್ರಂತ ಕೂಗುವುದು; ಮುಂಗೈಯನ್ನು ಮೂತಿಯಲ್ಲಿ ತುರುಕಿಕೊಂಡು ಮೊಣಕೈವರೆಗೂ ಜೊಲ್ಲು ಮೆತ್ತಿಕೊಳ್ಳುವುದು; ಬಲವಾಗಿ ಗಾಳಿಯನ್ನು ಒದೆಯುವುದು, ಕೆಂಪು ಒಸಡನ್ನು ತೋರಿಸುತ್ತ ಕಿಲಿಕಿಲಿ ಅಂತ ನಗುವುದು, ಇದಿಷ್ಟೂ ಅವನಿಗೆ ಬರುತ್ತಿದ್ದ ವಿದ್ಯೆ. ಸ್ವಾಮಿನಾಥನಿಗೆ ಅವನನ್ನು ಕಂಡರೆ ಪ್ರಾಣ. ತೊಟ್ಟಿಲಿನ ಅಂಚಿನಲ್ಲಿ ಕುಳಿತುಕೊಂಡು ಮಗುವಿನ ಕೈಯಲ್ಲಿ 'ಸ್ವಾಮಿನಾಥನ್' ಎನ್ನಿಸಬೇಕು ಎಂದು ಯಾವಾಗಲೂ ಯತ್ನಿಸುತ್ತಿದ್ದ. ಮಗು 'ಗು ಗು ಗು ಗು ಗೂ' ಅಂತ ಕೂಗಿದರೆ ಸರಿ, ಚಪ್ಪಾಳೆ ಹೊಡೆದುಕೊಂಡು 'ಓ! ಮಗೂ, ಸ್ವಾಮಿನಾಥನ್ ಅಂದುಬಿಟ್ಟ' ಎಂದು ಸಂತೋಷದಿಂದ ಕೂಗಿ ಕೊಂಡುಬಿಡುತ್ತಿದ್ದ.

ಈಗ ಬಂದವನೇ ತೊಟ್ಟಿಲಲ್ಲಿ ಬಗ್ಗಿ ನೋಡುತ್ತಾನೆ, ಮಗು ನಿದ್ದೆ ಮಾಡುತ್ತಿದೆ! ಅವನಿಗೆ ತುಂಬ ಆಶಾಭಂಗವಾಯಿತು. ಅವನನ್ನೆಬ್ಬಿಸುವುದಕ್ಕೆ ಎಂದು ಮೂರು ನಾಲ್ಕು ಸಲ ಕೆಮ್ಮಿ ಗಂಟಲು ಸರಿಮಾಡಿಕೊಂಡ. ಆದರೆ ಮಗು ಏಳಲಿಲ್ಲ. ಒಂದು ನಿಮಿಷ ಕಾದು, ಸದ್ದು ಮಾಡದೆ ಮೆಟ್ಟಿಂಗಾಲಿಟ್ಟುಕೊಂಡು ಹೊರಟು ಹೋದ. "ಸದ್ಯ ಎಬ್ಬಿಸದೆ ಇದ್ದುದೇ ವಾಸಿಯಾಯಿತು. ಎದ್ದ ಮೇಲೆ ಅರ್ಧಗಂಟೆ ಮನೇನೆಲ್ಲ ತನ್ನ ಅಳುವಿನಲ್ಲೇ ಮುಳುಗಿಸಿ ಬಿಡ್ತಾನಪ್ಪಾ" ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡ.

ಸಾಯಂಕಾಲದ ಹೊತ್ತು ಮನೆಯಲ್ಲಿರುವುದು ತುಂಬ ಫಜೀತಿ ಕೆಲಸ. ಸರಯೂ ನದಿ ಮರಳು, ಮಣಿ ಜೊತೆ ಇದಕ್ಕಾಗಿ ಹಂಬಲಿಸಿದ ಸ್ವಾಮಿ. ಆದರೆ ಪರೀಕ್ಷೆ ಮುಗಿಯುವವರೆಗೂ ಮನೆ ಬಿಟ್ಟು ಕದಲಕೂಡದು ಎಂದು ಅಪ್ಪ ಸುಗ್ರೀವಾಜ್ಞೆ ಮಾಡಿಬಿಟ್ಟಿದ್ದರು. ಅಪ್ಪನಿಗೆ ಬದಲು ಹೇಳಬೇಕು ಎಂದು ಆಗಾಗ ಅನ್ನಿಸುವುದು.

ಆದರೆ ಹಾಗೆ ಮಾಡಬೇಕು ಎನ್ನುವಾಗಲೆಲ್ಲ ಗಂಟಲು ಉಡುಗಿ ಹೋಗುತ್ತಿತ್ತು. ಇಷ್ಟಕ್ಕೂ ಇನ್ನೊಂದು ವಾರ ತಾನೇ ಇದನ್ನೆಲ್ಲ ಅನುಭವಿಸಬೇಕಾದದ್ದು?...... ಈ ಒಂದು ಭರವಸೆಯಿಂದ ಅವನಿಗೆ ತ್ರಾಣ ಕೂಡಿಕೊಂಡಿತು.

ಮೇಜಿನ ಮುಂದೆ ಕುಳಿತು ಅಟ್ಲಾಸ್ ತೆಗೆದು, ಯೂರೋಪಿನ ರಾಜಕೀಯ ಭೂಪಟವನ್ನೇ ಹತ್ತು ನಿಮಿಷ ದಿಟ್ಟಿಸಿ ನೋಡಿದ. ಇಷ್ಟು ಡೊಂಕುಬಂಕಾಗಿರುವ ದೇಶದಲ್ಲಿ ಜನ ಹೇಗೆ ಜೀವಿಸುತ್ತಿರುವುದು ಎಂಬುದೇ ಅವನಿಗೆ ದೊಡ್ಡ ಸಮಸ್ಯೆಯಾಗಿ ಹೋಯಿತು. ಭೂಶಿರ, ಭೂಕಂಠ ಮುಂತಾದ ಇಕ್ಕಟ್ಟಾದ ಸ್ಥಳಗಳಲ್ಲಿರುವ ಜನ ಯಾವ ಆಕಾರದಲ್ಲಿರಬಹುದು ಎಂದು ಬಹಳ ಹೊತ್ತು ಯೋಚಿಸಿದ. ಅಷ್ಟು ಇಕ್ಕಟ್ಟಾದ ದೇಶ ಅವರ ಕತ್ತನ್ನೇ ಕಿವಿಚಿ ಬಿಡುವುದಿಲ್ಲವೆ? ಅವನನ್ನು ಯಾವಾಗಲೂ ಪೀಡಿಸುತ್ತಿದ್ದ ಇನ್ನೊಂದು ಪ್ರಶ್ನೆ ಈಗಲೂ ಪೀಡಿಸತೊಡಗಿತು. ಮ್ಯಾಪ್ ಮಾಡುವವರು, ದೇಶ ಹೀಗೆ ಇದೆ ಅಂತ ಯಾವ ರೀತಿ ಕಂಡುಹಿಡಿಯುತ್ತಾರೆ. ಯೂರೋಪು ಖಂಡ ಒಂಟೆಯ ತಲೆ ಹಾಗೆ ಇದೆ ಅಂತ ಹೇಗೆ ಗೊತ್ತಾಯಿತು ಅವರಿಗೆ? ಬಹುಶಃ ಎತ್ತರವಾದ ಗೋಪುರದ ಮೇಲೆ ನಿಂತುಕೊಂಡು ಕೆಳಗೆ ಕಾಣಿಸುವುದನ್ನೆಲ್ಲ ಕಾಪಿ ಮಾಡಿಕೊಳ್ಳುತ್ತಾರೆ ಅಂತ ಕಾಣುತ್ತೆ. ಟೌನ್‌ಹಾಲ್ ತುದಿಯಲ್ಲಿ ನಿಂತುಕೊಂಡರೆ ಮ್ಯಾಪಿನಲ್ಲಿರುವ ರೀತಿಯೆ ಇಂಡಿಯಾವೆಲ್ಲ ತನಗೂ ಕಾಣುತ್ತೆಯೆ? ತಾನೆಂದೂ ಅಲ್ಲಿ ಹತ್ತಿರಹೋಗೇ ಇರಲಿಲ್ಲ. ಹೋಗುವುದಕ್ಕೂ ಇಷ್ಟಪಟ್ಟಿರಲಿಲ್ಲ. ಟೌನ್‌ಹಾಲ್ ಮಹಡಿಯ ಮೇಲೊಂದು ಕತ್ತಲೆ ಕೋಣೆ ಇದೆ; ಪಠಾಣರು ಹುಡುಗರನ್ನೆಲ್ಲಾ ಕದ್ದುಕೊಂಡು ಹೋಗಿ ಅದರೊಳಗೆ ಕೂಡಿಹಾಕುತ್ತಾರೆ ಅಂತ ದರ್ಜಿ ರಂಗ ಹೇಳುತ್ತಿದ್ದ. ತಾನೇನೂ ಅದನ್ನು ನಂಬಿರಲಿಲ್ಲ. ಆದರೂ ಅಲ್ಲಿಗೇಕೆ ಹೋಗಬೇಕಪ್ಪ?

ಥುತ್, ಭೂಪಟ ನೋಡುವುದು ಬಿಟ್ಟು ಈ ಯೋಚನೆಯೆಲ್ಲ ಏಕೆ ಎಂದು ಮೈಕೊಡವಿಕೊಂಡು ಸಮಾಧಿಯಿಂದ ಎದ್ದವನಂತೆ ಭೂಪಟವನ್ನು ನೋಡಿಕೊಂಡು ತಾನೇ ಒಂದು ಮ್ಯಾಪ್ ಬರೆದ. ಬರೆದಾದ ಮೇಲೆ ಮೂಲವನ್ನೂ ಪ್ರತಿಯನ್ನೂ ಹೋಲಿಸಿ ನೋಡಿದ. ಒಂಟೆಯ ತಲೆಯನ್ನೂ ಗೂಳಿಯ ತಲೆಯನ್ನೂ ಬೆರಸಿಬಿಟ್ಟ ಹಾಗಿತ್ತು ಮ್ಯಾಪು. ಆದರೂ ಎಷ್ಟು ಚೆನ್ನಾಗಿ ಬಂದಿದೆ ಅಂತ ತನ್ನ ಬೆನ್ನು ತಾನೇ ತಟ್ಟಿಕೊಂಡ.

ಈ ವೇಳೆಗೆ ಏಳು ಗಂಟೆ ಹೊಡೆಯಿತು. ಅಪ್ಪ ಮನೆಗೆ ಬಂದರು. ಮಗ ಓದುತ್ತಾ ಇರುವುದನ್ನು ನೋಡಿ ಅವರಿಗೆ ಬಹಳ ಸಂತೋಷವಾಯಿತು. ಭೂಪಟವನ್ನು ನೋಡಿ ಭಲೆ ಎಂದರು. ತಾನು ಪಟ್ಟ ಶ್ರಮವೆಲ್ಲ ಸಾರ್ಥಕವಾಯಿತು ಎನಿಸಿತು ಸ್ವಾಮಿಗೆ. ಅಟ್ಲಾಸಿನ ಎಳೆಂಟು ಪುಟ ಮಗುಚಿ ಆಫ್ರಿಕಾ ಖಂಡದ ನಕ್ಷೆಯನ್ನು ತೆರೆದಿಟ್ಟುಕೊಂಡ.

## ಐದು

ಪರೀಕ್ಷೆ ಎರಡು ದಿನವಿದೆ ಎನ್ನುವಾಗ ಸ್ವಾಮಿ ಕುಳಿತುಕೊಂಡು ತನಗೆ ಏನೇನು ಸಾಮಾನು ಬೇಕೋ ಒಂದು ಕಾಗದದ ಚೂರಿನ ಮೇಲೆ ಪಟ್ಟಿ ಹಾಕಿದ.

ರೂಲು ಹಾಕದ ಬಿಳಿ ಕಾಗದ 20 ಹಾಳೆ

ನಿಬ್ಬುಗಳು 6

ಇಂಕು 2 ಬಾಟ್ಲಿ

ಕ್ಲಿಪ್ಪುಗಳು

ಗುಂಡುಸೂಜಿಗಳು



ಪೆನ್ಸಿಲ್ ತುದಿಯನ್ನು ಒಂದು ಸಲ ಕಚ್ಚಿ, ಪಟ್ಟಿಯನ್ನು ಮೊದಲಿಂದ ಕೊನೆಯವರೆಗೆ ಇನ್ನೊಮ್ಮೆ ಓದಿದ. ಬಹಳ ವ್ಯಸನವಾಯಿತು. ಏನು! ತನಗೆ ಬೇಕಾದುದೆಲ್ಲ ಇಷ್ಟೇನೆ? ಪಟ್ಟಿ ಬರೆಯಲು ಷುರುಮಾಡಿದಾಗ ಎರಡು ಮೂರು ಪುಟವಾದರೂ ತುಂಬಿ ನೋಡಿದವರೆಲ್ಲ ಹೆದರಿಕೊಳ್ಳುವ ಹಾಗಿರುತ್ತೆ ಅಂತ ಅಂದುಕೊಂಡಿದ್ದರೆ, ಇಷ್ಟು ಕೊಂಚವೇ ಆಗುವುದೆ? ಐದೇ ಇದು ಸಾಲು! ಎಷ್ಟು ಸಲ ಲೆಕ್ಕಮಾಡಿದರೂ ಐದೇ. ಪಟ್ಟಿಯನ್ನು ಇನ್ನೊಂದು ಸಲ ಬುಡದಿಂದ ತುದಿಯವರೆಗೆ ಪರಿಶೀಲಿಸಿದ. 'ರೂಲು ಹಾಕದ ಬಿಳಿ ಕಾಗದ 20 ಹಾಳೆ'. ರೂಲು ಹಾಕದೆ ಇರುವ ಕಾಗದವೆ ಆಗಬೇಕೇನು? ಅದೇಕೆ ಅಷ್ಟು ಹಟ? ಏನೇ ಮಾಡಲಿ, ತಾನು ಬರೆಯುವ ಸಾಲುಗಳು ಕಾಗದದ ಬಲಗಡೆ ಮೂಲೆಯನ್ನೇ ಹತ್ತುತ್ತ ಅನ್ನುವುದು ತನಗೆ ಚೆನ್ನಾಗಿ ಗೊತ್ತು. ಪರೀಕ್ಷೆಯಲ್ಲಿ

ಹೀಗೆಲ್ಲ ಸೊಟ್ಟಸೊಟ್ಟಾಗಿ ಬರೆದರೆ ಆಗದು. ಆದ್ದರಿಂದ ರೂಲು ಹಾಕಿರುವ ಕಾಗದವನ್ನೂ ಸ್ವಲ್ಪ ಇಟ್ಟುಕೊಂಡಿರುವುದು ಒಳ್ಳೇದು. ಆಮೇಲೆ ನಿಬ್ಬು. ಪರೀಕ್ಷೆಗೆ ಒಬ್ಬನಿಗೆ ಎಷ್ಟು ನಿಬ್ಬು ಬೇಕು? ಒಂದೋ ಎರಡೋ? ಐದೋ?...... ಆಮೇಲೆ ಆ ಇಂಕಿನದೂ ಬಲು ತಾಪತ್ರಯಕ್ಕಿಟ್ಟುಕೊಂಡಿತ್ತು. ಎಷ್ಟು ಕೊಂಡುಕೊಳ್ಳಬೇಕು? ಅದಾದ ಮೇಲೆ ಕ್ಲಿಪ್ಪುಗಳು, ಗುಂಡುಸೂಜಿಗಳು. ಅವನ್ನು ಒಂಟ್ಗೊಂಟಿಯಾಗಿ ಕೊಂಡುಕೊಳ್ಳಬೇಕೊ, ಡಜನ್‌ಗಟ್ಟಲೆ ಕೊಂಡುಕೊಳ್ಳಬೇಕೊ ಒಂದೂ ತಿಳಿಯದು. ಜೊತೆಗೆ ತನಗೆ ಎಷ್ಟು ಬೇಕಾಗಬಹುದು ಎನ್ನುವುದೂ ತಿಳಿಯದು. ಅಂಗಡಿಗೆ ಹೋಗಿ ಆರು ಕ್ಲಿಪ್ಪು, ಆರು ಗಂಡುಸೂಜಿ ಕೊಡಿ ಅಂತ ಕೇಳಿದರೆ ಅಂಗಡಿಯವನು ಕೋಪ ಮಾಡಿಕೊಂಡುಬಿಟ್ಟರೆ? ಪಟ್ಟಿ ಬದಲಾಯಿಸಿದ.

ತಿದ್ದಿದ ಪಟ್ಟಿ ಹೀಗಿತ್ತು :

| | |
|---|---|
| ರೂಲು ಹಾಕದ ಬಿಳಿ ಕಾಗದ | 20 ಹಾಳೆ |
| ರೂಲು ಹಾಕಿರುವ ಕಾಗದ | 10 ಹಾಳೆ |
| ಕಪ್ಪು ಶಾಯಿ | 1 ಸೀಸೆ |
| ಕ್ಲಿಪ್ಪುಗಳು | 12 |
| ಗುಂಡುಸೂಜಿ | 12 |

ಊಹು. ಪಟ್ಟಿ ಈಗಲೂ ಸಮರ್ಪಕವಾಗಿಲ್ಲ. ಬಹಳ ಹೊತ್ತು ಧ್ಯಾನಮಾಡಿ, "ರಟ್ಟು ಒಂದು, ಚಿಲ್ಲರೆ ಖರ್ಚಿಗೆ ಒಂದು ರೂಪಾಯಿ" ಎಂದು ಸೇರಿಸಿದ.

ಅಪ್ಪ ಆಫೀಸ್ ರೂಂನಲ್ಲಿ ಬಹಳ ಕೆಲಸದಲ್ಲಿದ್ದರು. ಸ್ವಾಮಿನಾಥ ಪಟ್ಟಿ ಹಿಡಿದುಕೊಂಡು ಅಪ್ಪನ ಮುಂದೆ ನಿಂತುಕೊಂಡ. ಅಪ್ಪನ ಮನಸ್ಸೆಲ್ಲ ಕೆಲಸದಲ್ಲಿತ್ತು. ಸ್ವಾಮಿನಾಥ ಅಲ್ಲಿಗೆ ಬಂದುದೇ ತಿಳಿಯಲಿಲ್ಲ. ಬೇರೆ ಯಾವ ವೇಳೆಯಲ್ಲಾದರೂ ಬರುವುದು ವಾಸಿ ಎಂದು ಸ್ವಾಮಿಗೆ ತಕ್ಷಣ ಹೊಳೆಯಿತು. ಊಟ ಆದಮೇಲೆ ಈ ವಿಷಯ ಎತ್ತಿದರೆ ಅಪ್ಪ ಒಪ್ಪಿಯೇ ತೀರುತ್ತಾರೆ ಎಂದು ಖಾತರಿ ಮಾಡಿಕೊಂಡು, ಮೆಟ್ಟಿಂಗಾಲಿಟ್ಟುಕೊಂಡು ವಾಪಸ್ ಹೊರಟು ಬಂದ. ಬಾಗಿಲಿಂದ ಹೊರಗೆ ಬರಬೇಕೆನ್ನುವಷ್ಟರಲ್ಲಿ, "ಯಾರೋ ಅದು?" ಎಂದು ಕೂಗಿದರು ಅಪ್ಪ. ಗಂಟಲು ಏಕೋ ಬಲು ಗಡಸಾಗಿತ್ತು. ನಯವೇ ಇರಲಿಲ್ಲ. ಅಲ್ಲಿರಬೇಕೋ ತಲೆಮರೆಸಿಕೊಳ್ಳಬೇಕೋ ಎಂದು ಸ್ವಾಮಿನಾಥ ನಿಶ್ಚಯಿಸುವಷ್ಟರಲ್ಲಿ, "ಯಾರೋ ಅದು?" ಎಂದು ಗರ್ಜಿಸುತ್ತ ಅಪ್ಪ ಬಂದು ಬಾಗಿಲ ಹತ್ತಿರ ನಿಂತೇಬಿಟ್ಟರು.

"ನೀನೋ?"

"ಹೌದು."

"ಬೆಪ್ಪು ಮುಂಡೇದೆ, ಮಾತಾಡಬಾರದೇನೋ? ಯಾರೂ ಯಾರೂ, ಅಂತ ಬಡಕೊಂಡು ನನ್ನ ಗಂಟಲೆಲ್ಲ ಹಾಳಾಗಿಹೋಯಿತಲ್ಲೋ?...... ಈ ಹಾಳು ಮನೆಯಲ್ಲಿ ಒಂದು ಗಳಿಗೆಯಾದರೂ ಪುರಸತ್ತು ಸಿಗಬೇಡವೆ? ಕೆಲಸ ಮಾಡ್ತಾ ಕೂತಿದೀನಿ ಇಲ್ಲಿ

- ಬರ್ತಾರೆ, ಯಾರಾದರೂ ಒಬ್ಬರು, ನಿಮಿಷಕ್ಕೆ ಹತ್ತು ಸರಿ, ದಡಬಡಾ ಅಂದ್ಕೊಂಡು. ಏನೋ ರಾಜ್ಯ ಕೊಳ್ಳೇ ಹೋಗುತ್ತೆ ಅಂದರೆ ಏನಿಲ್ಲ. ಮಣ್ಣಂಗಟ್ಟಿ. ನಾನೇನು ಕೆಲಸ ಮಾಡಬೇಕೊ ಬೇಡವೊ? ಹೋಗಿ ನಿಮ್ಮ ತಾಯಿಗೆ ಹೇಳು, ಈವತ್ತೆಲ್ಲ ನನ್ನ ಕೋಣೇಗೆ ಕಾಲಿಡಕೂಡದೂ ಅಂತ. ಎಣ್ಣೆ ಮಾರೋವರು, ತರಕಾರಿ ಮಾರೋವರು ದಂಡುದಂಡೆ ಕಟ್ಟಿಕೊಂಡು ಬಂದು ದುಡ್ಡು ಕೇಳಿದರೂ ಜಪ್ಪಯ್ಯ ಅನ್ನೊಲ್ಲ ನಾನು. ಬೇಕಾದರೆ ಎಲ್ಲಾರನ್ನೂ ನಿಮ್ಮಮ್ಮನೇ ಅಟ್ಟಲಿ. ನಿಮ್ಮ ತಾಯೂ ಅಂದ್ಕೊಂಡಿರಬಹುದು..... ಏನದು ಕಾಗದ, ನಿನ್ನ ಕೈಲಿ?"

ಸ್ವಾಮಿನಾಥ ಕಾಗದವನ್ನು ಜೇಬಿಗೆ ಇಳಿಯಬಿಡುತ್ತಾ "ಏನಿಲ್ಲಾಪ್ಪ" ಎಂದ.

"ಏನೋ ಅದು, ತಾರೊ" ಎಂದು ಕೂಗಿ ಆ ಪಟ್ಟೀನ ಕಿತ್ತುಕೊಂಡೇ ಬಿಟ್ಟರು ಅಪ್ಪ. ಸಿಡುಕು ಮೋರೆ ಹಾಕಿಕೊಂಡು ಅದನ್ನೆಲ್ಲ ಓದಿ, ತನ್ನ ಕುರ್ಚಿ ಕಡೆಗೆ ಹೋಗಿ ಕೇಳಿದರು : "ಏನೋ ಇಲ್ಲಿ ಬರೆದಿರೋದೆಲ್ಲ?"

ಉತ್ತರ ಹೇಳಲು ಮಾತು ಹೊರಡಬೇಕಾದರೆ ಸ್ವಾಮಿ ಎರಡು ಸಲ ಕೆಮ್ಮಬೇಕಾಯಿತು. "ನನ್ನ - ಪ ಪ ಪರೀಕ್ಷೆ ಪಟ್ಟಿ ಅಪ್ಪ."

"ಯಾವ ಪರೀಕ್ಷೆ ಪಟ್ಟಿ? ನಿನ್ನ ತಲೆ."

"ನಮ್ಮ ಪರೀಕ್ಷೆ ನಾಳಿದ್ದಿನಿಂದ ಷುರು ಅಪ್ಪಾ."

"ನಾಳಿದ್ದು ಷುರೂ ಅಂತೀಯ, ಆದರೂನೂ ಲಂಗುಲಗಾಮಿಲ್ಲದೆ, ಹೇಳೋರು ಕೇಳೋರಿಲ್ಲದ ಬೀದಿನಾಯಿ ಹಾಗೆ ಮನೆಯೆಲ್ಲ ಅಲೀತಿದ್ದೀಯಾ? ಏನು ಪಟ್ಟಿ ಇದು? ರೂಪಾಯಿ ಆಣೆ ಕಾಸು ಆಕಾಶದಿಂದ ಉದುರುತ್ತೆ ಅಂತ ತಿಳ್ಕೊಂಡಿದ್ದೀಯಾ ನೀನು?" ಆಕಾಶದಿಂದ ಉದುರದೆ ಹೋದರೂನೂ ಸ್ವಲ್ಪ ಹಾಗೆ ಹಾಗೇ ಅಂತ ಸ್ವಾಮಿಯ ಅಭಿಪ್ರಾಯ. ಅಪ್ಪ ತನ್ನ ಬೀರುಡ್ರಾಯರ್ ಎಳೆದು ಬಗ್ಗಿ ನೋಡಿ, "ಇಗೊ, ಇಲ್ಲಿ ನೋಡು. ಏನು ಬೇಕಾದರೂ ಇಲ್ಲಿಂದ ತೊಗೊ, ನನ್ನ ಹತ್ತಿರ ಕ್ಲಿಪ್ಪಿಲ್ಲ. ಕ್ಲಿಪ್ಪೇನೂ ಬೇಕಾಗಿಲ್ಲ. ರಟ್ಟಂತೆ. ರಟ್ಟು ತಾನೆ ಏಕೆ? ಡೆಸ್ಕು ಇರೋದಿಲ್ಲವೊ? ನಮ್ಮ ಕಾಲದಲ್ಲಿ ಸ್ಲೇಟು ಬಳಪ ಸಾಕಾಗಿತ್ತು. ಈಗ ಕಾಗದ, ಪೆನ್ನು, ಇಂಕು, ಕಾಗದದ ಕೆಳಗಿಡೋಕೆ ಒಂದು ರಟ್ಟು ...... ಹೋಗೋ" ಎಂದುಬಿಟ್ಟರು. ಒಂದು ದೊಡ್ಡ ಕೆಂಪು ಸೀಸದ ಪೆನ್ಸಿಲ್ಲು ತೆಗೆದುಕೊಂಡು 'ರಟ್ಟು' ಎನ್ನುವುದನ್ನು ಪಟ್ಟಿಯಿಂದ ಹೊಡೆದುಹಾಕಿದರು. ಕಾಗದದ ಮೇಲೆ ದೊಡ್ಡ ಬರೆ ಎಳೆದ ಹಾಗಿತ್ತು. ಆಮೇಲೆ ಆ ಪಟ್ಟಿಯನ್ನು ಸ್ವಾಮಿಯ ಮುಖದ ಮೇಲೆ ಎಸೆದರು. ಸ್ವಾಮಿ ಬಹಳ ವ್ಯಸನದಿಂದ ಅದರ ಕಡೆ ನೋಡಿದ. ಜೇಬಿನ ತುಂಬ ದುಡ್ಡು ಘಲಘಲಾ ಎನ್ನಿಸುತ್ತ ಅಮೀರ್ ಬುಕ್ ಡಿಪೋಗೆ ಹೋಗಿ ಎಲ್ಲಾ ಕೊಂಡುಕೊಳ್ಳಬಹುದು ಅಂತ ಎಷ್ಟು ರಮ್ಯವಾದ ಕನಸು ಕಟ್ಟಿದ್ದ!

ಸ್ವಾಮಿ ಕೊಠಡಿಯಿಂದ ಹೊರಡುತ್ತಿದ್ದ. ಅವನನ್ನು ಅಪ್ಪ ಮತ್ತೆ ಕರೆದು, "ಬಾರೋ ಇಲ್ಲಿ. ನೀನು ಹೋಗೋವಾಗ ಆ ಮಗೂನೂ ಎತ್ತಿಕೊಂಡು ಹೋಗು ಹಾಲ್‌ನಿಂದ. ಆ ಪಾರಬ್ಧದ ಅಳು ಕೇಳಿ ಕೇಳಿ ತಲೆ ಚಿಟ್ಟು ಹಿಡಿದು ಹೋಗಿದೆ....... ಏನು ಬಂದಿದೆ

ಅದಕ್ಕೆ?...... ನಿಮ್ಮ ತಾಯಿಗೇನು ಕಿವುಡೋ, ಹುಚ್ಚೋ? ಎಲ್ಲವಳು? ಅತ್ತು ಅತ್ತು ಉಸಿರು ಸಿಕ್ಕಿಹಾಕ್ಕೋಬೇಕು. ಆದರೂ ಆವಳು ಮಾತ್ರ........"

# ಶಾಲೆ ಮುಗಿಯಿತು

ಗಂಟಲೂ ತುಟಿಯೂ ಒಣಗಿಹೋಗಿವೆ. ಬೆರಳ ತುದಿ ಮಸಿಯಿಂದ ಕಪ್ಪಾಗಿದೆ. ಒಂದು ಕಡೆ ಆಯಾಸ, ಇನ್ನೊಂದು ಕಡೆ ಸಂಭ್ರಮ. ಕೊನೆಯ ದಿನ, ಕೊನೆಯ ಪೇಪರಿಗೆ ಬರೆದು ಸ್ವಾಮಿನಾಥನ್ ಪರೀಕ್ಷೆ ಹಾಲ್‌ನಿಂದ ಹೊರಗೆ ಕಾಲೆಳೆದುಕೊಂಡು ಬಂದ.

ಹಜಾರದಲ್ಲಿ ನಿಂತು ಹಾಲ್‌ನೊಳಗೆ ಒಂದು ಸಲ ನೋಡಿದ. ಮನಸ್ಸಿಗೇಕೊ ಒಂದು ಬಗೆಯ ಕಳವಳವಾಯಿತು, ಎಲ್ಲ ಹುಡುಗರೂ ತನ್ನಂತೆಯೆ ಹೊತ್ತಿಗಿಂತ ಇಪ್ಪತ್ತು ನಿಮಿಷ ಮುಂಚೆಯೆ ಪೇಪರ್ ಕೊಟ್ಟು ಹೊರಗೆ ಬಂದುಬಿಟ್ಟಿದ್ದರೆ ಬಹಳ ಸಮಾಧಾನವಾಗಿರುತ್ತಿತ್ತು. ಎಡ ಭುಜವನ್ನು ಗೋಡೆಗೆ ಒರಗಿಸಿಕೊಂಡಿದ್ದ ಶಂಕರ್ ಬೇರೆ ಯಾವುದೋ ಪ್ರಪಂಚದಲ್ಲಿ ತಲ್ಲೀನನಾಗಿದ್ದ. ಎರಡನೆಯ ಗವಾಕ್ಷದ ಕೆಳಗೆ ಇಬ್ಬರು ಮೇಲಿನ ತರಗತಿಯ ಹುಡುಗರ ನಡುವೆ ರಾಜಂ ಕುಳಿತಿದ್ದ. ನೋಡಿದರೆ ಬರೆಯುವ ಯಂತ್ರದಂತೆ ಕಾಣುತ್ತಿದ್ದಾನೆ. ಮಣಿಯಾದರೋ ಲೇಖನಿಯ ತುದಿಯಿಂದ ಗಡ್ಡವನ್ನು ಕೆರೆದುಕೊಳ್ಳುತ್ತ ಚಾವಣಿಯ ತೊಲೆಗಳನ್ನೇ ನೋಡುತ್ತಿದ್ದಾನೆ. ಬಟಾಣಿ ಹಿಂದಿನ ಡೆಸ್ಕಿಗೆ ಬೆನ್ನೊರಗಿಸಿ ತನ್ನ ಉತ್ತರಗಳನ್ನೆಲ್ಲಾ ಓದಿನೋಡುತ್ತಿದ್ದಾನೆ. ಉಸ್ತುವಾರಿ ನೋಡಿಕೊಳ್ಳಲು ಬಂದಿದ್ದ ಇಬ್ಬರು ಮೇಷ್ಟರುಗಳ ಪೈಕಿ ಒಬ್ಬರು ಕುಳಿತ ಕುರ್ಚಿಯಲ್ಲೇ ತೂಕಡಿಸುತ್ತಿದ್ದಾರೆ. ಇನ್ನೊಬ್ಬರು ಏನೋ ಚಿಂತಿಸುವವರ ರೀತಿ ಕಣ್ಣನ್ನು ಅರೆಮುಚ್ಚಿ ಸೊಂಟದ ಹಿಂದೆ ಕೈಗಳನ್ನು ಗಂಟು ಹಾಕಿಕೊಂಡು ಈ ಕಡೆಯಿಂದ ಆ ಕಡೆಗೆ ಹೆಜ್ಜೆಯಿಕ್ಕುತ್ತಿದ್ದಾರೆ. ಲೇಖನಿಯ ನಿಬ್ಬುಗಳು ಬಹಳ ಲವಲವಿಕೆಯಿಂದ ಕರಕರಗುಟ್ಟುತ್ತಿವೆ. ಕಾಗದದ ಹಾಳೆಗಳು ಸರಸರನೆ ಸದ್ದು ಮಾಡುತ್ತಿವೆ. ಹುಡುಗರು ಆಗಿಂದಾಗ್ಗೆ ಗಂಟಲನ್ನು ಸರಿಮಾಡಿಕೊಳ್ಳುತ್ತಿದ್ದಾರೆ. ಈ ಸದ್ದುಗಳ ಹೊರತು ಕಟ್ಟಡದಲ್ಲೆಲ್ಲ ಮೌನ ಕವಿದಿದೆ.

ಸ್ವಾಮಿಗೆ ಇದ್ದಕ್ಕಿದ್ದಂತೆ ಇಷ್ಟು ಬೇಗನೆ ಬರಬಾರದಾಗಿತ್ತು. ಎನಿಸಿತು. ಆದರೆ ಹೆಚ್ಚು ಹೊತ್ತು ಒಳಗಿರಲು ಹೇಗೆ ಸಾಧ್ಯವಿತ್ತು? ಐದು ಗಂಟೆ ಹೊಡೆಯುವ ವರೆಗೂ ಉತ್ತರ ಬರೆಯಲೆಂದು ತಮಿಳು ಪತ್ರಿಕೆ ಕೊಟ್ಟಿದ್ದವರ ಹಂಚಿಕೆ. ಅದೇನೋ ನಿಜ. ಆದರೆ ತಾನು ಕೊನೆಯ ಉತ್ತರದ ಕೊನೆಯ ಸಾಲನ್ನು ಬರೆದಾಗ ಠಾಕೋಠಾಕು ನಾಲ್ಕೂವರೆ ಗಂಟೆ. ಕೊಟ್ಟಿದ್ದ ಆರು ಪ್ರಶ್ನೆಗಳಲ್ಲಿ ಮೊದಲನೆಯದಕ್ಕೆ ಬರೆದಿದ್ದ ಉತ್ತರ ಚೆನ್ನಾಗಿತ್ತು. ಎರಡನೆಯದು ಸ್ವಲ್ಪ ಹಾಗೆಹಾಗೆ. ಮೂರನೆಯದು ಸಮರ್ಪಕವಾಗಿತ್ತು; ನಾಲ್ಕನೆಯ

ಉತ್ತರ ಶುದ್ಧ ತಪ್ಪು; ತನಗೇ ಅದು ಗೊತ್ತು. (ಆದರೆ ಸರಿಯಾದ ಉತ್ತರ ಗೊತ್ತಿಲ್ಲವಲ್ಲ, ಏನು ಮಾಡೋದು?) ಕೊನೆಯ ಉತ್ತರ ಇತ್ತಲ್ಲಾ, ಎಲ್ಲಕ್ಕಿಂತ ಭೇಷಾಗಿತ್ತು. ಒಂದೇ ಒಂದು ನಿಮಿಷ ತೆಗೆದುಕೊಂಡಿತು ಬರೆಯೋದಕ್ಕೆ. ನಾಲ್ಕೂವರೆಗೆ ಎರಡು ನಿಮಿಷವಿದೆಯೆನ್ನುವಾಗ ಪ್ರಶ್ನೆ ಓದಿದ; ಒಂದು ನಿಮಿಷವಾದ ಮೇಲೆ ಉತ್ತರ ಬರೆಯಲು ಮೊದಲು ಮಾಡಿದ; ನಾಲ್ಕೂವರೆಗೆ ಬರೆದು ಮುಗಿಸಿದ. ಪ್ರಶ್ನೆ ಇದ್ದುದು : 'ಬ್ರಾಹ್ಮಣ ಮತ್ತು ಹುಲಿ ಎಂಬ ಕತೆಯಿಂದ ನಿಮಗೇನು ನೀತಿ ತಿಳಿದುಬರುತ್ತದೆ?' ಎಂದು. (ಒಬ್ಬ ಬ್ರಾಹ್ಮಣ ಒಂದು ಸರೋವರದ ಅಂಚಿನಲ್ಲಿ ನಡೆದು ಹೋಗುತ್ತಿದ್ದ. ಸರೋವರದ ಆ ಕಡೆಯ ದಡದಿಂದ ಒಂದು ಹುಲಿ ಅವನ್ನು ಕೂಗಿ ಕರೆದು, "ಎಲೈ ಬ್ರಾಹ್ಮಣನೆ, ಈ ಬಂಗಾರದ ಬಳೆಯನ್ನು ತೆಗೆದುಕೊ" ಎಂದಿತು. ಬ್ರಾಹ್ಮಣ ಮೊದಲು ಒಲ್ಲೆ, ಎಂದ. ಅದಕ್ಕೆ ಹುಲಿ ಹೇಳಿತು : "ನಾನು ಸಾಧುವಾದ ಪ್ರಾಣಿ; ನಿನಗೇನೂ ಮಾಡುವುದಿಲ್ಲ. ದಯವಿಟ್ಟು ಈ ಬಂಗಾರದ ಬಳೆಯನ್ನು ಸ್ವೀಕರಿಸಿ ಪಾಮರನಾದ ನನ್ನನ್ನು ಉದ್ಧಾರ ಮಾಡಬೇಕು." ಇದನ್ನು ನಂಬಿ ಬ್ರಾಹ್ಮಣ ನೀರನ್ನು ಹಾದುಹೋದನು. ಹೋದವನು, ಬಳೆಯನ್ನು ತೆಗೆದುಕೊಳ್ಳಲು ಕೈಚಾಚುವ ಮೊದಲೇ ಹುಲಿಯ ಹೊಟ್ಟೆಯೊಳಗಿದ್ದನು.) ಈ ಕತೆಗೊಂದು ನೀತಿಯಿರಬಹುದೆಂದು ಸ್ವಾಮಿನಾಥನಿಗೆ ಎಂದೂ ಹೊಳೆದಿರಲಿಲ್ಲ. ಆದರೆ ಪ್ರಶ್ನೆ ಪತ್ರಿಕೆಯಲ್ಲಿ ಕೇಳಿರುವುದರಿಂದ ಆ ಕತೆಗೊಂದು ನೀತಿಯಿದ್ದೇ ತೀರಬೇಕೆಂದು ಈಗ ಅವನಿಗೆ ತೋರಿತು. ನೀತಿ ಏನಿರಬಹುದೆಂಬುದನ್ನು ನಿಷ್ಕರ್ಷಿಸಲು ಒಂದು ನಿಮಿಷ ಹಿಡಿಯಿತು : "ಯಾವುದಾದರೂ ಹುಲಿಯು ಬಂಗಾರದ ಬಳೆಯನ್ನು ಕೊಡುವುದಕ್ಕೆ ಬಂದರೆ ನಾವದನ್ನು ತೆಗೆದುಕೊಳ್ಳಬಾರದು." ಅಥವಾ "ಬಂಗಾರದ ಬಳೆಯ ಮೇಲಿನ ಆಸೆಯಿಂದ ಒಬ್ಬ ಮನುಷ್ಯ ತನ್ನ ಪ್ರಾಣವನ್ನೇ ಕಳೆದುಕೊಂಡ" - ಈ ಎರಡರಲ್ಲಿ ಯಾವುದು ಸರಿ? ಎರಡನೆಯದರಲ್ಲೇ ಹೆಚ್ಚು ಅರ್ಥವಿದೆಯೆಂದು ಸ್ವಾಮಿಗೆ ತೋರಿತು. ಅದನ್ನೇ ಬರೆದ. ಬರೆದ ಮೇಲೆ ಹಾಲ್‌ನಲ್ಲಿದ್ದ ಮಾರಗಲದ ಗಡಿಯಾರದ ಕಡೆ ನೋಡಿದ. ಇನ್ನೂ ಅರ್ಧ ಗಂಟೆ ಇದೆ. ಅರ್ಧ ಗಂಟೆಯ ಹೊತ್ತು ಏನು ಮಾಡುವುದು? ಎಲ್ಲರಿಗಿಂತ ಮೊದಲು ಎದ್ದು ಹೋಗಲು ಮನಸ್ಸು ಬರಲಿಲ್ಲ. ಏಕೋ ಎಡವಟ್ಟು. ಎಲ್ಲರೂ ತನ್ನಂತೆಯೇ ಕೇಳಿದ್ದನ್ನು ಮಾತ್ರ ಸರಸರನೆ ಏಕೆ ಬರೆಯಬಾರದು?

ಕಾಲ ಕಳೆಯುವುದೂ ಬಹಳ ಕಷ್ಟವಾಯಿತು. ಮೂರು ಗಂಟೆಯ ಬದಲು ಎರಡೂವರೆ ಗಂಟೆಯಾದರೂ ನಿಗದಿ ಮಾಡಬಾರದಿತ್ತೇ ಈ ಪ್ರಶ್ನೆ ಪತ್ರಿಕೆಗೆ? ಹೊರಗಡೆಯ ಹಜಾರದ ಕಡೆ ಹಂಬಲದ ದೃಷ್ಟಿ ಬೀರಿದ. ಎದ್ದುನಿಂತು ಪೇಪರ್ ಕೊಟ್ಟು ಹೊರಗೆ ಹೊರಟು ಹೋಗುವಷ್ಟು ಧೈರ್ಯ ಸದ್ಯ ಬಂದದ್ದೇ ಆದರೆ - ತಿರುಗಿ ತಿಂಗಳುಗಟ್ಟಲೆ ಪರೀಕ್ಷೆ ಯೋಚನೆಯೇ ಮಾಡಬೇಕಾಗಿಲ್ಲ - ಏನು ಬೇಕಾದರೂ ಮಾಡಬಹುದು - ಹಗಲು, ಸಂಜೆ, ಮಧ್ಯಾಹ್ನ ಯಾವಾಗ ಬೇಕಾದರೂ ಊರೆಲ್ಲ ತಿರುಗಾಡಬಹುದು - ಪುಸ್ತಕ ಬಿಸಾಡಬಹುದು - ಕೊನೆ ಇಲ್ಲದಷ್ಟು ಕತೆ ಹೇಳು ಅಂತ ಅಜ್ಜಿಯನ್ನು ಪೀಡಿಸಬಹುದು.

ಒಬ್ಬ ಸೂಪರ್‌ವೈಜರ್ ಇವನ ಕಡೆಯೆ ನೋಡುತ್ತಿದ್ದರು. ಅದನ್ನು ಕಂಡು, ಉತ್ತರ ಬರೆಯುವುದರಲ್ಲೇ ಮಗ್ನನಾಗಿರುವ ರೀತಿ ಆಟ ಕಟ್ಟಿದ ಸ್ವಲ್ಪ ಕಾಲ. ಅದರ ಬದಲು ಸ್ವಲ್ಪ ರಿವೈಸ್ ಮಾಡಬಹುದಲ್ಲ ಎನಿಸಿತು. ಮೊದಲನೆಯ ಪ್ರಶ್ನೆಯ ಮೊದಲಿನ ಎಂಟು ಸಾಲು ಓದಿದ, ಬೇಜಾರಾಯಿತು. ಹಾಳೆ ಮಗುಚಿಹಾಕಿ, ಕೊನೆಯ ಉತ್ತರದ ಕಡೆಯೆ ನೋಡುತ್ತ ಕುಳಿತ. ರಿವೈಸ್ ಮಾಡುವನಂತೆ ನಟಿಸಬೇಕಾಗಿತ್ತು. ಹುಲಿಯ ಕತೆಯ ಉತ್ತರದ ಕೆಳಗೆ ಅಡ್ಡಗೀಟು ಹಾಕಿದ, ಉತ್ತರಗಳೆಲ್ಲಾ ಮುಗಿಯಿತು ಎಂದು ತೋರಿಸಲು. ಅವನ್ನೇ ಬೆಳೆಸಿಕೊಂಡು ಬಂದ. ಕೊನೆಗದು ಅರ್ಥ ಅನ್ವಯಗಳಿಲ್ಲದಂಥ ವಿಚಿತ್ರ ರಂಗೋಲೆಯ ಹಾಗಾಯಿತು.

ಐದು ಗಂಟೆಯ ಸಮಯವಾಗಿಯೆ ಇರಬೇಕೆಂದು ಗಡಿಯಾರದ ಕಡೆ ನೋಡುತ್ತಾನೆ; ನಾಲ್ಕೂವರೆ ಕಳೆದು ಹತ್ತೇ ನಿಮಿಷ ಇನ್ನೂ. ಇಬ್ಬರು ಮೂವರು ಹುಡುಗರು ಪೇಪರ್ ಕೊಟ್ಟುಬಿಟ್ಟು ಹೊರಗೆ ಹೋದರು. ಸ್ವಾಮಿಗೆ ಮಹದಾನಂದವಾಯಿತು. ಸರಸರನೆ ಉತ್ತರಪತ್ರಿಕೆಯನ್ನು ಅರ್ಧಕ್ಕೆ ಮಡಿಸಿ, ಮಡಿಕೆಯ ಮೇಲೆ ಈ ರೀತಿ ಲಾಂಗುಲರೂಪದ ವಿಳಾಸ ಬರೆದ:

ತಮಿಳು - ತಮಿಳು
ಡಬ್ಲ್ಯು. ಎಸ್. ಸ್ವಾಮಿನಾಥನ್
ಫಸ್ಟ್ ಫಾರಂ 'ಎ' ಸೆಕ್ಷನ್
ಆಲ್ಬರ್ಟ್ ಮಿಷನ್ ಸ್ಕೂಲ್
ಮಾಲ್ಗುಡಿ
ದಕ್ಷಿಣ ಇಂಡಿಯಾ
ಏಷ್ಯಾ

## ಎರಡು

ಗಂಟೆ ಹೊಡೆಯಿತು. ಇಬ್ಬಿಬ್ಬರಾಗಿ ಮೂವರು ಮೂವರಾಗಿ ಹುಡುಗರು ಹಾಲ್‌ನಿಂದ ಹೊರಬಿದ್ದರು. ಹಿಂದಿನ ಮೂರು ಗಂಟೆಗಳ ಮೌನಕ್ಕೂ ಈಗಿನ ಮಹೋತ್ಸಾಹಕ್ಕೂ ಎಲ್ಲಿಯ ಸಂಬಂಧ! ಎಲ್ಲರೂ ಮಾತಾಡುವವರೇ, ಎಲ್ಲರಿಗೂ ಆತುರವೇ.

"ಕೊನೇ ಪ್ರಶ್ನೆಗೇನು ಬರೆದೆಯೋ?" ಎಂದು ತರಗತಿಯ ಹುಡುಗನೊಬ್ಬನನ್ನು ಕೇಳಿದ ಸ್ವಾಮಿನಾಥನ್.

"ಯಾವುದು? ಆ ನೀತಿಪ್ರಶ್ನೆಯೇನೋ?..... ಮೇಷ್ಟರು ಆ ಹೊತ್ತು ಕ್ಲಾಸಿನಲ್ಲಿ ಹೇಳಿದ್ದು ಜ್ಞಾಪಕವಿಲ್ಲವೆ? 'ಬಂಗಾರದ ಆಸೆಯಿಂದ ಬ್ರಾಹ್ಮಣ ಜೀವ ಕಳೆದುಕೊಂಡ' ಅಂತ?"

"ಬಂಗಾರವಲ್ಲಿತ್ತೋ ಅಲ್ಲಿ? ಬಂಗಾರದ ಬಳಿ ಅಲ್ಲವೇನೋ? ಅದಿರಲಿ. ಎಷ್ಟು ಬರೆದಿದ್ದೀಯ?"

"ಒಂದು ಪೇಜು" ಎಂದ ಆ ಸ್ನೇಹಿತ.

ಸ್ವಾಮಿನಾಥನಿಗೆ ಇದು ಹಿತವಾಗಲಿಲ್ಲ. ತಾನು ಒಂದೇ ಸಾಲು ಬರೆದಿದ್ದಾನೆ. "ಏನು? ಒಂದು ಪೇಜ್? ಅಷ್ಟೊಂದು ಬರೀಬಾರದಾಗಿತ್ತು."

ಸ್ವಲ್ಪ ಹೊತ್ತಾದ ಮೇಲೆ ರಾಜಂ, ಶಂಕರ್ ಇಬ್ಬರೂ ಸಿಕ್ಕಿದರು.

"ಏನ್ರೋ, ಹೇಗಿತ್ರೋ ಪೇಪರು?" ಎಂದ ಸ್ವಾಮಿ.

"ನಿನಗೆ ಹೇಗಿತ್ತು?" ಶಂಕರ ಪ್ರತಿ ಪ್ರಶ್ನೆ ಹಾಕಿದ.

"ಪರವಾ ಇಲ್ಲ."

"ನನಗೆ ತಮಿಳಿನದೊಂದೇ ಭಯ ಇತ್ತು. ಈಗ ಗೆದ್ದೆ. ಪಾಸು ಮಾಡೋಷ್ಟು ನಂಬರು ಬರುತ್ತೆ" ಎಂದ ರಾಜಂ.

"ಉಹೂಹೂ. ಆ ಮಾತೆಲ್ಲ ಕಟ್ಟಿಡಮ್ಮ. ಗಿಟ್ಟಿಸದೆ ಬಿಡ್ತೀಯಾ ಒಂದು ರ್‍ಯಾಂಕ್‌ನ?" ಎಂದು ಶಂಕರ ಸೇರಿಸಿದ.



"ಇಲ್ಲಿ ನೋಡ್ರೋ, ಕೆಲವು ಮಂಕಾಗ್ರೇಸರ ಚಕ್ರವರ್ತಿಗಳು ಆ ನೀತಿ ಪ್ರಶ್ನೆಗೆ ಒಂದು ಪೇಜು ಬರೆದಿದ್ದಾರಂತೆ" ಎಂದ ಸ್ವಾಮಿ.

"ನಾನು ಮುಕ್ಕಾಲೇ ಪೇಜು ಬರೆದೆನಪ್ಪ" ರಾಜಂ ಹೇಳಿದ.

"ನಾನು ಅರ್ಧ ಪೇಜಿಗಿಂತ ಸ್ವಲ್ಪ ಜಾಸ್ತಿ ಬರೆದೆ" ಎಂದ ಶಂಕರ. ಈ ವಿಷಯಗಳಲ್ಲೆಲ್ಲ ಶಂಕರನ ಮಾತಿನ ಮೇಲೆ ಅಪೀಲೇ ಇಲ್ಲ.

"ನಾನೂ ಅಷ್ಟೇ ಬರೆದೆ ಅಂತ ಇಟ್ಕೊ. ಹತ್ತಿರ ಹತ್ತಿರ ಅರ್ಧ ಪೇಜೇ ಆಯಿತು" ಎಂದು ಸ್ವಾಮಿನಾಥ ಹೇಳಿದ. ತನ್ನ ಆತ್ಮಸಮಾಧಾನಕ್ಕಾಗಿ ಸುಳ್ಳು ಹೇಳಬೇಕಾಗಿ ಬಂತು. ಆ ಕ್ಷಣದಲ್ಲಿ ಅದೇ ನಿಜವೆಂದೂ ನಂಬಿಬಿಟ್ಟ.

"ಅದು ಸರಿ ಕಣ್ರೊ, ನಾಳೆಯಿಂದ ಸ್ಕೂಲಿಲ್ಲ ಅನ್ನೋದು ಮರೆತು ಬಿಟ್ರೇನ್ರೋ?"

"ಮರೆತೇ ಹೋಗಿತ್ತಯ್ಯಾ ನನಗೆ" ಎಂದ ರಾಜಂ.

"ಹಾಗಾದರೆ ರಜಾದಲ್ಲಿ ಏನು ಮಾಡೋದು?" ಎಂದು ಯಾರೋ ಕೇಳಿದರು.

"ನಾನಂತೂ ನನ್ನ ಪುಸ್ತಕಾನೆಲ್ಲ ನೀರೊಲೇಗೆ ಹಾಕಿ ನೀರು ಕಾಸಿ ಸ್ನಾನ ಮಾಡಿಬಿಡ್ತೀನಪ್ಪ" ಎಂದ ಸ್ವಾಮಿನಾಥನ್.

ಶಂಕರ ಹೇಳಿದ : "ನಮ್ಮ ತಂದೆ ರಜದಲ್ಲಿ ನಾನು ಓದೋಕ್ಕೆ ಅಂತ ಆಲೀಬಾಬಾ, ಸಿಂದ್‌ಬಾದ್ ನಾವಿಕ ಮೊದಲಾದ ಪುಸ್ತಕ ತಂದಿದ್ದಾರಪ್ಪ, ಅದೆಲ್ಲ ಓದ್ತೀನಿ."

ಆ ವೇಳೆಗೆ ಗೊಣಗಾಡುತ್ತ ಕೈಕೈ ಹಿಸುಕಿಕೊಂಡು ಮಣಿ ಬಂದ. "ಟೈಂ ಏನೇನೂ ಸಾಲದು, ಕೊನೇ ಪ್ರಶ್ನೆಗೆ ಹೇಗೆ ತಯಾರಾಗಿ ಹೋಗಿದ್ದೆ ಅಂತೀಯ?" ಎಂದು ಒದ್ದಾಡಿದ.

ಎಲ್ಲಿಂದಲೋ ಬಟಾಣಿ ಪ್ರತ್ಯಕ್ಷನಾದ. ಅವನ ಎಡ ಕೆನ್ನೆಯ ಮೇಲೆ ಶಾಯಿಪಟ್ಟೆ. "ಏನೋ ಶಂಕರ, ಫಸ್ಟ್‌ಕ್ಲಾಸ್ ತಾನೆ?" ಎಂದು ಕೇಕೆ ಹಾಕಿದ.

"ಇಲ್ಲಾಪ್ಪ. ಮೂವತ್ತೈದು ಬಂದರೆ ಹೆಚ್ಚು."

"ಕುನ್ನಿಮರಿ, ಸುಳ್ಳು ಯಾಕೋ ಬಗುಳ್ತೀ? ನಿನಗೆ ಫಸ್ಟ್‌ಕ್ಲಾಸ್ ಬಂದರೆ ನಿನ್ನ ಈ ಜುಟ್ಟನ್ನ ಕತ್ತರಿಸಿ ಹಾಕಿಬಿಡಬಹುದೋ?" ಎಂದ ಮಣಿ.

ಹದಿನೈದು ನಿಮಿಷವಾದ ಮೇಲೆ ಇನ್ನೊಂದು ಗಂಟೆ ಹೊಡೆಯಿತು. ಸ್ಕೂಲಿನ ಹುಡುಗರೆಲ್ಲ ಹಾಲ್‌ನೊಳಗೆ ಸೇರಿದರು. ಎಲ್ಲರ ಮುಖದಲ್ಲೂ ಸಂತೋಷ ಹೊಳೆಯುತ್ತಿತ್ತು; ಪ್ರತಿ ಮಾತಿನಲ್ಲೂ ಮೈತ್ರಿ ತುಂಬಿತ್ತು. ಮೇಷ್ಟರುಗಳು ಕೂಡ ಒಳ್ಳೆಯ ಮಾತಾಡಲು ತೊಡಗಿದ್ದರು. ಮಣಿಯನ್ನು ಕಂಡಾಗ ಎಬನೀಜರ್, "ಏನೋ ಧಾಂಡಿಗ, ರಜಾನೆಲ್ಲ ಹೇಗೆ ಪೋಲು ಮಾಡ್ತೀಯೋ?" ಎಂದು ಪ್ರೀತಿಯಿಂದ ವಿಚಾರಿಸಿದರು.

"ಸ್ಕೂಲು ತೆರೆಯೋವರೆಗೂ ನಿದ್ದೆ ಮಾಡ್ತೀನಿ ಸಾರ್" ಎಂದು ಮಣಿ ಹೇಳಿ ತನ್ನ ಸ್ನೇಹಿತರ ಕಡೆ ತಿರುಗಿ ಕಣ್ಣು ಮಿಟುಕಿಸಿದ.

"ತಿರುಗಿ ಬರೋ ವೇಳೆಗೇನಾದರೂ ನಿನ್ನ ತಲೆ ಫಲವಾಗಿರುತ್ತೋ?"

"ಶಂಕರನ ತಲೆ ಕಡಿದು ನನಗೆ ಕೊಟ್ಟರೆ ಅದು ಸಾಧ್ಯ, ಇಲ್ಲದೆ ಹೋದರೆ ಹೇಗೆ

ಸಾಧ್ಯ, ಸಾರ್?" ಇದನ್ನು ಕೇಳಿ ಹುಡುಗರ ಗುಂಪಿನಲ್ಲಿ ನಗುವಿನ ಬಿರುಗಾಳಿಯೇ ಬೀಸಿತು. ಯಾರು ಏನೇ ಹೇಳಲಿ, ನಗುವಿನ ಹೊಳೆ ಹರಿಯುತ್ತಿತ್ತು; ಹುಡುಗರ ಖುಷಿ ಹಾಗಿತ್ತು. ಡ್ರಾಯಿಂಗ್ ಮೇಷ್ಟರು ಆನಂದದಿಂದ ಮೈಮರೆತು, "ಏನ್ರೋ ನಿಮ್ಮ ಕಾಲುಬೆರಳು ಎಷ್ಟು ಉದ್ದಾನ್ರೋ?" ಎಂದು ಹೇಳುತ್ತ ಮುಂದಿನ ಸಾಲಿನಲ್ಲಿ ನಿಂತಿದ್ದವರ ಕಾಲುಬೆರಳ ಮೇಲೆ ತಮ್ಮ ಉದ್ದನೆ ಬೆತ್ತವನ್ನು ಬಲವಾಗಿ ಆಡಿಸುತ್ತಿದ್ದರು. ಹೆಡ್‌ಮೇಷ್ಟರು ವೇದಿಕೆ ಹತ್ತಿದರು. ಗುಜುಗುಜು ಅಡಗಲು, ಒಂದು ನಿಮಿಷ ತಡೆದು ಆಮೇಲೊಂದು ಭಾಷಣ ಮಾಡಿದರು. "ಸ್ಕೂಲು ಹತ್ತೊಂಬತ್ತನೆಯ ಜೂನ್‌ವರೆಗೆ ಮುಚ್ಚಿದ್ದು ಇಪ್ಪತ್ತನೆಯ ತಾರೀಖು ತೆರೆಯುತ್ತದೆ. ಹುಡುಗರು ರಜಾಕಾಲವನ್ನು ವ್ಯರ್ಥವಾಗಿ ಕಳೆಯಬಾರದು. ತುಂಬ ಕತೆ ಪುಸ್ತಕಗಳನ್ನೋದಬೇಕು. ಅಲ್ಲದೆ ಮುಂದಿನ ತರಗತಿಯ ಪಾಠಗಳನ್ನು ಆಗಾಗ ನೋಡಿಕೊಳ್ಳಬೇಕು. ಎಲ್ಲರೂ ತೇರ್ಗಡೆ ಹೊಂದುವರೆಂದೇ ನನ್ನ ಆಶಯ. ಇನ್ನೊಂದು ನಿಮಿಷವಾದ ಮೇಲೆ ಪ್ರಾರ್ಥನೆ, ಅನಂತರ ಹುಡುಗರು ತಮ್ಮ ತಮ್ಮ ಮನೆಗಳಿಗೆ ಹೋಗಬಹುದು" ಅಂತ ಏನೇನೋ ಹೇಳಿದರು.

ಪ್ರಾರ್ಥನೆ ಮುಗಿಯಿತು. ಅದುಮಿಟ್ಟಿದ್ದ ಬಿರುಗಾಳಿ ಕಟ್ಟುಗಳನ್ನೆಲ್ಲ ಭೇದಿಸಿ ತಾನೇತಾನಾಯಿತು. ಶಕ್ತಿಯನ್ನೆಲ್ಲ ಬಿಟ್ಟು ಅರಚುತ್ತ ಒಂದೇ ಕೂಗಿನಲ್ಲಿ ತಮ್ಮ ಸೌಖ್ಯವನ್ನೆಲ್ಲ ಹೊರಸೂಸುತ್ತ ಸೇರಿದ್ದ ಸಂದಣಿಯವರೆಲ್ಲ ಒಟ್ಟಾಗಿ ಹಾಲ್‌ನಿಂದ ಹೊರಬಿದ್ದರು. ಈ ದೊಂಬಿ, ಈ ಅವಾಂತರದಲ್ಲೆಲ್ಲ ಸ್ವಾಮಿ ಮಣಿಯನ್ನೇ ಕಚ್ಚಿಕೊಂಡಿದ್ದ. ಏಕೆಂದರೆ ಕೊನೆಯ ದಿನ ಶತ್ರುಗಳು ಒಬ್ಬರನ್ನೊಬ್ಬರು ತಿವಿಯುತ್ತಾರೆ ಎಂದು ಸ್ಕೂಲಿನಲ್ಲಿ ಒಂದು ನಂಬಿಕೆಯಿತ್ತು. ತನಗೆ ನೆನಪಿದ್ದಂತೆ ಸ್ವಾಮಿಗೆ ಶತ್ರುಗಳಾರೂ ಇರಲಿಲ್ಲ. ಆದರೆ ಯಾರಿಗೆ ಗೊತ್ತು? ಪ್ರಪಂಚ ಕೆಟ್ಟದು.

ಮಣಿಗೆ ಬಹಳ ಸಂಭ್ರಮ. ಬಿಡುವೇ ಇಲ್ಲ. ಸ್ಕೂಲಿನ ಗೇಟಿನ ಪಕ್ಕದಲ್ಲಿ ನಿಂತು ಯಾರು ಬಂದರೂ ಅವರೆಲ್ಲರ ಕೈಯಿಂದಲೂ ಮಸಿಕುಡಿಕೆ, ಲೇಖಣಿ ಕಿತ್ತುಕೊಂಡು ಅವನ್ನು ಚೂರುಚೂರು ಮಾಡುತ್ತಿದ್ದ. ಅವನ ಸುತ್ತಲೂ ಹುಡುಗರು ಗುಂಪುಕಟ್ಟಿಕೊಂಡು ಅವನು ಮಾಡುವ ಕೆಲಸಕ್ಕೆ ತಮ್ಮ ಮೆಚ್ಚಿಗೆ ತೋರಿಸುತ್ತಿದ್ದರು. ಒಂದೊಂದು ಮಸಿಕುಡಿಕೆ ಒಡೆದು ಛಿದ್ರವಾಗುವಾಗಲೂ ಹುಡುಗರ ಕೂಗುಗಳು ಆಕಾಶವನ್ನು ಭೇದಿಸುತ್ತಿದ್ದುವು. ಒಬ್ಬಿಬ್ಬರು ಹುಡುಗರು ಗೊಣಗಾಡಿದರು. ಮಣಿ ಸುಮ್ಮನಾದಾನೆಯೇ? ಅವರ ಕೈಯಿಂದ ಮಸಿಕುಡಿಕೆ ಕಿತ್ತುಕೊಂಡವನೇ, ಅದನ್ನು ಅವರ ತಲೆಯ ಮೇಲೆ ಮಗುಚಿ ಮಹಾ ಮಸಿಯಾಭಿಷೇಕ ಮಾಡಿಸಿದ. ಮಣಿಗೆ ಈ ಕೆಲಸದಲ್ಲಿ ಸಹಾಯ ಮಾಡಲು ಕಿರಿಯರದೊಂದು ಸಣ್ಣ ತಂಡವಿತ್ತು. ಅವರಲ್ಲಿ ಸ್ವಾಮಿನಾಥನೇ ಅಗ್ರಗಣ್ಯ. ವಿಶೇಷ ಸಂತೋಷದಿಂದ ಸ್ವಾಮಿ ಮಸಿಕುಡಿಕೆಯಲ್ಲಿದ್ದ ಮಸಿಯನ್ನು ತನ್ನ ತಲೆಯ ಮೇಲೆಯೇ ಸುರಿದುಕೊಂಡು, ತೊಟ್ಟಿಕ್ಕುತ್ತಿದ್ದ ಮಸಿಯನ್ನು ಎಡ ಅಂಗೈಯಲ್ಲಿ ಹಿಡಿದು ಬಲಗೈ ಬೆರಳನ್ನು ಅದ್ದಿ ಕಣ್ಣಿನ ಸುತ್ತ ಕರಿಯ ಪಟ್ಟೆಗಳನ್ನು ಬಳಿದುಕೊಂಡ.

ರಸ್ತೆಯಲ್ಲೊಬ್ಬ ಪೊಲೀಸಿನವನು ಹಾದುಹೋದ. "ಅಯ್ಯಾ ಪೊಲೀಸ್ ಈ

ಚಿಳ್ಳೆಗಳನ್ನೆಲ್ಲ ಅರೆಸ್ಟ್ ಮಾಡಯ್ಯಾ" ಎಂದು ಕೂಗಿದ ಮಣಿ. ಹುಡುಗರೆಲ್ಲ ಹೋ ಎಂದು ಕೂಗಿಬಿಟ್ಟರು. ಇನ್ನೊಂದಷ್ಟು ಮಸಿಕುಡಿಕೆಗಳು ಒಡೆದುವು. ಇನ್ನು ಕೆಲವು ಲೇಖಣಿಗಳು ಮುರಿದುವು. ಈ ಅಲ್ಲೋಲಕಲ್ಲೋಲದ ನಡುವೆ ಮಣಿ ತುದಿಗಂಟಲಲ್ಲಿ "ಎಲ್ಲಿ, ಶಿಂಗಾರಂ ಪೇಟ್ಕ ಯಾರು ತರ್‍ತೀರಿ, ನೀಲಿ ಬಣ್ಣ ಹಾಕೋಣ ಅದಕ್ಕೆ" ಎಂದು ಕೂಗಿದ.

ಶಿಂಗಾರಂ ಸ್ಕೂಲು ಜವಾನ. ಈ ಸ್ವಾತಂತ್ರ್ಯದ ಸಂಭ್ರಮ ಅವನೊಬ್ಬನಿಗೆ ತಟ್ಟಿಯೇ ಇರಲಿಲ್ಲ. ತನ್ನ ಪೇಟಕ್ಕೆ ಬಣ್ಣ ಹಾಕುತ್ತಾರೆ ಎಂಬ ಮಾತು ಅವನ ಕಿವಿಗೆ ಬಿತ್ತೋ ಇಲ್ಲವೋ, ದೊಡ್ಡದೊಂದು ಗಳು ತೆಗೆದುಕೊಂಡು ಬಂದು ಗುಂಪಿನ ಮಧ್ಯೆ ನುಗ್ಗಿದ್ದೇ ಈ ರಂಗೀಲ ರಾಜರನ್ನೆಲ್ಲ ಚದುರಿಸಿಬಿಟ್ಟ.

# ಕೋಚ್‌ಮ್ಯಾನ್ ಮಗ

ಸ್ವಾಮಿನಾಥನ್‌ಗೆ ಎರಡು ಬಗೆಯ ಗೆಳೆಯರು. ಸೋಮು, ಬಟಾಣಿ, ಶಂಕರ ಇವರದು ಒಂದು ಗುಂಪು. ಸ್ವಾಮಿಗೂ ಇವರಿಗೂ ಶಾಲೆಯ ಸ್ನೇಹವೆಷ್ಟೋ ಅಷ್ಟೆ. ಶಾಲೆ ಮುಚ್ಚಿತೆಂದರೆ ಇವರೊಡನೆ ಬೆರೆಯುವುದೂ ನಿಂತಂತೆ. ಇನ್ನೊಂದು ಗುಂಪು ನಿಜವಾದ ಆತ್ಮೀಯರದು. ರಾಜಂ, ಮಣಿ ಇದಕ್ಕೆ ಸೇರಿದವರು. ಈಗ ಸ್ಕೂಲಿಲ್ಲದುದರಿಂದ ಕಾಲದ ಬಂಧನಕ್ಕೆ ಅವರು ಮಣಿಯ ಬೇಕಾದ್ದಿರಲಿಲ್ಲ. ಯಾವಾಗ ನೋಡಲಿ ಮೂವರೂ ಒಟ್ಟಿಗೇ. ರಜವನ್ನು ಮಜವಾಗಿ ಕಳೆಯಬೇಕೆಂದು ನೂರಾರು ಯೋಚನೆಗಳನ್ನು ಮಾಡಿಕೊಂಡರು.

ಒಂದು ಸೈಕಲ್‌ಚಕ್ರ ಸಂಪಾದಿಸಬೇಕೆಂಬುದೇ ಈಗ ಸ್ವಾಮಿನಾಥನ ಗುರಿಯಾಗಿತ್ತು. ಹಗಲಿರುಳು ಅದೇ ಧ್ಯಾನ, ಅದೇ ಕನಸು. ಟೈರೂ ಅಡ್ಡ ತಂತಿಯೂ ಇಲ್ಲದಂಥ ಮಾಜಿ ಸೈಕಲ್ ಚಕ್ರದ ಪ್ರತಿಮೆಯನ್ನು ಮನಸ್ಸಿನಲ್ಲೇ ಸೃಷ್ಟಿಸಿಕೊಂಡು ತಣಿಯುತ್ತಿದ್ದ ಅವನು. ಒಂದು ಕೋಲು ತಾಕಿದರೆ ಸಾಕು ರೊಯ್ ಅಂತ ಹೇಗೆ ಹಾರುತ್ತೆ! ಸಣ್ಣ ಕಲ್ಲಿತ್ತೂ ಅಂದರೆ ಏನು ಚುರುಕಿನಿಂದ ಚಿಮ್ಮುತ್ತೆ? ಬೀದಿ ತಿರುಗುವಾಗ ಏನು ಜಂಬದಿಂದ ಒಂದು ಪಕ್ಕಕ್ಕೆ ವಾಲುತ್ತೆ? ಜೋರಾಗಿ ಓಡುವಾಗ ಜೊಯ್ ಅಂತ ಶಬ್ದಮಾಡುತ್ತಲ್ಲ, ಅದಕ್ಕಿಂತ ಇಂಪಾದ ಸಂಗೀತ ಮತ್ತೊಂದುಂಟೆ? ಆ ಸದ್ದು ಕಿವಿಗೆ ಬಿದ್ದರೆ ಸಾಕು, ಒಂದು ಮೈಲಿ ದೂರದಿಂದಲೇ ಎಲ್ಲರಿಗೂ ತಿಳಿಯಬೇಕು, ತಾನು ಬರುತ್ತಾ ಇದ್ದೇನೆ ಅನ್ನುವುದು. ಒಂದೊಂದು ಸಲವಂತೂ ಈ ಗಾಲಿಯ ಯೋಚನೆಯನ್ನೇ ಮಾಡುತ್ತ ಮಾಡುತ್ತ ರಾತ್ರಿ ಹನ್ನೊಂದರವರೆಗೂ ಎದ್ದಿರುತ್ತಿದ್ದ! ತಮ್ಮ ತಂದೆ ಸ್ನೇಹಿತರಿಂದ ಹಿಡಿದು ಬೀದಿ ಗುಡಿಸುತ್ತಿದ್ದ ಜಲಗಾರನವರೆಗೆ ಎಲ್ಲರನ್ನೂ ಅಂಗಲಾಚಿ ಬೇಡಿಕೊಳ್ಳುತ್ತಿದ್ದ, ಒಂದು ಸೈಕಲ್ ಗಾಲಿ ಕೊಡಿ ಅಂತ. ಕಣ್ಣಿಗೆ ಯಾವ ಬೈಸಿಕಲ್ ಬೀಳಲಿ, ಅದರ ಚಕ್ರ ಬೇರೆಯಾಗಿ ತನ್ನ ಕೈಗೆ ಬಂದುಬಿಟ್ಟಂತೆ ಭಾಸವಾಗುವುದು. ಒಂದು ರಾತ್ರಿ ಅವನಿಗೊಂದು ಕನಸು ಬಿತ್ತು. ಗಾಲಿ ಮೇಲೆ ಕುಳಿತುಕೊಂಡು ನಲ್ಲಪ್ಪನ ಮಾವಿನ ತೋಪಿನ ಹತ್ತಿರ ಸರಯೂ ನದಿಯನ್ನು ದಾಟುತ್ತಿದ್ದಾನೆ. ನದಿಯ ತಳದ ಮರಳು ಉಕ್ಕಿನ ಗಾಲಿಗೆ ಸಿಕ್ಕಿ ಕರಕರ ಎನ್ನುತ್ತಿದೆ. ಅರರೆ! ಆ ಕಡೆ ದಡ ಸೇರುವ ವೇಳೆಗೆ ಗಾಲಿ ಒಂದು ತರಹದ ಕುದುರೆ ಆಗಿಬಿಟ್ಟಿದೆ. ಕನಸು ಬಹಳ ಸ್ಪಷ್ಟವಾಗಿತ್ತು. ಸಂದೇಹ ಪಟ್ಟುಕೊಳ್ಳುವುದಕ್ಕೆ ಆಸ್ಪದವೇ ಇಲ್ಲ........ ಆ ಕಡೆ ದಡದಿಂದ ಕುದುರೆ ತನ್ನನ್ನೂ ಹೊತ್ತುಕೊಂಡು ಮನೆಗೆ

ಒಂದೇ ನೆಗತದಲ್ಲಿ ವಾಪಸ್ಸು ಬಂತು, ನುಗ್ಗಿತು ನೇರವಾಗಿ ಅಡಿಗೆ ಮನೆಗೆ. ಅಲ್ಲಿಂದ ತನ್ನ ಹಾಸಿಗೆ ಹತ್ತಿರ ಕರೆದುಕೊಂಡು ಹೋಯಿತು. ಆಮೇಲೆ ತಾನೂ ಅಲ್ಲೇ ಮಲಗಿತು. ತೀರ ವಿಲಕ್ಷಣವಾದ ಕನಸು. ಆದರೂ ಚಕ್ರರಹಿತವಾದ ಬೆಳಿಗ್ಗೆಯನ್ನು ಕಾಣುವ ಬದಲು ಈ ಕನಸನ್ನೇ ಕಾಣುತ್ತ ಇದ್ದು ಬಿಡೋಣವೆನ್ನಿಸಿತು.

ಸ್ವಾಮಿಗೆ ಒಬ್ಬ ಕೋಚ್ ಗಾಡಿಯವನ ಪರಿಚಯ ಸ್ವಲ್ಪ ಸ್ವಲ್ಪ ಇತ್ತು. ಬೇರೆ ಏನೂ ದಿಕ್ಕು ಕಾಣದೆ ತನ್ನ ದುಃಖವನ್ನೆಲ್ಲಾ ಅವನ ಕೈಯಲ್ಲಿ ತೋಡಿಕೊಂಡ. ಕೋಚ್‌ಮ್ಯಾನ್ ತುಂಬ ಕನಿಕರ ಪಟ್ಟುಕೊಂಡು, ಅಯ್ಯೋ ಪಾಪ ಎಂದ. ಗಾಲಿಯಿಲ್ಲದ ಬಾಳು ಬಾಳೇ ಅಲ್ಲ ಎಂದು ಅವನೂ ಒಪ್ಪಿಕೊಂಡ. "ಐದು ರೂಪಾಯಿ ಕೊಡು, ಐದೇ ಗಂಟೇಲಿ ನಿನಗೊಂದು ಗಾಲಿ ತಂದು ಕೊಡುತ್ತೇನೆ" ಎಂದ. ಸ್ವಾಮಿಯ ಹತ್ತಿರ ಅಷ್ಟೊಂದು ದುಡ್ಡು ಎಲ್ಲಿಂದ ಬರಬೇಕು? ತಾನೂ ತನ್ನ ತಂದೆಯಷ್ಟು ಎತ್ತರವಾದಾಗ ತನ್ನ ಹತ್ತಿರವೂ ಐದು ರೂಪಾಯಿ ಇರುತ್ತೆ ಅಂತ ಅವನ ಅಂದಾಜು; ಅಂದರೆ ನೋಡಿಕೊಳ್ಳೋಣ; ಇನ್ನೂ ಎಷ್ಟು ಕಾಲಕ್ಕೋ! ಹಾಗೆಂದು ಹೇಳಿದ ಅದನ್ನು ಕೇಳಿ ಕೋಚ್‌ನವನು ಐದು ರೂಪಾಯಿ ಸಂಪಾದಿಸುವ ಸುಲಭೋಪಾಯಗಳ ಮೇಲೆ ಒಂದು ಸಣ್ಣ ಉಪನ್ಯಾಸ ಮಾಡಿದ. ಸ್ವಾಮಿಯ ಮನಸ್ಸಿಗೂ ಅದು ಹಿಡಿಸಿತು. "ಮೊದಲೆತ್ತಿಕೊಳ್ಳುತ್ತ ಆರು ಕಾಸಿದ್ದರೆ ಸಾಕು; ಕೊಂಚ ಹೊತ್ತಿನಲ್ಲಿ ಅದನ್ನು ಆರಾಣೆ ಮಾಡಿ ಆಮೇಲೆ ಅದನ್ನು ಆರು ರೂಪಾಯಿ ಮಾಡುತ್ತೇನೆ" ಎಂದ ಆ ಕೋಚ್ ಮ್ಯಾನ್. ಆ ಆರು ರೂಪಾಯಲ್ಲಿ ಐದು ರೂಪಾಯಿ ಕೊಟ್ಟು ಒಂದು ಗಾಲಿ ತೆಗೆದುಕೊಳ್ಳಬಹುದು. ಮಿಕ್ಕ ಒಂದು ರೂಪಾಯನ್ನು ತೋರಿದ ಹಾಗೆ ಖರ್ಚು ಮಾಡಿಕೊಳ್ಳಬಹುದು.

"ಅಯ್ಯೋ, ಆ ಒಂದು ರೂಪಾಯಿ ನನಗೇಕೆ ಇನ್ನು? ನಿನಗೇ ಕೊಟ್ಟು ಬಿಡುತ್ತೇನೆ" ಎಂದ ಸ್ವಾಮಿ. ಸ್ವಾಮಿಯ ಮನಸ್ಸಿನಲ್ಲಿ ಒಂದೆರಡು ಶಂಕೆ ಮೂಡಲು ಆಸ್ಪದವಿದ್ದರೂ ಕೋಚ್‌ನವನ ವಾಗ್ಝರಿಯಲ್ಲಿ ಅವೆಲ್ಲವೂ ಕೊಚ್ಚಿಕೊಂಡು ಹೊರಟುಹೋದವು. ಸಣ್ಣ ನಾಣ್ಯಗಳನ್ನು ದೊಡ್ಡ ನಾಣ್ಯಗಳಾಗಿ ಪರಿವರ್ತಿಸಲು ಕೋಚ್‌ಮ್ಯಾನ್ ಅನುಸರಿಸುತ್ತಿದ್ದ ವಿಧಾನವನ್ನು ತಿಳಿಸಿದ. "ನಮ್ಮ ಮನೆಯಲ್ಲಿ ಪಂಚಲೋಹದಿಂದ ಮಾಡಿದ ಒಂದು ತಪ್ಪಲೆಯಿದೆ. ಅದರಲ್ಲಿ ತಾಮ್ರದ ನಾಣ್ಯಗಳನ್ನೂ ಒಂದು ಐನಾತಿ ಮೂಲಿಕೆಯನ್ನೂ ಇಡುತ್ತೇನೆ....... ನನ್ನ ಕಣ್ಣು ಕಿತ್ತು ಹಾಕಿ ಚರ್ಮ ಸುಲಿದು ಹಾಕಿದರೂ ಕೂಡ ಆ ಮೂಲಿಕೆಯ ಹೆಸರು ಹೇಳೋದಿಲ್ಲ ನಾನು..... ಈ ತಪ್ಪಲೆ, ಆ ಮೂಲಿಕೆ, ಆ ಕಾಸು ಎಲ್ಲವನ್ನೂ ಭೂಮಿ ಒಳಗೆ ಐದು ಮೊಳ ಆಳದ ಗುಂಡಿ ತೋಡಿ, ಒಳಗಿಟ್ಟು ಮಣ್ಣು ಮುಚ್ಚಿ ಅಮಾವಾಸ್ಯೆ ದಿನ ಮಧ್ಯ ರಾತ್ರಿಯಲ್ಲಿ ಒಬ್ಬಂಟಿಗನಾಗಿ ಹೋಗಿ ಆ ಜಾಗದ ಮೇಲೆ ಕೂತು ಯಾವುದೋ ಒಂದು ಮಂತ್ರ ಹೇಳಿದರೆ, ತಗೋ! – ಆ ಕಾಸೆಲ್ಲ ರೂಪಾಯಿ ಆಗಿಬಿಟ್ಟಿರುತ್ತೆ. ಈ ಕಾಸಿನಿಂದಲೇ ಬಂಗಾರದ ಸವರನ್ ಬೇಕಾದರೂ ಮಾಡಬಹುದು, ಆದರೆ ಅವಕ್ಕೇ ಬೇರೆ ತರಹದ ಮೂಲಿಕೆ ಬೇಕು. ಆ ಮೂಲಿಕೆ ತರಬೇಕಾದರೆ ಈ ತನಕ ಯಾವ ನರಪಿಳ್ಳೆಯೂ ಸುಳಿದಿಲದ ಕಾಡಿನಲ್ಲಿ ಇನ್ನೂರೈವತ್ತು

ಮ್ಯೆಲಿ ಬರಿಗಾಲಲ್ಲಿ ನಡೆದು ಹೋಗಬೇಕು. ಈಗೇಕೆ ಅಷ್ಟು ಫಜೀತಿ?"

"ಆರು ಕಾಸು ಹೇಗೆ ಸಂಪಾದಿಸೋದು? ನಿನಗೆ ಯಾವಾಗ ಕೊಡಬೇಕು? ಮತ್ತೆ ಯಾವಾಗ ಸಿಕ್ತೀಯ ನೀನು?" ಎಂದು ಸ್ವಾಮಿನಾಥನ್ ಕೇಳಿದ. "ಈ ಕ್ಷಣ ತಂದರೆ ಸರಿ; ಇಲ್ಲದೆ ಹೋದರೆ ನಮ್ಮ ಸಾಹೇಬರು ಎಲ್ಲಿಗೋ ಹೋಗ್ತಾರೆ, ಅವರ ಜತೇಲಿ ನಾನೂ ಹೋಗಬೇಕಾಗುತ್ತೆ. ತಿಂಗಳು ಗಟ್ಟಲೆ ವಾಪಸು ಬರೋದೇ ಇಲ್ಲ" ಎಂದು ಕೋಚ್‌ಮ್ಯಾನ್ ಉತ್ತರ ಕೊಟ್ಟ. "ಹಾಗಾದರೆ ಇನ್ನು ಆರು ಗಂಟೆ ಹೊತ್ತು ತಡಿಯಪ್ಪ, ಅಷ್ಟರಲ್ಲಿ ತಂದುಕೊಡುತ್ತೇನೆ" ಅಂತ ಬೇಡಿಕೊಂಡು ಸ್ವಾಮಿ ಬೇಗ ಬೇಗ ಮನೆಯ ಕಡೆ ಓಡಿಹೋದ.

ಮೊದಲು ಅಜ್ಜಿಯನ್ನು ಕೇಳಿದ. ತನ್ನ ಹತ್ತಿರ ಪುಡಿಗಾಸೂ ಇಲ್ಲವಲ್ಲಾ ಅಂತ ಅಜ್ಜಿ ಕಣ್ಣಲ್ಲಿ ನೀರು ಹಾಕಿಕೊಂಡಳು. ರುಜುವಾತಿಗಾಗಿ ಮರದ ಪೆಟ್ಟಿಗೆಯನ್ನು ತಲೆಕೆಳಗು ಮಾಡಿ ತೋರಿಸಿದಳು.

"ನಿನ್ನ ದಿಂಬಿನಲ್ಲಿ ದುಡ್ಡು ಸೇರಿಸಿಟ್ಟುಕೊಂಡಿರ್ತೀಯಲ್ಲ ಅದನ್ನು ಕೊಡು."

"ಇಲ್ಲ ಮಗೂ, ನಾನೆಂದೂ ದಿಂಬಿನಲ್ಲಿ ದುಡ್ಡಿಟ್ಟುಕೊಂಡಿದ್ದೇ ಇಲ್ಲ. ನೀನೇ ನೋಡಿಕೋ, ಬೇಕಾದರೆ."

ಹಾಸಿಗೆ ಬಿಟ್ಟು ಹೊರಡೆಂದು ಅಜ್ಜಿಗೆ ಆಜ್ಞೆ ಮಾಡಿ, ಸ್ವಾಮಿ ದಿಂಬು, ಜಮಖಾನ ಎಲ್ಲವನ್ನೂ ಚೆನ್ನಾಗಿ ಜಪ್ತಿ ಮಾಡಿದ.

"ನಿನಗೇಕೆ ದುಡ್ಡು ಈವಾಗ?" ಎಂದು ಅಜ್ಜಿ ಕೇಳಿದಳು.

"ನಿನ್ನ ಹತ್ತಿರ ದುಡ್ಡು ಇದ್ದರೆ ಕೊಟ್ಟುಬಿಟ್ಟು ಮಾತಾಡು. ಇಲ್ಲದೆ ಹೋದರೆ ಕೆಲಸಕ್ಕೆ ಬಾರದ ಪ್ರಶ್ನೆ ಯಾಕೆ ಹಾಕ್ತೀಯಾ?"

ಅಜ್ಜಿ ಅಮ್ಮನನ್ನು ಕರೆದು ಹೇಳಿದಳು : "ನಿನ್ನ ಹತ್ತಿರ ದುಡ್ಡಿದ್ದರೆ ಈ ಹುಡುಗನಿಗೊಂದು ಆರು ಕಾಸು ಕೊಡಮ್ಮ" ಅಂತ. ಆದರೆ ಸ್ವಾಮಿನಾಥನಿಗೆ ಉಪಕಾರಮಾಡಲು ಯಾರೂ ಸಿದ್ಧರಾಗಿರಲಿಲ್ಲ. ಅಪ್ಪನನ್ನು ಕೇಳಿದ. ಒಂದೇ ಕ್ಷಣದಲ್ಲಿ ಬೈದು ಕಳಿಸಿಬಿಟ್ಟರು. "ಕಕ್ಷಿಗಾರರಿಂದ ತೂಗೊಂಡ ದುಡ್ಡೆಲ್ಲ ಅಪ್ಪ ಏನು ಮಾಡ್ತಾರೋ" ಎಂದು ಸ್ವಾಮಿ ಗೊಣಗಿಕೊಂಡ.

ಕೊನೆಯ ಉಪಾಯ. ಒಂದು ಕೈ ನೋಡೇ ಬಿಡೋಣ ಎಂದುಕೊಂಡು ತಂದೆಯ ಬೀರು ಹತ್ತಿರ ಹೋದ. ಅಂಬೆಗಾಲಿಟ್ಟುಕೊಂಡು ಕೆನ್ನೆಯನ್ನು ತಣ್ಣಗಿದ್ದ ಆ ಸಿಮೆಂಟು ನೆಲಕ್ಕೆ ತಗಲಿಸಿ ಬೀರುವಿನ ಕೆಳಗೆ ದೃಷ್ಟಿ ಓಡಿಸಿದ. ಬೀರುವಿನಿಂದ ಒಂದೆರಡು ನಾಣ್ಯ ಕೆಳಗೆ ಉದುರಿರುತ್ತೆ ಅಂತ ಅವನಿಗೊಂದು ಭಾವನೆ. ಏನೂ ಕಾಣಿಸಲಿಲ್ಲ. ಕೈಚಾಚಿ ತಡಕಾಡಿದ. ಒಂದು ಹಳೆ ಕವರು ಹೊರತು ಬೇರೇನೂ ಸಿಗಲಿಲ್ಲ. ಅದರಲ್ಲಿ ಸ್ವಲ್ಪ ಧೂಳು, ಒಂದು ಸತ್ತ ಜಿರಳೆ. ಕಾಸೂ ಇಲ್ಲ, ಗೀಸೂ ಇಲ್ಲ.

ಇನ್ನೊಂದು ನಂಬಿಕೆಯಿತ್ತು ಅವನಿಗೆ. ದೇವರಲ್ಲಿ ಸಾಕಾದಷ್ಟು ಭಕ್ತಿ ಇದ್ದರೆ ಯಾವ ಮಾಯ, ಯಾವ ಮ್ಯಾಜಿಕ್ ಬೇಕಾದರೂ ಮಾಡಬಹುದು ಅಂತ. ಯಾರು

ದೇವರನ್ನು ಪ್ರಾರ್ಥಿಸುತ್ತಾರೋ ಅವರಿಗೆ ದೇವರು ತಪ್ಪದೆ ಸಹಾಯ ಮಾಡುತ್ತಾನೆ ಎಂದು ಎಬನೀಜರ್ ಕ್ಲಾಸಿನಲ್ಲಿ ಹೇಳಿದ್ದು ಜ್ಞಾಪಕಕ್ಕೆ ಬಂತು.

ಒಂದು ಸಣ್ಣ ರಟ್ಟಿನ ಡಬ್ಬಿ ತೆಗೆದುಕೊಂಡ. ಅದರಲ್ಲಿ ಸ್ವಲ್ಪ ಮರಳು ತುಂಬಿದ. ಅದರ ಮೇಲೆ ಗುಂಡಗಿದ್ದ ಎರಡು ನುರುಜುಗಲ್ಲಿಟ್ಟ. ಅದರ ಮೇಲೆ ಸ್ವಲ್ಪ ಚಿಗುರೆಲೆ ಇಟ್ಟ. ಇದಿಷ್ಟನ್ನೂ ತೆಗೆದುಕೊಂಡು ಹೋಗಿ ದೇವರ ಮನೆಯ ಮೂಲೆಯಲ್ಲಿಟ್ಟ. ದೇವರ ಮನೆ ತುಂಬ ಇಕ್ಕಟ್ಟು. ಗೋಡೆಯ ಮೇಲೆ ಹತ್ತು ಹನ್ನೆರಡು ದೇವರ ಪಟ ತೂಗುಹಾಕಿತ್ತು. ಸಣ್ಣದೊಂದು ಮಂದಾಸನದ ಮೇಲೆ ತಾಮ್ರ, ಹಿತ್ತಾಳೆ, ಕಂಚು, ಬೆಳ್ಳಿ ಇವುಗಳ ವಿಗ್ರಹಗಳಿದ್ದವು. ಯಾವಾಗಲೂ ಅಲ್ಲಿ ಹೂವು, ಕರ್ಪೂರ, ಊದುಕಡ್ಡಿ ಇವುಗಳ ವಾಸನೆಯೇ.

ಸ್ವಾಮಿನಾಥ ಬಹಳ ಭಕ್ತಿಯಿಂದ ಮಂದಾಸನದ ದೇವರ ಮುಂದೆ ನಿಂತುಕೊಂಡು ರಟ್ಟಿನ ಡಬ್ಬಿಯಲ್ಲಿ ಏನೇನಿದೆ ಎಂಬುದನ್ನು ದೇವರಿಗೆ ನಿವೇದಿಸಿಕೊಂಡ. ತನಗೆ ದುಡ್ಡು ಏತಕ್ಕೆ ಬೇಕೆಂಬುದನ್ನು ವಿವರಿಸಿ, ಆ ನುರುಜುಗಲ್ಲು ಎರಡನ್ನೂ ಎರಡು ಮೂರು ಕಾಸಾಗಿ ಮಾರ್ಪಡಿಸಪ್ಪಾ ಎಂದು ಪ್ರಾರ್ಥಿಸಿಕೊಂಡ. ದೇವರು ತನಗೆ ಈ ವರ ದಯಪಾಲಿಸಿದರೆ ತಾನು ಹೆಬ್ಬೆರಳು ಚೀಪುವುದು ಬಿಟ್ಟುಬಿಡುತ್ತೇನೆಂದು ಮಾತು ಕೊಟ್ಟ. ಬಿಗಿಯಾಗಿ ಕಣ್ಣು ಮುಚ್ಚಿಕೊಂಡು, "ಸ್ವಾಮಿ, ದೇವರೆ, ಶ್ರೀರಾಮಚಂದ್ರ, ರಾವಣನಿಗೆ ಹತ್ತು ತಲೆಗಳಿದ್ದರೂ ಅವನನ್ನು ನೀನು ಕೊಂದಿದ್ದೀಯ; ಅಂಥಾವನು ನನಗೆ ಆರು ಕಾಸು ಕೊಡಲಾರೆಯಾ?.... ಈಗ ನಿನಗೆ ಆರು ಕಾಸು ಕೊಟ್ಟರೆ, ನನಗೆ ಚಕ್ರ ಯಾವಾಗ ತಂದುಕೊಡ್ತೀಯ? ಹೋಗಲಿ, ಆ ಮೂಲಿಕೆ ಯಾವುದು ಅನ್ನೋದಾದರೂ ಹೇಳು...... ಮಣಿ, ಚಕ್ರ ಸಂಪಾದಿಸೋಕೆ ಸುಲಭವಾದ ದಾರಿ ಏನು ಗೊತ್ತೇನೊ?...... ರಾಮ, ರಾಮಾ, ಆರು ಕಾಸು ಕೊಡಪ್ಪ, ಒಂದು ವರ್ಷ ಬೆರಳು ಚೀಪೋದೇ ಇಲ್ಲ....." ಎಂದು ಒಟಗುಟ್ಟಿದ.

ಅರ್ಧ ಗಂಟೆ ವಾಯಿದೆ ಗೊತ್ತುಮಾಡಿಕೊಂಡ. ಆ ಅರ್ಧ ಗಂಟೆ ಮುಗಿಯುವ ಹೊತ್ತಿಗೆ ಕಲ್ಲು ಕಾಸಾಗಿರುತ್ತದೆ, ಆಗ ದೇವರ ಮನೆಗೆ ಹೋಗಿ ಕಾಸನ್ನು ಎತ್ತಿಕೊಂಡು ಕೋಚ್‌ಮ್ಯಾನ್ ಹತ್ತಿರ ಓಡಬಹುದು ಎಂದು ತೀರ್ಮಾನ ಮಾಡಿಕೊಂಡು ಮನೆಯ ಹಿಂದೆ ಇದ್ದ ಸೀಬೆಮರ ಹತ್ತಿ ಕೂತುಕೊಂಡ.

ಹತ್ತು ನಿಮಿಷ ಆಯಿತು. ಸ್ವಾಮಿ ಓಡೋಡುತ್ತ ದೇವರ ಮನೆಗೆ ಬಂದ. ಮಂದಾಸನದ ಮುಂದೆ ಅಡ್ಡಬಿದ್ದು ಎದ್ದ. ರಟ್ಟಿನ ಡಬ್ಬಿಯನ್ನು ಎತ್ತಿಕೊಂಡು ಓಡಿದ ಸೀಬೆಯ ಮರದ ಅಡಿಗೆ. ಎದೆ ಡವಡವಗುಟ್ಟುತ್ತಿತ್ತು. ಡಬ್ಬಿಯನ್ನು ಮಗುಚಿ, ಮರಳು, ಎಲೆಗಳು ಇವುಗಳ ನಡುವೆ ಕೈಯಿಟ್ಟು ನೋಡಿದ. ಆ ಎರಡು ಕಲ್ಲೂ ಸಿಕ್ಕಿತು. ಆ ರಟ್ಟಿನ ಡಬ್ಬಿ, ಆ ಮರಳು, ಆ ಎಲೆಗಳು, ಕಾಸಾಗಿ ಮಾರ್ಪಡದೆ ಹಾಗೆಯೇ ಉಳಿದಿದ್ದ ಆ ಎರಡು ಕಲ್ಲುಗಳು ಇದನ್ನು ಕಂಡು ಅವನಿಗೆ ರೋಮ ರೋಮದಲ್ಲೂ ರೋಷವೇರಿತು. ದೇವರುಗಳ ಈ ತಾತ್ಸಾರದಿಂದ ಅವನ ಮನ ನೊಂದಿತು. ಕಣ್ಣಲ್ಲಿ ನೀರು ತುಂಬಿ ಬಂತು.

ಬಾಯಿಗೆ ಬಂದ ಹಾಗೆ ದೇವರುಗಳನ್ನೆಲ್ಲ ಬೈಯೋಣವೆಂದು ಒಂದು ಮನಸ್ಸು. ಆದರೆ ಹಾಗೆ ಮಾಡಲು ಭಯ. ಆದರ ಬದಲು, ಆ ರಟ್ಟಿನ ಡಬ್ಬಿಯನ್ನು ಚೆನ್ನಾಗಿ ತುಳಿದು ತುಳಿದು, ಇಲ್ಲಿಂದಿಲ್ಲಿಗೆ ಅಲ್ಲಿಂದಿಲ್ಲಿಗೆ ಒದ್ದು ತನ್ನ ರೋಷ ತೀರಿಸಿಕೊಂಡ. ಇದ್ದಕ್ಕಿದ್ದಂತೆ ಇದೂ ಕೂಡ ದೇವರಿಗೆ ಸರಿದೋರದೆ ಹೋಗಬಹುದಲ್ಲವೆ ಎನ್ನಿಸಿತು. ಅಯ್ಯೋ, ಸ್ವಾಮಿ, ಕೋಪ ಮಾಡಿಕೋ ಬೇಡಾಪ್ಪ..... ದುಡ್ಡಿಲ್ಲದಿದ್ದರೆ ಪೀಡೆ ಹೋಯಿತು. ದೇವರು ಮುನಿಸಿಕೊಂಡರೆ ಏನು ಗತಿ? ಪರೀಕ್ಷೆಯಲ್ಲಿ ಫೇಲು ಮಾಡಿಸಿಬಿಡಬಹುದು; ಅಪ್ಪನನ್ನು ಸಾಯಿಸಿ ಬಿಡಬಹುದು. ಅಮ್ಮನನ್ನೋ ಅಜ್ಜಿಯನ್ನೋ ಅಥವಾ ಪಾಪನನ್ನೋ ಕೊಂದುಬಿಡಬಹುದು! ಡಬ್ಬಿಯನ್ನು ತಿರುಗಿ ಎತ್ತಿಕೊಂಡು ಕಣ್ಣಿಗೆ ಒತ್ತಿಕೊಂಡ. ಮರಳು, ಕಲ್ಲು, ಮುದುರಿ ಅಜ್ಜಿಬಜ್ಜಿಯಾಗಿದ್ದ ಎಲೆ ಎಲ್ಲವನ್ನೂ ಮತ್ತೆ ಅದರೊಳಗಿರಿಸಿದ. ಬಾಳೆ ಮರದ ಬುಡದ ಬಳಿ ಪುಟ್ಟ ಗುಳಿ ತೋಡಿ ಅದರೊಳಗೆ ಡಬ್ಬಿಯನ್ನು ಹೂತು ಭಕ್ತಿಯಿಂದ ಕೈಮುಗಿದ.

## ಎರಡು

ಇದಾಗಿ ಹತ್ತು ನಿಮಿಷ ಕಳೆದಿಲ್ಲ. ಆಗಲೆ, ಸ್ವಾಮಿನಾಥ ಅಬೂ ಗಲ್ಲಿಗೆ ಓಡಿಹೋಗಿ ಮಣಿಯ ಮನೆ ಮುಂದೆ ನಿಂತು ಎರಡು ಮೂರು ಸಲ ಸಿಳ್ಳು ಹಾಕಿದ. ಮಣಿಯ ಸುಳಿವು ಕಾಣಿಸಲಿಲ್ಲ. ಸ್ವಾಮಿನಾಥ ಮೆಟ್ಟಿಲು ಹತ್ತಿ ಬಾಗಿಲು ತಟ್ಟಿದ. ಬಾಗಿಲ ಸರಪಣಿ ಸದ್ದಾಯಿತು. ಸ್ವಾಮಿನಾಥನ ಮನಸ್ಸು ಪುಕಪುಕಾ ಅಂತು. ಮಣಿಯ ಬದಲು ಬೇರೆ ಯಾರಾದರೂ ಬಂದು 'ಏನು' ಎಂದು ಕೇಳಿದರೆ ಏನು ಹೇಳುವುದು? ಬಾಗಿಲು ತೆರೆಯಿತು. ಸ್ವಾಮಿಯ ಮನಸ್ಸು ದಸ್ಸೆಂದಿತು. ಪೊದೆಯಂತೆ ಹುಬ್ಬುಗಳಿದ್ದ ಎತ್ತರವಾದ ಮನುಷ್ಯ ಹೊರಗೆ ಬಂದು ಸ್ವಾಮಿಯನ್ನು ನೋಡಿ, "ಯಾರು ನೀನು?" ಎಂದು ಕೇಳಿದ.

"ನೀವು ಯಾರು? ಮಣಿ ಎಲ್ಲಿ?" ಎಂದು ಸ್ವಾಮಿ ಕೇಳಿದ. ತಾನು ಮಣಿಯನ್ನು ನೋಡಲು ಬಂದದ್ದು, ಅವನ ಬದಲು ಇವರು ಯಾರೋ ಬೇರೆಯವರು ಬಂದರು, ಇವರು ಯಾರು ಎಂದು ತನಗೆ ತಿಳಿಯದು, ತಿಳಿದುಕೊಳ್ಳಬೇಕೆಂದು ಆಸೆ, ಇಷ್ಟು ಅರ್ಥವೂ ಅವನ ಎರಡು ಚಿಕ್ಕ ಪ್ರಶ್ನೆಗಳಲ್ಲಿ ಅಡಕವಾಗಿತ್ತು. ಮನಸ್ಸಿನ ತಳಮಳದಲ್ಲಿ ತನ್ನ ಮನಸ್ಸಿನಲ್ಲಿದ್ದುದನ್ನು ಸರಿಯಾದ ರೂಪದಲ್ಲಿ ಹೇಳುವುದಕ್ಕೆ ಕೂಡ ಅವನಿಗೆ ಸಾಧ್ಯವಾಗಲಿಲ್ಲ.

"ಏನು, ನನ್ನ ಮನೆಗೆ ಬಂದು ನೀನು ಯಾರು ಅಂತ ಕೇಳ್ತೀಯಲ್ಲ, ನೀನು ಯಾರೋ ದೊಡ್ಡ ಮನುಷ್ಯ?" ಎಂದು ಗುಟುರು ಹಾಕಿದ ಈ ಪೊದೆಹುಬ್ಬುರಾಯ. ಸ್ವಾಮಿನಾಥನ್‌ಗೆ ದಿಕ್ಕು ತೋಚದೆಹೋಯಿತು. ವಾಪಸ್ಸು ಹೊರಡಲು ಅಣಿಯಾಗಿ ಮೆಟ್ಟಿಲಿಳಿದ. ಅಷ್ಟರಲ್ಲಿ ಪೊದೆಹುಬ್ಬ "ಬಾರಯ್ಯ ಇಲ್ಲಿ, ಹುಡುಗ" ಎಂದು ಅಪ್ಪಣೆ ಮಾಡಿದ. ನಿರ್ಲಕ್ಷ್ಯ

ಮಾಡುವಂತಿರಲಿಲ್ಲ ಆ ಅಪ್ಪಣೆ. ಮರುಮಾತಾಡದೆ ಸ್ವಾಮಿ ಮತ್ತೆ ಮೆಟ್ಟಿಲನ್ನು ನಿಧಾನವಾಗಿ ಹತ್ತಿದ. ಬೆದರಿಕೆಯಿಂದ ಕಣ್ಣುಗುಡ್ಡೆ ಉಬ್ಬಿಕೊಂಡಿತ್ತು. "ಅಲ್ಲಯ್ಯಾ? ಯಾಕಯ್ಯಾ ಓಡಿಹೋಗ್ತಾ ಇದ್ದೀ? ಮಣೀನ ನೋಡೋಕೆ ಬಂದಿದ್ದರೆ ನೋಡದೇನೆ ಏಕೆ ಹೊರಟುಹೋಗ್ತೀಯಾ?" ಎಂದ ಪೊದೆಹುಬ್ಬುರಾಯ.

"ಪರವಾ ಇಲ್ಲ" ಎಂದ ಸ್ವಾಮಿ ತಡವರಿಸುತ್ತ.

"ಒಳಗೆ ಹೋಗು, ಮಣಿ ಇದ್ದಾನೆ, ಮಾತಾಡಿಕೊ."

ಭಯಪಟ್ಟುಕೊಂಡು ಸ್ವಾಮಿ ಒಳಕ್ಕೆ ಹೋದ. ಮಣಿ ಬಾಗಿಲ ಹಿಂದೆಯೇ ನಿಂತಿದ್ದ. ಮಣಿಯ ಪೌರುಷ ಮನೆಯೊಳಗೆ ಸುತರಾಂ ಕಾಣಿಸುತ್ತಿರಲಿಲ್ಲ. ಸ್ವಾಮಿ ಮಣಿ ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಾ ನಿಂತುಬಿಟ್ಟರು. ಒಂದು ಮಾತೂ ಹೊರಬೀಳಲಿಲ್ಲ. ಪೊದೆಹುಬ್ಬುರಾಯ ಇವರ ಕಡೆಗೆ ಬೆನ್ನುಮಾಡಿಕೊಂಡು ಹೊಸಲು ಮೇಲೆ ನಿಂತುಕೊಂಡಿದ್ದ. ಆತನ ಕಡೆ ಬೆರಳು ತೋರಿಸಿ ಯಾರವರು ಎನ್ನುವಂತೆ ಸ್ವಾಮಿ ತಲೆ ಕುಣಿಸಿದ. "ದೊಡ್ಡಪ್ಪ" ಎಂದು ಮಣಿ ಪಿಸುಗುಟ್ಟಿದ. ದೊಡ್ಡಪ್ಪ ತಕ್ಷಣ ಇವರ ಕಡೆ ತಿರುಗಿ, "ಮೌನ ಗೌರಿಗಳ ಹಾಗೆ ಯಾಕೆ ನಿಂತಿದ್ದೀರಿ? ಇದಕ್ಕೇನೇನು ಬಂದದ್ದು? ನಾಲಗೇಗೆ ಸ್ವಲ್ಪ ಕಸರತ್ತು ಕೊಡ್ರಣ್ಣಾ" ಎಂದ. ಆತ ಈ ಬುದ್ಧಿವಾದ ಹೇಳಿ ಮುಗಿಸುವ ವೇಳೆಗೆ ಮನೆಯ ಮುಂದೆ ಎರಡು ನಾಯಿಗಳು ಬಲವಾಗಿ ಕಚ್ಚಾಡಹತ್ತಿದವು. ಅವುಗಳ ಗಲಾಟೆ ತಡೆಯಲಾರದೆ ಅವುಗಳನ್ನು ಹೊಡೆದಟ್ಟಲಿಕ್ಕೆಂದು ದೊಡ್ಡಪ್ಪ ಹೊರಟ. ತಮ್ಮ ಮಾತು ಕೇಳಿಸದಷ್ಟು ದೂರ ಆತ ಹೋದ ಮೇಲೆ ಸ್ವಾಮಿ ಕೇಳಿದ : "ನಿಮ್ಮ ದೊಡ್ಡಪ್ಪಾ? ನನಗೆ ಗೊತ್ತೇ ಇರಲಿಲ್ಲ. ಲೋ ಮಣಿ, ಈಗ ಸ್ವಲ್ಪ ಬರೋಕಾಗೊಲ್ವೇನೋ?.... ಉಹೂನೇ?....ಬಹಳ ಅರ್ಜೆಂಟ್ ಕೆಲಸ ಇತ್ತೋ, ನನಗೆ - ಬಹಳ ಅರ್ಜೆಂಟ್ - ಆರು ಕಾಸು - ಬೇಕೇ ಬೇಕು - ಕೋಚ್‌ಮ್ಯಾನ್ ಹೊರಟೋಗ್ತಾನೆ-ವಾರಗಟ್ಟಲೆ ಬರೊಲ್ಲ-ತಿರುಗಿ ಈ ಅವಕಾಶ ಸಿಕ್ಕೊಲ್ಲ - ಚಕ್ರ ಇಲ್ಲದೆ ಹೋದರೆ ಹೇಗೆ ಸಾಧ್ಯ......" ಸ್ವಲ್ಪ ಹೊತ್ತು ಮೌನ. ಮಣಿಯ ದೊಡ್ಡಪ್ಪ ಬೈಯುತ್ತಾ, ಗದರಿಸುತ್ತಾ, ನಾಯಿಗಳನ್ನು ಹೊಡೆಯಲು ಕಲ್ಲುಗಳಿಗಾಗಿ ಹುಡುಕಾಡುತ್ತಾ ಸುತ್ತಾಡುತ್ತಿದ್ದರು. ಸ್ವಾಮಿ ಮಾತು ಮುಂದುವರಿಸಿದ : "ನನ್ನ ಪ್ರಾಣವೆಲ್ಲ ಚಕ್ರದ ಮೇಲೆ ಇದೆ. ನೀ ಕೊಡದೆ ಹೋದರೆ ನನ್ನ ಗತಿ ಆಯ್ತು! ಬೇಗ, ಬೇಗ, ಎಲ್ಲಿ?"

"ನನ್ನ ಹತ್ತಿರ ದುಡ್ಡಿಲ್ಲ. ನನಗೆ ಯಾರೂ ಒಂದು ಪುಡಿಗಾಸೂ ಕೊಡೊಲ್ಲ" ಎಂದ ಮಣಿ.

ಸ್ವಾಮಿನಾಥನ ಆಸೆಯೆಲ್ಲ ಮಣ್ಣುಗೂಡಿತು. "ನಿಮ್ಮ ದೊಡ್ಡಪ್ಪ ಎಲ್ಲಿಡ್ತಾರೆ ದುಡ್ಡು? ಆ ಪೆಟ್ಟಿಗೇಲಿ ನೋಡು."

"ನನಗೆ ಗೊತ್ತಿಲ್ಲ."

ರಸ್ತೆಯಿಂದ ದೊಡ್ಡಪ್ಪ ಕೂಗಿದರು : "ಮಣಿ, ಬಾರೋ ಇಲ್ಲಿ. ಈ ಪಿಶಾಚಿಗಳನ್ನಟ್ಟೋ. ಒಂದು ಕಲ್ಲು ತಾ ಇಲ್ಲಿ."

## ಮೂರು

"ರಾಜಂ, ನನ್ನ ಜೊತೇಲಿ ಒಬ್ಬ ಪೋಲೀಸ್‌ನವನ್ನ ಕಳಿಸಿಕೊಡೋ" ಎಂದು ಇದಾದ ಎರಡು ವಾರಗಳ ಮೇಲೆ ಸ್ವಾಮಿ ಕೇಳಿದ.

"ಪೋಲೀಸ್‌ನವನನ್ನೇ? ಯಾತಕ್ಕೆ?"

"ಈ ಊರಲ್ಲಿ ಒಬ್ಬ ನೀಚ ಇದ್ದಾನೆ. ನನ್ನ ದುಡ್ಡು ದೋಚಿಕೊಂಡು ಬಿಟ್ಟಿದ್ದಾನೆ ಅವನು" ಎಂಬುದಾಗಿ ಕೋಚ್‌ಮ್ಯಾನ್ ವ್ಯವಹಾರವನ್ನೆಲ್ಲ ರಾಜಂಗೆ ವಿವರಿಸಿದ ಸ್ವಾಮಿ. "ಅಷ್ಟೇ ಅಲ್ಲ, ಈಗೆಲ್ಲಾದರೂ ಸಿಕ್ಕಿದರೆ ನನ್ನ ಗುರುತೇ ಇಲ್ಲದವನ ಹಾಗೆ ನಟಿಸ್ತಾನೆ. ಅವನ ಮನೇಗೆ ಹೋದರೆ ಮನೇಲಿಲ್ಲ ಅಂತಾರೆ. ಆದರೆ ಅವನು ಒಳಗಡೇನೇ ಯಾರ ಕೈಲಾದರೂ ಮಾತಾಡ್ತಾ ಇರೋದು ಚೆನ್ನಾಗಿ ಕೇಳಿಸುತ್ತೆ. ಇನ್ನೂ ನಾನು ಹಟ ಹಿಡಿದರೆ, ನಾಯೀನ ಛೂ ಬಿಟ್ಟು ಸಾಯಿಸಿಬಿಡ್ತೀನಿ ಅಂತ ಹೇಳಿಕಳಿಸ್ತಾನೆ."

"ಅವನ ಹತ್ತಿರ ನಾಯಿ ಬೇರೆ ಇದೆಯೇನು?" ಎಂದ ರಾಜಂ.

"ಏನೋಪ್ಪ. ಇಷ್ಟು ದಿನವಾದರೂ ನಂಗೊಂದೂ ಕಾಣಿಸಿಲ್ಲಾಪ್ಪ."

"ಹಾಗಾದರೆ ಬಾಗಿಲು ತಳ್ಳಿಕೊಂಡು ಮನೆಯೊಳಕ್ಕೆ ನುಗ್ಗಿ ಚೆನ್ನಾಗಿ ಒದ್ದುಬಿಡೋದು ತಾನೆ."

"ನೋಡು, ಅದೆಲ್ಲಾ ಬಾಯಲ್ಲಿ ಹೇಳೋದು ಸುಲಭ; ಅವನನ್ನು ನೋಡೋಕೆ ಹೋದಾಗಲೆಲ್ಲ ನನಗೆ ನಡುಕ ಹುಟ್ಟಿಹೋಗುತ್ತೆ. ಆ ಗಾಡಿಯವನ ಮನೇಲಿ ಏನೇನಿರುತ್ತೋ ಯಾರಿಗೆ ಗೊತ್ತು? ಅವನು ಕುದುರೇನೆ ಛೂ ಬಿಟ್ಟರೆ?"

"ಬಿಟ್ಟರೆ ಬಿಡಲಿ, ಕುದುರೆ ನಿನ್ನನ್ನೇನೂ ತಿನ್ನೊಲ್ಲ."

"ತಿನ್ನೋಲವೆ? ನಿಜವಾಗಿ? ಬಾ ನನ್ನ ಜೊತೇಲಿ, ನಮ್ಮ ದರ್ಜಿ ರಂಗನ ಹತ್ತಿರ, ಕೇಳಿಸ್ತೇನೆ. ಹುಲಿಗಳಿಗಿಂತ ಒಂದೊಂದು ಸಲ ಕುದುರೆಗಳೇ ಕ್ರೂರವಾಗಿರುತ್ತವಂತೆ, ಸವಾರಿ ಮಡೋವರ್ನೇ ತಿಂದು ಹಾಕುತ್ತವಂತೆ" ಎಂದ ಸ್ವಾಮಿ, ಬಹಳ ನಂಬಿಕೆಯಿಂದ.

"ಹೋಗಲಿ, ಹಾಗೆ ಗೇಟ್ ಹತ್ತಿರಾನೇ ಕಾಯ್ತಾ ಇದ್ದು ಅವನು ಬಂದ ಕೂಡಲೆ ಹಿಡಕೊಂಡು ಬಿಡು......" ಎಂದು ರಾಜಂ ಸೂಚಿಸಿದ.

"ಹಾಗೂ ಪ್ರಯತ್ನ ಮಾಡಿದೆ. ಸರಿಹೋಗಲಿಲ್ಲ. ಯಾಕೇನ್ನು? ಅವನು ಯಾವಾಗಲೂ ಕೋಚ್ ಮೇಲೆ ಕೂತಿರ್ತಾನೆ. ನಾನು ಕಾಣಿಸಿದ ಕೂಡಲೆ ತನ್ನ ಉದ್ದಾನೆ ಚಾವಟೀನ ತೆಗೆದು ರೊಯ್ ಅಂತ ಬೀಸ್ತಾನೆ. ನಾನು ಹಾಗೂ ಹೀಗೂ ತಪ್ಪಿಸಿಕೊಂಡು ಬಲವಾಗಿ, 'ಕೊಡೊ ನನ್ನ ಕಾಸೂ' ಅಂತ ಕೂಗ್ತೀನಿ. ಆದರೆ ಏನು ಪ್ರಯೋಜನ? ಕುದುರೆ ಟಪಟಪಾಂತ ಓಡಿ ಹೋಗುತ್ತೆ. ಅಲ್ಲ ನೋಡೋ, ಎರಡಾಣೆಗೆ ದಗಾ ಹಾಕ್ಬಿಟ್ಟಿದ್ದಾನೆ."

"ಆರು ಕಾಸೂ ಅಂದೆಯಲ್ಲೋ?"

"ಇನ್ನು ಎರಡು ಸಲ ಆರಾರು ಕಾಸು ಇಸ್ಕೊಂಡ ಕಣೊ."

"ಹಾಗಾದರೆ ಒಂದೂವರಾಣೆ ಮಾತ್ರ ಆಯಿತು."

"ಇಲ್ಲವೊ ರಾಜಂ. ಎರಡಾಣೆ ಕಾಣೊ."

"ಲೋ ಮಹಾರಾಯ, ಹನ್ನೆರಡು ಕಾಸು ಹಾಕಿದರೆ ಒಂದಾಣೆ ಅಲ್ಲವೇನೋ? ನೀನು ಮೂರು ಸಲ ಆರಾರು ಕಾಸು ಕೊಟ್ಟೆ, ಹದಿನೆಂಟು ಕಾಸಾಯಿತು. ಅಂದರೆ ಒಂದೂವರಾಣೆ ಆಯಿತು.''

"ಲೋ ಸುಮ್ಮನೆ ಪಂಚಾಯಿತಿ ಮಾಡಬೇಡ ಕಾಣೊ. ಒಂದಾಣೇಗೆ ಎಷ್ಟು ಕಾಸಾದರೆ ನಮಗೇನಂತೆ?''



"ನೋಡು, ದುಡ್ಡಿನ ವಿಚಾರದಲ್ಲಿ ಬಹಳ ಕಟ್ಟುನಿಟ್ಟಾಗಿರಬೇಕು........ಹೂ, ಹೇಳು, ಆಮೇಲೆ."

"ಕೋಚ್‌ಮ್ಯಾನ್ ಮೊದಲು ನನ್ನಿಂದ ಆರು ಕಾಸು ಇಸ್ಕೊಂಡ, ಎರಡು ದಿನದಲ್ಲೆ

ಬೆಳ್ಳೀ ರೂಪಾಯಿ ತಂದುಕೊಡ್ತೀನಿ ಅಂತ ಪ್ರಮಾಣ ಮಾಡಿದ. ನಾಲ್ಕು ದಿನವಾದರೂ ಕೈಗೇ ಸಿಕ್ಕಲಿಲ್ಲ. ಆಮೇಲೆ ಸಿಕ್ಕಿದವನು, ಮೂಲಿಕೇಗೆ ಹನ್ನೆರಡು ಕಾಸಾಯಿತು, ಇನ್ನೂ ಆರು ಕಾಸು ಕೊಡು ಅಂದ. ತಿರುಗಿ ತಲೆ ತಪ್ಪಿಸಿಕೊಂಡ. ತಿರುಗಿ ಒಂದು ಸಲ, ಆರು ಕಾಸು ಬೇಕೇಬೇಕು, ಇಲ್ಲದೆ ಹೋದರೆ ಎಲ್ಲಾ ವ್ಯರ್ಥವಾಗುತ್ತೆ, ಅಂತ ಹೇಳಿ ಇಸ್ಕೊಂಡ. ಆಮೇಲೆ ಅವನನ್ನು ನೋಡೋಕೆ ಹೋದಾಗಲೆಲ್ಲ ಒಂದಲ್ಲ ಒಂದು ನೆಪ ಹೇಳಿ ನುಣುಚಿಕೊಂಡ. ತುಂಬ ಗಾಳಿ ಬಿಸಿಲು-ಆದ್ದರಿಂದ ಸ್ವಲ್ಪ ನಿಧಾನ ಆಗ್ತಾ ಇದೆ ಅಂತ ಎರಡು ಒ ೂರು ಸಲ ಹೇಳಿದ. ಆಮೇಲೆ ಮೊನ್ನೆ ಸಿಕ್ಕಿ 'ನೀನು ಯಾರೊ, ನನಗ್ಯಾವಾಗ ದುಡ್ಡು ಕೊಟ್ಟಿದ್ಯೋ?' ಅಂತ ಅಂದುಬಿಟ್ಟ. ನೋಡಿದ್ಯಾ, ಅವನ ಮೋಸ ಹೇಗಿದೆ? ಆ ದುಡ್ಡು ಹೋದರೆ ಹೋಯಿತು. ಆದರೆ ಅವನ ಮಗ ಇದ್ದಾನೆ, ಕಪ್ಪಗೊಬ್ಬ ಕೊರಮ. ಅವನ್ನ ಕಂಡರಾಗೊಲ್ಲ ನನಗೆ. ನನ್ನನ್ನ ನೋಡಿದಾಗಲೆಲ್ಲ ಅಣಕಿಸ್ತಾನೆ. ತೊಟ್ಟಿ ತುಂಬ ಬಚ್ಚಲ ಕೊಚ್ಚೆ ನೀರು ತುಂಬಿಕೊಂಡು ಬಂದು ತಲೆ ಮೇಲೆ ಸುರೀತೀನಿ, ಅಂತ ಹೆದರಿಸ್ತಾನೆ. ಅಂದು ಒಂದು ದಿನ ಚಾಕು ತೋರಿಸಿ ತಿವೀತೀನಿ ಅಂದ. ಅವನ್ನ ಹಿಡಕೊಂಡು ಬಲವಾಗಿ ತದಕಿದರೆ ಸರಿ, ಅವರಪ್ಪ ತುಟಿ ಪಿಟಕ್ಕೆನ್ನದೆ ಆ ಎರಡಾಣೇನ ಕಕ್ತಾನೆ. ಅದೇ ದಾರಿ."

## ನಾಲ್ಕು

ಮಾರನೆಯ ದಿನ ಮಣಿ ಸ್ವಾಮಿ ಇಬ್ಬರೂ ಕೋಚ್‌ಮ್ಯಾನ್ ಮನೆಗೆ ಹೊರಟರು. ತನ್ನ ಸಂಗಾತಿಗಳಿಗೆ ಹೇಳದೆ ಹೋಗಿದ್ದರೇನೆ ಚೆನ್ನಾಗಿತ್ತಲ್ಲಪ್ಪಾ ಎಂದು ಸ್ವಾಮಿಗೆ ಅನ್ನಿಸಹತ್ತಿತು. ಯಾಕೊ ಕೆಲಸವೆಲ್ಲ ತನ್ನ ಹತೋಟಿ ಮೀರಿಹೋಯಿತು. ರಾಜಂ ಮಣಿ ಇಬ್ಬರೂ ಪ್ರವೇಶಿಸಿಬಿಟ್ಟಿದ್ದಾರೆ. ಏನೇನು ಮಾಡಿಬಿಡುತ್ತಾರೊ ಅವರು?

ರಾಜಂ ಒಂದು ಪ್ಲಾನು ಮಾಡಿದ : ಆ ಕೋಚ್‌ಮ್ಯಾನ್ ಮಗನನ್ನು ಉಪಾಯವಾಗಿ ಎಳೆದುಕೊಂಡು ಬಂದು, ತಮ್ಮ ಮನೆಯಲ್ಲಿ ಕೂಡಿಹಾಕಿಕೊಂಡು ಬಿಡುವುದು, ಅಂತ. ಇದನ್ನು ಜಾರಿಗೆ ತರುವವನು ಮಣಿ. ಮೆಲ್ಲಗೆ ಹೋಗಿ ಅವನು ಆ ಹುಡುಗನ ಸ್ನೇಹ ಬೆಳಸಬೇಕು. ಗಿಲೀಟಿನಿಂದ ಎಳೆದುಕೊಂಡು ಬರಬೇಕು. ಈ ಕಾರ್ಯದಲ್ಲಿ ಸ್ವಾಮಿನಾಥನ ಪಾತ್ರ ಬಹಳವೇನೂ ಇರಲಿಲ್ಲ-ಕೋಚ್‌ಮ್ಯಾನ್ ಮನೆಯನ್ನು ಮಣಿಗೆ ತೋರಿಸಿದರೆ ತೀರಿತು.

ಸ್ವಾಮಿಯ ಮನೆಯಿಂದ ಕೋಚ್‌ಮ್ಯಾನ್ ಮನೆಗೆ ಒಂದು ಮೈಲಿ. ಊರ ಪಶ್ಚಿಮದಲ್ಲಿ ಕೊಳಚೆಕೇರಿಯಲ್ಲಿ ಹತ್ತು ಹನ್ನೆರಡು ಹರುಕು ಮುರುಕು ಗುಡಿಸಲಿತ್ತು. ಆ ಗಬ್ಬು ವಾಸನೆ ಹೊಡೆಯುವ ಗುಡಿಸಲುಗಳಲ್ಲಿ ಕೋಚ್‌ಮ್ಯಾನ್‌ದೂ ಒಂದು.

ಕೊಳಚೆಕೇರಿ ಇನ್ನೇನು ಸಿಕ್ಕಿತು. ಪ್ರತೀಕಾರದ ಚಕ್ರ ತಿರುಗದಂತೆ ನಿಲ್ಲಿಸಲು ಸ್ವಾಮಿ ಕಡೆಯದೊಂದು ಯತ್ನ ಮಾಡಿ ನೋಡಿದ :

"ಮಣಿ, ಅವನು ದುಡ್ಡು ಹಿಂದಕ್ಕೆ ಕೊಟ್ಟ ಹಾಗೆ ಜ್ಞಾಪಕ ಕಾಣೊ."

"ಆ?"

"ಮತ್ತೆ, ನನ್ನ ಜ್ಞಾಪಕಾ; ಅವನೂ........"

"ನಿನ್ನ ಜ್ಞಾಪಕ ಅಂದೆಯಾ? ಎಲ್ಲಿ ಹಾಗಾದರೆ, ದುಡ್ಡು ತೋರಿಸು."

"ಲೋ, ಸುಮ್ಮನೆ ಬಿಟ್ಟುಬಿಡೋ. ಆ ಹುಡುಗನ ಗೋಜಿಗೆ ಹೋದರೆ ಏನೇನು ಗಲಾಟೆ ಬರುತ್ತೊ ಏನೋ, ಬೇಡ ಕಾಣೊ" ಎಂದು ಸ್ವಾಮಿ ಬೇಡಿಕೊಂಡ.



"ಮುಚ್ಕೋ ಬಾಯಿ, ಕತ್ತು ಕಿವುಚಿ ಬಿಟ್ಟೇನ್."

"ಮಣಿ, ಲೋ ಮಣಿ-ಪೊಲೀಸ್‌ನವರು-ಆ ಹುಡುಗನೇ ಏನಾದರೂ-ತುಂಬಾ ಘಾಟಿ ಕಾಣೊ-ಏನೇನ್ಮಾಡ್ಬಿಡ್ತಾನೊ." ಆ ಹುಡುಗನನ್ನ ಕಂಡರೆ ಬಲು ದಿಗಿಲು ಸ್ವಾಮಿಗೆ. ರಾತ್ರಿಯ ಹೊತ್ತು ಕ್ರೂರವಾದ, ಕೊಳಕಾದ ಕರಿಯ ಮುಖವೊಂದು ಅವನ ಕಣ್ಣ ಮುಂದೆ ಬಂದು ನಿಲ್ಲುವುದು. ಮೈಯೆಲ್ಲ ನಡುಕ ಹುಟ್ಟಿಸುವಂಥ ಆ ಮುಖ ಆ ಕೋಚ್‌ಮ್ಯಾನ್ ಮಗನದು.

"ಆ ಮೂರನೆಯ ಮನೆಯೇ ಅವನದು" ಎಂದು ಸ್ವಾಮಿ ಬೆರಳು ತೋರಿದ. ಸದ್ಯ ತನ್ನ ಕೆಲಸ ತೀರಿತಲ್ಲ ಎಂದು ದೊಡ್ಡದಾಗಿ ಉಸಿರು ಎಳೆದುಬಿಟ್ಟ.

ಆದರೆ ಮಣಿ ಕೊನೆಯ ನಿಮಿಷದಲ್ಲಿ ಮೊದಲಿನ ಏರ್ಪಾಡನ್ನು ಬದಲಾಯಿಸಿ, ಮನೆಯ ಬಾಗಿಲವರೆಗೆ ಸ್ವಾಮಿಯೂ ಬಂದೇ ತೀರಬೇಕೆಂದು ಹಟ ಹಿಡಿದ. ಒಲ್ಲೆನೆಂದು ಸ್ವಾಮಿನಾಥ ನಡು ಬೀದಿಯಲ್ಲೇ ಕುಳಿತು ಮಣ್ಣಿನಲ್ಲಿ ಹಿಮ್ಮಡಿ ಊರಲು ಮೊದಲು ಮಾಡಿದ. ಆದರೆ ಮಣಿಯ ಮಾತಿಗೆ ಎದುರು ಹೋಗಲು ಸಾಧ್ಯವೇ?

ಕೋಚ್‌ಮ್ಯಾನ್ ಮನೆಯ ಬಾಗಿಲವರೆಗೂ ಸ್ವಾಮಿಯನ್ನು ದರದರನೆ ಎಳೆದುಕೊಂಡು ಹೋದ. ಸ್ವಾಮಿ ಬಾಯಿಬಾಯಿ ಬಡಕೊಂಡ.

"ಮಣಿ, ಮಣೀ, ಬಿಡೋ, ಏನು ಮಾಡಿದೆನೋ ನಾನು?"

"ಏ ಕತ್ತೆ, ಎಷ್ಟೋ ಅವಾಂತರ" ಎಂದು ಮಣಿ ಕೂಗಿ, ಸ್ವಾಮಿಯನ್ನು ಹೊಡೆಯುವುದಕ್ಕೆಂದು ಕೈ ಎತ್ತಿದ.

ಸ್ವಾಮಿನಾಥನಿಗೆ ಅಳು ಬಂತು. ಅಳುವನ್ನು ಅಡಗಿಸುವುದಕ್ಕೆಂದು ಮಣಿ ಸ್ವಾಮಿಯ ಬಾಯನ್ನು ಬಲವಾಗಿ ಅದುಮಿದ. ಸುತ್ತಲೂ ಸಣ್ಣದೊಂದು ಸಂದಣಿ ಸೇರಿತು; ಕಡ್ಡಿ ಕೈಕಾಲುಗಳ, ಡುಬ್ಬು ಹೊಟ್ಟೆಯ ಮಕ್ಕಳು, ಕಪ್ಪು ಚರ್ಮದ, ಕೆದರಿದ ತಲೆಯ ಹೆಂಗಸರು, ಹರುಕು ಗಡ್ಡದ ಕೆಲವು ಗಂಡಸರು ಸೇರಿದರು. ಬಡಕಲು ಕೋಳಿ ಮರಿಗಳು ಕಿಚುಗುಟ್ಟಿಕೊಂಡು ಸಡಗರದಿಂದ ಓಡಾಡುತ್ತಿದ್ದವು. ಬಿಸಿಲಿನ ಬೇಗೆ ಬಲವಾಗಿತ್ತು. ಮರವೊಂದರ ನೆರಳಿನಲ್ಲಿ ಎರಡು ಮೂರು ಕಂತ್ರಿ ನಾಯಿಗಳು ಮಲಗಿ ಗೊರಕೆ ಹೊಡೆಯುತ್ತಿದ್ದವು. ಕೋಳಿ ಗೂಡು, ಕೊಳಕು ಬಟ್ಟೆ ಇವುಗಳ ನಾತದಿಂದ ಓಕರಿಕೆ ಬರುವಂತಾಗುತ್ತಿತ್ತು. ಸ್ವಾಮಿನಾಥ ತೋರಿದ ಮನೆಯಿಂದ ಮೂರು ಅಡಿ ಎತ್ತರದ ಅರೆಬೆತ್ತಲೆ ಮೋಟು ಮನುಷ್ಯನೊಬ್ಬ ಹೊರಗೆ ಬಂದ. ಗುಂಪಿನಲ್ಲಿ ನುಸಿದುಕೊಂಡು ಚೆನ್ನಾದ ಜಾಗದಲ್ಲಿ ನಿಂತು ಹೆಬ್ಬೆರಳು ಚೀಪುತ್ತ ಈ ಕದನವನ್ನು ಶ್ರದ್ಧೆಯಿಂದ ನೋಡತೊಡಗಿದ. ಸ್ವಾಮಿಯನ್ನು ತೋರಿಸಿ, ಗುಂಪಿನ ಜನಕ್ಕೆಲ್ಲ ಮಣಿ ಹೇಳಿದ : "ಈ ಭಡವನ್ನ ನೋಡಿ - ಅವನು ಯಾರೋ ನನಗೆ ಗೊತ್ತೇ ಇಲ್ಲ. ಎಲ್ಲಿಂದಲೋ ಬಂದು ಕೊಡೋ ನನ್ನೆರಡಾಣೆ ಅಂತಾ ಇದ್ದಾನೆ. ಇದುವರೆತನಕ ಅವನನ್ನು ನಾನು ನೊಡಿದ್ದೇ ಇಲ್ಲ. ಅವನು ನನಗೆ ಎರಡಾಣೆ ಕೊಟ್ಟಿದ್ದನಂತೆ!".......ಹೀಗೆ ಕಾಲುಗಂಟೆ ಏನೇನೂ ಹೇಳಿದ. ಮಣಿಯ ಮಾತು ಮುಗಿದ ತಕ್ಷಣ ಕೋಚ್‌ಮ್ಯಾನ್ ಮಗ ಬಾಯಿಂದ ಬೆಟ್ಟು ತೆಗೆದು, "ಅವನನ್ನು ಜೈಲಿಗೆ ಕಳಿಸಬೇಕು" ಎಂದ. ಅದಕ್ಕೆ ಮಣಿ ಒಪ್ಪಿಗೆ ಸೂಚಿಸಿ, "ಬಾ, ಇಬ್ಬರೂ ಇವನನ್ನು ಪೋಲೀಸು ಸ್ಟೇಷನ್ನಿಗೆ ಎಳೆದುಕೊಂಡು ಹೋಗೋಣ" ಎಂದ.

"ಉಹೂಪ್ಪ" ಎಂದ ಹುಡುಗ. ಪೋಲೀಸ್ ಸ್ಟೇಷನ್‌ಗಳು ಎಂದರೆ ಭಯ ಅವನಿಗೆ.

"ಅವನನ್ನ ಪೋಲೀಸ್ ಸ್ಟೇಷನ್ನಿಗೇ ಕರೆದುಕೊಂಡು ಹೋಗಬೇಕು ಎಂತ ನಿನಗೆ ಹೇಗೆ ಗೊತ್ತು?" ಎಂದು ಮಣಿ ಕೇಳಿದ

"ನಂಗೊತ್ತು."

"ನಿನ್ನನ್ನೂ ಈ ಪೋಕರಿ ಹೀಗೇ ಪೀಡಿಸ್ತಾನ್ಯಾ?"

"ಇಲ್ಲ" ಎಂದ ಹುಡುಗ.

ಸ್ವಾಮಿನಾಥ ಕಣ್ಣೀರು ಕೂಡಿದ ಮುಖದಿಂದ, "ನಿಮ್ಮ ತಂದೆ ನನ್ನ ಹತ್ತಿರ ತೊಗೊಂಡ ಎರಡಾಣೆ ಎಲ್ಲೊ?" ಎಂದು ಕೇಳಿದ ಆ ಹುಡುಗನನ್ನು. ಮೊದಮೊದಲು ಜನ ಇವರಿಬ್ಬರನ್ನು ಸಮಾಧಾನ ಮಾಡಲು ನೋಡಿದರು. ಸಾಧ್ಯವಾಗಲಿಲ್ಲ.

ಆದುದರಿಂದ ತಮ್ಮ ದಾರಿ ಹಿಡಿದು ಹೊರಟುಹೋದರು. ಹೀಗೆ ಗುಂಪು ಕರಗಿತು. ಮಣಿ ಇದ್ದಕ್ಕಿದಂತೆ ಜೇಬಿನಿಂದ ಹೊಳೆ ಹೊಳೆಯುವ ಕೆಂಪು ಬುಗುರಿಯೊಂದನ್ನು ತೆಗೆದು, "ಲೊ, ಇದು ನಿನಗೆ ಬೇಕೇನೊ" ಎಂದು ಹುಡುಗನನ್ನು ಕೇಳಿದ. ಹುಡುಗ ಕೈಚಾಚಿದ.

ಮಣಿ ಹೇಳಿದ : " ಆ, ಇದನ್ನು ಕೊಡೋಕಾಗೊಲ್ಲ. ನನ್ನ ಜೊತೇಲಿ ಬಾ, ಇದಕ್ಕಿಂತ ದೊಡ್ಡ ಬುಗುರಿ ಕೊಡ್ತೀನಿ. ಇಬ್ಬರೂ ಸ್ನೇಹಿತರಾಗೋಣ."

ಹುಡುಗನಿಗೆ ಯಾವ ಅಭ್ಯಂತರವೂ ಇರಲಿಲ್ಲ. "ಆಗಲಿ. ಆದರೆ ಸ್ವಲ್ಪ ಕೊಡು, ನೋಡಿ ಕೊಡ್ತೀನಿ" ಎಂದು ಕೇಳಿದ. ಮಣಿ ಕೊಟ್ಟ. ಹುಡುಗ ಎರಡು ಮೂರು ಸಲ ಅದನ್ನು ಕೈಯಲ್ಲಿ ತಿರುಗಿಸಿ ನೋಡಿದವನು, ಇದ್ದಕ್ಕಿದ್ದಂತೆ ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಅಲ್ಲಿಂದ ಮಾಯವಾಗಿಬಿಟ್ಟ. ಮಣಿಗೆ ಏನು ನಡೆಯಿತು ಎಂಬುದು ತಕ್ಷಣ ಅರ್ಥವಾಗಲಿಲ್ಲ. ಅವನಿಗೆ ಇದೆಲ್ಲ ಅರ್ಥವಾಗುವ ಹೊತ್ತಿಗೆ ಹುಡುಗ ತನ್ನ ಮುರುಕಲು ಹಟ್ಟಿಯೊಳಕ್ಕೆ ನುಗ್ಗುತ್ತಿದ್ದ. ಮಣಿ ಅವನನ್ನು ಅಟ್ಟಿಸಿಕೊಂಡು ಹೋದ.

ಹಟ್ಟಿಯ ಹತ್ತಿರ ಬಂದ. ಬಾಗಿಲು ಮುಚ್ಚಿಬಿಟ್ಟಿತ್ತು. ಹತ್ತು ಹನ್ನೆರಡು ಸಲ ಬಾಗಿಲು ತಟ್ಟಿದ. ಗಂಟು ಮೋರೆಯ ಮುದುಕನೊಬ್ಬ ಬಂದು ಹುಡುಗ ಇಲ್ಲವೆಂದ. ಬಾಗಿಲು ತಿರುಗಿ ಮುಚ್ಚಿಕೊಂಡಿತು. ಮಣಿ ಮತ್ತೆ ತಟ್ಟಿದ. ಅಕ್ಕ ಪಕ್ಕದ ಮನೆಗಳಿಂದ ಇಬ್ಬರು ಮೂವರು ಧಾಂಡಿಗರು ಬಂದು, "ಲೇ, ನಮ್ಮ ಕೇರಿಗೆ ಬಂದು ಗಲಾಟೆ ಮಾಡ್ತೀಯಾ? ಹೂತ್ಹಾಕಿ ಬಿಡ್ತೀವಿ, ಹುಷಾರ್" ಎಂದು ಹೆದರಿಸಿದರು. "ಬಾರೊ, ಬಂದುಬಿಡೊ" ಎಂದು ದೂರದಲ್ಲಿದ್ದ ಸ್ವಾಮಿ ಬಡಕೊಳ್ಳುತ್ತಿದ್ದ. ಆದರೆ ಇಷ್ಟಕ್ಕೇ ಮಣಿ ಬಿಟ್ಟಾನೆಯೆ? ಬಾಗಿಲು ಬಡಿಯುತ್ತಲೇ ಇದ್ದ.

ನೆರೆಹೊರೆಯ ಖದೀಮರು ಕೈಗೆ ಕಲ್ಲುಗಳನ್ನು ತೆಗೆದುಕೊಂಡದ್ದೇ ಅಲ್ಲದೆ ಮಲಗಿದ್ದ ನಾಯಿಗಳನ್ನು ಎಬ್ಬಿಸಿ ಛೂ ಬಿಟ್ಟರು.

ನಾಯಿಗಳು ನೆಗನೆಗೆಯುತ್ತ ಇವನ ಮೇಲೆ ಹಾರಿ ಬಂದಾಗಲೆ ಮಣಿಗೆ ಜ್ಞಾನ ಬಂದುದು. "ಓಡೋ ಓಡೋ, ಸ್ವಾಮಿ" ಎಂದು ಹೇಳಿ ತಾನೇ ಮಾದರಿ ಹಾಕಿಕೊಟ್ಟ. ಸ್ವಾಮಿಯ ಬೆನ್ನ ಮೇಲೆ ಎರಡು ಕಲ್ಲು ಬಿತ್ತು. ಮಣಿಗೂ ಒಂದೆರಡು ತಗಲಿತು. ಅವನ ಬಲ ಹಿಮ್ಮಡಿಗೆ ಚೂಪಾದ ಕಲ್ಲು ತಾಗಿ ಚರ್ಮ ಕಿತ್ತು ಹೋಯಿತು. ಮುಂದಿರುವ ದಾರಿ ಹೊರತು ಅವರಿಗಿನ್ನೇನೂ ಕಾಣಿಸಲಿಲ್ಲ.

# ಅಪ್ಪನ ಜೊತೆಯಲ್ಲಿ

ಬೇಸಿಗೆಯ ಕಾಲದಲ್ಲಿ ದಕ್ಷಿಣ ಭಾರತದಲ್ಲೆಲ್ಲ ಮಾಲ್ಗುಡಿಗಿಂತ ಕಷ್ಟದ ಊರು ಮತ್ತೊಂದಿಲ್ಲ. ಅನೇಕ ವೇಳೆ ಬಿಸಿಲಿನ ಬೇಗೆ ನೂರು ಹತ್ತು ಡಿಗ್ರಿಗೂ ಮೀರಿರುತ್ತಿತ್ತು. ಹನ್ನೆರಡರಿಂದ ಮೂರರವರೆಗೆ ರಸ್ತೆಗಳು ಬೆಂಗಾಡು ಬಿದ್ದು ಜನಶೂನ್ಯವಾಗಿರುತ್ತಿತ್ತು. ಪ್ರಾಣಿಗಳಲ್ಲೆಲ್ಲ ಅಲಾಲ್ ಟೋಪಿಗಳಂತೆ ಅಲೆಯುವುದರಲ್ಲಿ ಎತ್ತಿದ ಕೈಗಳು ಎನಿಸಿದ ಕತ್ತೆ ನಾಯಿಗಳು ಕೂಡ, ಸೂರ್ಯಾಸ್ತಮಯವಾಗುವವರೆಗೂ ರಸ್ತೆಯ ಅಂಚಿನಲ್ಲಿ ಮನೆಗಳ ಸೂರಿನ ತುದಿಯ ಹರುಕುಮುರುಕು ನೆರಳಿನಲ್ಲೆ ನಡೆಯುತ್ತಿದ್ದವು.

ಆದರೆ ಬಿಸಿಲಿಗೊಂದು ವಿಚಿತ್ರ ಗುಣವಿದೆ; ಯಾರು ಅದರ ವಿಷಯ ಯೋಚನೆ ಮಾಡುತ್ತಾರೊ ಅವರಿಗೆ ಮಾತ್ರ ಅದು ತಟ್ಟುತ್ತದೆ. ಮಾಲ್ಗುಡಿಯ ಬಿಸಿಲನ್ನು ತಡೆಯುವುದು ಸಾಧ್ಯವಿಲ್ಲವೆಂದು ರಾಜಂ, ಮಣಿ, ಸ್ವಾಮಿ ಇವರನ್ನು ಒಪ್ಪಿಸುವುದು ಎಂಥವರಿಗೂ ಆಗದ ಕೆಲಸ. ಯಾವ ಬಿಸಿಲು, ಮಿಲ್ ಮ್ಯಾನೇಜರ್ ಆದ ಮಿ॥ ಹೆಂಟೆಲ್‌ರನ್ನು ಕೊಡೈಕನಾಲ್‌ಗೆ ಅಟ್ಟುತ್ತಿತ್ತೊ, ಯಾವ ಬಿಸಿಲು ಎಗ್ಜಿಕ್ಯುಟಿವ್ ಎಂಜಿನಿಯರಾದ ಶ್ರೀ ಕೃಷ್ಣನ್‌ರ ಪೇಟೆದೊಳಗೂ ತೂರಿ ಬಿಸಿಲು ಗಾಳಿಗಳಲ್ಲಿ ಅಲೆದಾಡಬೇಕಾಗಿರುವ ತಮ್ಮ ಉದ್ಯೋಗಕ್ಕಿಂತ ಕಠಿಣವಾದುದು ಮತ್ತೊಂದಿಲ್ಲವೆಂದು ಆತನ ಕೈಯಲ್ಲಿ ನುಡಿಸುತ್ತಿತ್ತೊ, ಆ ಬಿಸಿಲಿನ ಆಟ ಸ್ವಾಮಿಯ ಗುಂಗುರು ತಲೆಯ ಮೇಲೂ ತೆಂಗಿನ ನಾರಿನಂತಿದ್ದ ಮಣಿಯ ಜುಟ್ಟಿನ ಮೇಲೂ ರಾಜಂನ ಮೋಟು ಕ್ರಾಪಿನ ಮೇಲೂ ಸ್ವಲ್ಪವಾದರೂ ನಡೆಯುತ್ತಿರಲಿಲ್ಲ. ಯೂರೋಪಿಯನರೆಲ್ಲರ ಪೈಕಿ ಸಂಪೂರ್ಣವಾಗಿ ನಮ್ಮ ದೇಶದ ಜೀವನಕ್ಕೆ ಒಗ್ಗಿ ಹೋಗಿದ್ದಾತನೆಂದರೆ, ಊರಾಚೆಯ ಪಾಳುಬಿದ್ದ ಬಂಗಲೆಯಲ್ಲಿ ಅಕ್ಕಿ ಮಿಷನ್ ಇಟ್ಟಿದ್ದ ಮಿ॥ ರೆಟ್ಟಿ. ಅಂದಹಾಗೆ, ಊರಿಗೆಲ್ಲ ಆತನೊಬ್ಬ ಸಮಸ್ಯಾ ಪುರುಷ. ಆತ ಯಾರು, ಎಲ್ಲಿಂದ ಬಂದ? ಎನ್ನುವುದು ಯಾರಿಗೂ ತಿಳಿಯದು. ಆತನು ಬಂದವರೊಡನೆ ಮಾತಾಡುವುದೂ ತನ್ನ ಜವಾನನನ್ನು ಬೈಯುವುದೂ ಎಲ್ಲವೂ ಅಚ್ಚ ತಮಿಳಿನಲ್ಲೇ. ಒಂದು ಷರ್ಟು, ಒಂದು ಚಡ್ಡಿ, ಕಾಲಿಗೆ ಚಪ್ಪಲಿ ಅಷ್ಟೇ ಆತನ ವೇಷ. ಅಂಥವನೂ ಕೂಡ ಒಂದು ಮಧ್ಯಾಹ್ನ ಮರೆತು ಬಿಸಿಲಿನಲ್ಲಿ ಬರಿಗಾಲಲ್ಲಿ ಒಂದೆರಡು ಹೆಜ್ಜೆಯಿಟ್ಟವನು ಕಿರ್ರೆಂದು ಕಿರಿಚಿಕೊಂಡ. ಆದರೆ ಅಂಥ ಬಿಸಿಲಿಗೆ ಕೂಡ ಈ ಮೂವರು ಪುಂಡರನ್ನು ನೆರಳಿನಲ್ಲಿ ಒಂದೇ ಕಡೆ ಎರಡು ನಿಮಿಷ ಇರಿಸುವುದು ಸಾಧ್ಯವಾಗದೆ ಹೋಗಿತ್ತು.

ಮುನಿಸಿಪಲ್ ಸರಹದ್ದಿನಿಂದ ಅರ್ಧ ಮೈಲಿ ಆಚೆ ಟ್ರಂಕ್ ರೋಡಿನ ಒಂದು ಸಣ್ಣ ಸೇತುವೆಯ ಮೇಲೆ ಅವರು ಮೂವರೂ ಕುಳಿತಿದ್ದಾರೆ. ಸೇತುವೆಯ ಕೆಳಗೆ ಹರಡಿದ ಮರಳಿನ ನಡುವೆ ಸಣ್ಣ ನೀರ ಧಾರೆ ಹರಿದುಹೋಗುತ್ತಿದೆ. ಇದು ಸ್ವಲ್ಪ ದೂರದಾಚೆ ಸರಯೂ ನದಿಯನ್ನು ಸೇರುತ್ತದೆ. ಇವರು ಕುಳಿತಿದ್ದ ಕಡೆ ಯಾವ ಮರವೂ ಇರಲಿಲ್ಲ; ಸೂರ್ಯನ ಕಿರಣ ನೇರವಾಗಿ ತಲೆಯ ಮೇಲೆ ಬೀಳುತ್ತಿತ್ತು. ರಸ್ತೆಯ ಎರಡು ಪಕ್ಕಗಳಲ್ಲಿಯೂ ಬತ್ತದ ಗದ್ದೆಗಳು. ಆದರೆ ಕೆಲವು ತಿಂಗಳ ಕೆಳಗೆ ಕಟಾವು ನಡೆದು ಭೂಮಿಯೆಲ್ಲ ಒಣಗಿ ಹೋಗಿತ್ತು. ಎಲ್ಲಿ ನೋಡಿದರೂ ಬಂಜರುಭೂಮಿ. ದೂರದಲ್ಲಿ ಅಲ್ಲೊಂದು ಇಲ್ಲೊಂದು ಮಾವಿನ ತೋಪೊ ತೆಂಗಿನ ತೋಟವೊ ಗುಂಪುಕಟ್ಟಿಕೊಂಡು ಕಣ್ಣಿಗೊಂದಷ್ಟು ಹಬ್ಬ ಮಾಡುತ್ತಿದ್ದವು. ಟ್ರಂಕ್ ರೋಡಿನಲ್ಲಿ, ಅಪರೂಪಕ್ಕೊಂದು ಸಲ ಬರುವ ಹಳ್ಳಿಯ ಬಂಡಿಯ ಹೊರತು ಜನಸಂಚಾರವೆ ಇರಲಿಲ್ಲ.

"ನಾನು ಎಷ್ಟು ಹೇಳಿದ್ದೆನೊ ಅಷ್ಟನ್ನು ಮಾತ್ರ ಮಾಡಿ, ಹೆಚ್ಚಿನ ಗೊಡವೆಗೆ ಹೋಗದಿದ್ದರೆ ಚೆನ್ನಾಗಿರುತ್ತಿತ್ತು" ಎಂದು ಮಣಿಯನ್ನು ಕುರಿತು ರಾಜಂ ಹೇಳಿದ.

ಸ್ವಾಮಿನಾಥ ದೂರಿದ. "ಹೌದು ರಾಜಂ; ನಾನು ಅವನಿಗೆ ಕೋಚ್‌ಮ್ಯಾನ್ ಮಗನ್ನ ತೋರಿಸಿಬಿಟ್ಟು ಹೊರಟು ಬಂದು ಬಿಡೋಣವೆಂದಿದ್ದೆ, ಮುಂಚೆ ನೀನು ಹೇಳಿದ್ದ ಹಾಗೆ. ಅಷ್ಟರಲ್ಲಿ ಅವನು ನನ್ನನ್ನು ಕೊಲೆಮಾಡೋದಕ್ಕೆ......" ಮಣಿಯ ಕಡೆ ರೋಷದಿಂದ ದೃಷ್ಟಿ ಬೀರಿದ.

ಎಲ್ಲರೂ ಮಣಿಯ ಕೈಬಿಟ್ಟರು. "ಲ್ರೋ, ನಾನು ಶುದ್ಧ ಪೆದ್ದು, ಒಪ್ಪಿಕೋತೇನೆ. ಆ ಸ್ಥಳದಲ್ಲಿ ನನಗೇನೋ ಹೊಳೆಯಿತು. ಹಾಗೆ ಮಾಡಿದರೆ ಎಲ್ಲಾ ಸರಿಯಾಗುತ್ತೆಂದು ಹಾಗೆ ಮಾಡಿದೆ. ಜುಗುರಿಯನ್ನ ಇನ್ನೊಂದು ಸ್ವಲ್ಪ ಬಿಗಿಯಾಗಿ ಹಿಡಿದುಕೊಂಡಿದ್ದಿದ್ದರೆ, ಸುಲಭವಾಗಿ ಅವನನ್ನ ಎಳೆದುಕೊಂಡು ಬಂದುಬಿಡಬಹುದಾಗಿತ್ತು. ಈ ವೇಳೆಗೆ ಅವನು ಗೋಳುಗುಟ್ಟುತ್ತಿರಬೇಕಾಗಿತ್ತು." ಅವನ ದನಿಯಲ್ಲಿ ಪಶ್ಚಾತ್ತಾಪದ ಸೂಚನೆಯಿತ್ತು.

ಸ್ವಾಮಿ ತನ್ನ ಕತ್ತು ಸವರಿಕೊಂಡು "ಇನ್ನೂ ನೋವಾಗುತ್ತಿದೆ ಇಲ್ಲಿ" ಎಂದ. ಕೊಳಚೆಕೇರಿಯ ಘಟನೆ ನಡೆದ ಮೇಲೆ ತನ್ನ ಜಗಳ ತಮಾಷೆಯ ಜಗಳವೆಂದು ಸ್ವಾಮಿಯನ್ನು ನಂಬಿಸಬೇಕಾದರೆ ಮಣಿಗೆ ಮೂರು ಗಂಟೆಗಳ ಹೊತ್ತು ಹಿಡಿದಿತ್ತು.

"ಅಷ್ಟೊಂದು ಒರಟು ಒರಟಾಗಿ ಇರಬಾರದಾಗಿತ್ತು, ಮಣಿ" ಎಂದ ರಾಜಂ.

ಮಣಿ ಕೈಕಟ್ಟಿಕೊಂಡು, "ಮಹಾರಾಯರೆ, ತಪ್ಪಾಯ್ತು. ನನಗೆ ಏನು ಬೇಕಾದರೂ ಶಿಕ್ಷೆ ಕೊಡಿ. ಹತ್ತು ನಿಮಿಷ ತಲೆಕೆಳಗಾಗಿ ಬೇಕಾದರೆ ನಿಂತು ಕೊಳ್ಳುತ್ತೇನೆ. ನಾನು ಸ್ವಾಮಿಯ ಎನಿಮಿಯೆಂದು ಆ ಹುಡುಗನಿಗೆ ತೋರಿಸೋಕ್ಕೆ ಸ್ವಲ್ಪ ಇವನನ್ನು ಪರಚೋ ಹಾಗೆ ಆಟ ಕಟ್ಟಿದೆ. ಅಷ್ಟಕ್ಕೇ.........."

ಯಾವುದೋ ಕಿಣಿಕಿಣಿ ಶಬ್ದ ಕೇಳಿಸಿತು. ಕಮಾನಿನ ಮೇಲೆ ಚಾಪೆ ಹೊದಿಸಿದ ಒಂಟೆತ್ತಿನ ಗಾಡಿಯೊಂದು ಬರುತ್ತಿತ್ತು. ಸೊಗಸಾದ ಬಿಳಿಯ ಎತ್ತು. ಸೇತುವೆ ಇನ್ನೊಂದು ಗಜವಿದೆಯೆನ್ನುವಷ್ಟು ಹತ್ತಿರ ಬಂದಾಗ ಮೂವರೂ ಎದ್ದು ರಸ್ತೆಗೆ ಅಡ್ಡಲಾಗಿ ಸಾಲುಗಟ್ಟಿ

ನಿಂತರು.

"ನಿಲ್ಲಿಸೋ ಗಾಡೀನ" ಎಂದು ಕೂಗಿದರು ಒಟ್ಟಿಗೆ.

ಚಿಕ್ಕ ಹಳ್ಳಿಯ ಹುಡುಗನೊಬ್ಬ ಗಾಡಿಯನ್ನು ಹೊಡೆಯುತ್ತಿದ್ದ.

"ನಿಲ್ಲಿಸೋ ಗಾಡೀನ ಮಂಕೇ" ಎಂದ ರಾಜಂ.

"ಅವನು ಗಾಡೀನ ನಿಲ್ಲಿಸದೆ ಹೋದರೆ ಅವನನ್ನ ಅರೆಸ್ಟ್ ಮಾಡಿ ಗಾಡೀನ ಮುಟ್ಟುಗೋಲು ಹಾಕಿಕೊಳ್ಳೋಣ, ಅಷ್ಟೇ." ಹೀಗೆ ಹೇಳಿದ್ದು ಸ್ವಾಮಿನಾಥನ್.

"ನನ್ನನ್ನೇಕೆ ತಡೀತೀರಪ್ಪಾ ಹುಡುಗರಾ?" ಎಂದು ಬಂಡಿಯ ಹುಡುಗ ಕೇಳಿದ.

"ಮಾತು ಕಟ್ಟಿಡು" ಎಂದು ಮಣಿ ಆಜ್ಞೆ ಮಾಡಿ, ಗಾಡಿಯ ಸುತ್ತ ಹೋಗಿ ಚಕ್ರಗಳನ್ನು ಪರೀಕ್ಷೆ ಮಾಡಿದ. ಬಗ್ಗಿ, ಗಾಡಿಯ ತಳ ಪರಿಶೀಲಿಸಿ, "ಏ ಗಾಡಿಯವನೆ, ಇಳಿ" ಎಂದ.

"ನಾನು ಹೋಗಬೇಕ್ರಪ್ಪಾ, ಹುಡುಗರಾ" ಎಂದು ಗಾಡಿಯವನು ಕೇಳಿಕೊಂಡ.

"ಯಾರನ್ನೋ ನೀನು ಹುಡುಗರು ಅನ್ನೋದು? ನಾವ್ಯಾರು ಗೊತ್ತೋ?" ಎಂದು ರಾಜಂ ಗುರುಗುಟ್ಟಿದ.

"ನಿನ್ನಂತಹ ಖದೀಮರನ್ನು ಹಿಡಿಯೋಕೆ ಬಂದಿರೋ ಗೌರ್ನಮೆಂಟ್ ಪೋಲೀಸನವರು ನಾವು, ಗೊತ್ತಾ" ಎಂದು ಸ್ವಾಮಿನಾಥನ್ ಸೇರಿಸಿದ.

"ಇನ್ನೊಂದು ಮಾತು ಹೆಚ್ಚಿಗೆ ಆಡಿದರೆ ಷೂಟ್ ಮಾಡಿಬಿಟ್ಟೇನ್" ಎಂದ ರಾಜಂ. ಬಂಡಿಯ ಹುಡುಗ ಮೊದಲು ನಂಬದೆ ಹೋದರೂ ಇವರ ಮಾತಿನಲ್ಲಿ ಏನೋ ಖರಾಮತ್ ಇರಬೇಕು ಎಂದುಕೊಂಡ.

ಮಣಿ ಒಂದು ಚಕ್ರದ ಮೇಲೆ ಬೆರಳನ್ನು ಮಿಡಿದು, "ಈ ಸೇತುವೆ ಸ್ವಲ್ಪ ವೀಕ್ ಆಗಿಹೋಗಿದೆ. ನೀನು ಪಾಸ್ ತೋರಿಸಿದ ಹೊರತು ಬಿಡೊಲ್ಲ, ಇದರ ಮೇಲೆ"ಎಂದ.

"ಸ್ವಾಮೀ, ಬಿಡಿ ಸ್ವಾಮೀ, ಹೋಗಲೇಬೇಕು" ಎಂದು ಗಾಡಿಯವನು ಅಂಗಲಾಚಿದ.

"ಮುಚ್ಕೋಬಾಯಿ" ಎಂದು ರಾಜಂ ರೇಗಿದ.

ಸ್ವಾಮಿನಾಥನ್ ಎತ್ತನ್ನು ಪರೀಕ್ಷೆ ಮಾಡಿ, "ಬಾರೋ ಇಲ್ಲಿ" ಎಂದ.

ಹುಡುಗನಿಗೆ ಇಳಿಯುವುದಕ್ಕೆ ಹಿಂದೇಟು. ಮಣಿ ಅವನನ್ನು ಬಲವಾಗಿ ಎಳೆದು ಸ್ವಾಮಿಯ ಕಡೆ ದಬ್ಬಿದ.

ಸ್ವಾಮಿನಾಥ ಅವನನ್ನು ಹೊಡೆಯುವ ಹಾಗೆ ಮುಂದೆ ಬಂದು, ಎತ್ತಿನ ಪಕ್ಕೆ ತೋರಿಸಿ, "ಏಕೋ ತೊಳೆದಿಲ್ಲ ಇದನ್ನ, ಮೂದೇವಿ" ಎಂದ.

ಹಳ್ಳಿಯ ಹುಡುಗ ಭಯಭೀತಿಗಳಿಂದ "ತೊಳೆದಿದ್ದೀನಿ, ಸ್ವಾಮಿ" ಎಂದ.

ಸ್ವಾಮಿ ಒಂದು ಬೂದು ಬಣ್ಣದ ಪಟ್ಟೆ ತೋರಿಸಿ, "ತೊಳೆದಿದ್ದರೆ ಇದ್ಯಾಕಿದೆ, ಇದು?" ಎಂದು ಕೇಳಿದ.

"ಓ! ಅದೇ, ಸ್ವಾಮೀ? ಹುಟ್ಟಿದಾಗ್ನಿಂದಲೂ ಇದೆ, ಸ್ವಾಮಿ."

"ಏನು, ಹುಟ್ಟಿದಾಗ್ನಿಂದ್ಲೂ ಇದ್ಯಾ? ನನಗೇ ಪಾಠ ಕಲಿಸೋಕೆ ಬರ್ತೀಯಾ?

ಏನಾದರೂ ಬೇಕಾ ಖರ್ಚಿಗೆ?" ಎಂದು ಸ್ವಾಮಿನಾಥ ಅಬ್ಬರ ಮಾಡಿ ಅವನನ್ನು ಒದಿಯೋಕೆ ಅಂತ ಒಂದು ಕಾಲು ಎತ್ತಿದ.

ಅಷ್ಟರಲ್ಲಿ ಅವರು ಮೂವರಿಗೂ ಆ ಹಳ್ಳಿಯ ಮುರುವನ ಮೇಲೆ ಕನಿಕರ ಹುಟ್ಟಿತು.

"ಆ ಅಯೋಗ್ಯನಿಗೆ ಒಂದು ಪಾಸು ಕೊಟ್ಟುಬಿಟ್ಟು ಆ ಕಡೆ ಸಾಗಹಾಕಿ ಬಿಡಪ್ಪ" ಎಂದ ರಾಜಂ, ಭಾರಿ ಕರುಣೆ ತೋರುವವನಂತೆ. ಸ್ವಾಮಿನಾಥನ್ ಜೇಬಿನಲ್ಲಿ ಯಾವಾಗಲೂ ಒಂದು ಪುಸ್ತಕ ಒಂದು ಪೆನ್ಸಿಲ್ ಇಟ್ಟೇ ಇರುತ್ತಿದ್ದ. ಅವನ ನಿಯಮ ಅದು. ಎಲ್ಲ ತರಹದ ವಿಷಯವನ್ನೂ ಅದರಲ್ಲಿ ಗುರ್ತು ಮಾಡಿಕೊಳ್ಳುವುದು ಅವನ ವಾಡಿಕೆ. ರಸ್ತೆಯಲ್ಲಿ ಹಾದುಹೋದ ಸೈಕಲ್ಲುಗಳ ಸಂಖ್ಯೆ, ಬರಿಗಾಲಿನಲ್ಲಿ ಹೋದವರ ಸಂಖ್ಯೆ, ಚಪ್ಪಲಿ ಬೂಟ್ಸು ಹಾಕಿಕೊಂಡವರ ಸಂಖ್ಯೆ, ಮೋಟಾರುಗಳ ಹೆಸರುಗಳು, ಇತ್ಯಾದಿ.......ಆ ಮಾಸಿದ ಪುಸ್ತಕವನ್ನೂ ಆ ಮುರುಕು ಪೆನ್ಸಿಲ್ಲನ್ನೂ ತೆಗೆದಿಟ್ಟುಕೊಂಡು ಸ್ವಾಮಿ ಸಿದ್ಧನಾದ.

ಮಣಿ ಎತ್ತಿನ ಮೂಗುದಾರ ಜಗ್ಗಿಸಿ ಹಿಡಿದುಕೊಂಡು ಗಾಡಿಯನ್ನು ಆ ಕಡೆಗೆ ತಿರುಗಿಸಿದ. ಬಂಡಿಯ ಹುಡುಗ ಬಡಕೊಂಡ. ಮಣಿ ಹೇಳಿದ :

"ಒದ್ದಾಡಬೇಡ. ಅದು ಹಾಗೇ ನಿಂತುಕೋಬೇಕು. ಇದು ಬೌಂಡರಿ, ಗೊತ್ತೋ?"

"ನಾನು ಇತ್ಲಾಕಡೆ ಹೋಗಬೇಕು, ಸ್ವಾಮೀ."

"ತಿರುಗಿ ಎತ್ತನ್ನು ತಿರುಗಿಸು, ಹೋಗು. ಯಾರು ಅಡ್ಡಿ ಮಾಡ್ತಾರೆ?"

"ನಿನ್ನ ಹೆಸರೇನು?" ಎಂದ ರಾಜಂ.

"ಕರುಪನ್, ಸ್ವಾಮಿ" ಎಂದ ಆ ಹುಡುಗ.

ಸ್ವಾಮಿನಾಥ ಗುರುತು ಮಾಡಿಕೊಂಡ.

"ವಯಸ್ಸು?"

"ನಂಗೊತ್ತಿಲ್ಲ ಸ್ವಾಮೀ."

"ಗೊತ್ತಿಲ್ವೇ?......ಸ್ವಾಮೀ, ನೂರು ಅಂತ ಬರ್ಕೊಳ್ಳೊ" ಎಂದ ರಾಜಂ.

"ಇಲ್ಲಾ ಸ್ವಾಮೀ, ನಂಗೆ ನೂರಾಗಿಲ್ಲ, ಸ್ವಾಮೀ."

"ಏ, ಹಲ್ಲು ಹಿಡಿದುಕೊಂಡು ನಿನ್ನ ಕೆಲಸ ನೀ ನೋಡಿಕೊ. ನಿನಗೆ ನೂರು ವರ್ಷಾನೇ ಆಗಿರೋದು. ಇಲ್ಲಾ ಅಂದ್ರೆ ಕೊಂದುಹಾಕಿ ಬಿಟ್ಟೇನ್, ಹುಷಾರ್. ನಿನ್ನ ಎತ್ತಿನ ಹೆಸರೇನು?"

"ಗೊತ್ತಿಲ್ಲಾ ಸ್ವಾಮಿ."

"ಸ್ವಾಮೀ, ಅದರ ಹೆಸರೂನೂ ಕರುಪನ್ ಎಂದು ಬರ್ಕೊಳ್ಳೊ."

"ಅದು ನನ್ನ ಹೆಸರು ಸ್ವಾಮೀ, ಎತ್ತಿನದಲ್ಲ."

ಯಾರೂ ಇದನ್ನು ಕಿವಿ ಮೇಲೆ ಹಾಕಿಕೊಳ್ಳಲಿಲ್ಲ. ಸ್ವಾಮಿನಾಥ ಎತ್ತಿನ ಹೆಸರೂ ಕರುಪನ್ ಎಂದು ಬರೆದುಕೊಂಡ.

"ಎಲ್ಲಿಗೆ ಹೋಗ್ತಾ ಇದೀಯ?"

"ಸೇತೂರಿಗೆ?"

ಸ್ವಾಮಿನಾಥ ಬರಕೊಂಡ.

"ಎಷ್ಟು ದಿನ ಇರ್‍ತೀಯ ಅಲ್ಲಿ?"

"ಅದೇ ಸ್ವಾಮಿ ನಮ್ಮೂರು."

"ಹಾಗಾದರೆ ಇಲ್ಲಿಗೇಕೆ ಬಂದಿದ್ದೆ?"

"ನಮ್ಮೂರು ಪಟೇಲರು ರೈಲ್‌ಷೆಡ್‌ಗೆ ಹತ್ತು ಮೂಟೆ ತೆಂಗಿನಕಾಯಿ ಹಾಕ್ಬಿಟ್ಟು ಬಾ ಅಂದಿದ್ದರು, ಸ್ವಾಮಿ."

ಸ್ವಾಮಿನಾಥ ಪ್ರತಿಯೊಂದು ಮಾತನ್ನೂ ಅವನ ನೋಟ್ ಬುಕ್‌ನಲ್ಲಿ ಗುರುತುಮಾಡಿಕೊಂಡ. ಮೂವರೂ ಆ ಹಾಳೆಯ ಮೇಲೆ ರುಜು ಮಾಡಿ, ಅದನ್ನು ಹರಿದು, ಹುಡುಗನ ಕೈಯಲ್ಲಿಟ್ಟು, ಮುಂದಕ್ಕೆ ಹೋಗಬಹುದೆಂದು ಅಪ್ಪಣೆ ಕೊಟ್ಟರು.

## ಎರಡು

ಸ್ವಾಮಿನಾಥನ ಸಂಕಟಕ್ಕೆ ಕೊನೆಯೇ ಇಲ್ಲ; ಅವರ ತಂದೆಯ ಕೋರ್ಟುಗಳು ಮೇ ತಿಂಗಳ ಎರಡನೆಯ ವಾರದಲ್ಲಿ ಮುಚ್ಚಿದ್ದವು. ಆದರಿಂದ ಮಧ್ಯಾಹ್ನದ ವೇಳೆಯನ್ನೆಲ್ಲ ತಂದೆ ಮನೆಯಲ್ಲೇ ಕಳೆಯುತ್ತಿದ್ದರು. ತನ್ನ ಮಧ್ಯಾಹ್ನ ಸಂಚಾರಗಳಿಗೆ ಸಂಚಕಾರ ಒದಗುತ್ತದೆಂದು ಸ್ವಾಮಿ ಹೆದರಿದ. ಅದೇ ರೀತಿ ಆಯಿತು.

ಅಪ್ಪನಿಗೆ ರಜ ಬಂದು ಇನ್ನೂ ಮೂರೇ ದಿನ ಕಳೆದಿದೆ. ಸ್ವಾಮಿ ಮನೆಯಿಂದ ಹೊರಡುವುದರಲ್ಲಿದ್ದಾನೆ. ಅಷ್ಟರಲ್ಲಿ ಅಪ್ಪನ ಅಬ್ಬರ ಕೇಳಿಸಿತು:

"ಸ್ವಾಮೀ, ಬಾರೋ ಇಲ್ಲಿ."

ಅಪ್ಪ ಅಂಗಳದಲ್ಲಿ ನಿಂತಿದ್ದರು. ಒಂದು ದಟ್ಟಿ, ಒಂದು ಬನೀನು ಅಷ್ಟೇ ತೊಟ್ಟಿದ್ದರು. ಮನೆಯೊಳಗಿದ್ದಾಗಲೆಲ್ಲ ಇದೇ ಡ್ರೆಸ್ಸು. ಆದರಿಂದ ಸ್ವಾಮಿಗೆ ಅದನ್ನು ಕಂಡರೆ ಕಿಡಿಕಿಡಿ. ಇಷ್ಟರಲ್ಲೇ ಅಪ್ಪ ಎಲ್ಲೂ ಹೊರಡುವಂತಿಲ್ಲ ಎನ್ನುವುದಕ್ಕೆ ಅದು ಸಂಕೇತ.

"ಎಲ್ಲಿಗೆ ಹೋಗ್ತಿದ್ದೀಯ?"

"ಎಲ್ಲೂ ಇಲ್ಲ."

"ನಿನ್ನೆ ಇಷ್ಟು ಹೊತ್ತಿನಲ್ಲಿ ಎಲ್ಲಿದ್ದೆ?"

"ಇಲ್ಲೇ."

"ಸುಳ್ಳು ಹೇಳ್ತೀಯಾ? ನಿನ್ನೆ ಇಷ್ಟು ಹೊತ್ತಿನಲ್ಲಿ ಇಲ್ಲಿರಲಿಲ್ಲ ನೀನು. ಈಗ ಎಲ್ಲಿಗೂ ಕದಲಕೂಡದು."

ಆ ವೇಳೆಗೆ ಸರಿಯಾಗಿ ಎಲ್ಲಿಂದಲೊ ಅಮ್ಮನೂ ಬಂದಳು. "ಹೂ ಹಾಗೆ ಹೇಳಿ. ಅವನು ಬಿಸಿಲಿನಲ್ಲಿ ಅಲೆಯೋದಕ್ಕೇನು ಅಡ್ಡಿಯೇ ಇಲ್ಲವೆ? ಒಂದಲ್ಲ ಒಂದು ದಿನ ಬಿಸಿಲು ತಗಲೇ ಸತ್ತುಹೋಗುತ್ತಾನೆ?" ಎಂದು ತನ್ನ ದನಿಯನ್ನೂ ಕೂಡಿಸಿದಳು.

ಅಮ್ಮನ ಪ್ರೋತ್ಸಾಹವಿಲ್ಲದಿದ್ದರೂ ಅಪ್ಪ ಸ್ವಾಮಿಯನ್ನು ತರಾಟೆಗೆ ತೆಗೆದುಕೊಳ್ಳುತ್ತಲೇ ಇದ್ದರು. ಈಗಂತೂ ಕೇಳಲೇ ಬೇಕಾಗಿಲ್ಲ. ಉರಿಯುವ ಬೆಂಕಿಗೆ ತುಪ್ಪ ಸುರಿದ ಹಾಗೆ. ಆಫೀಸ್ ರೂಮಿಗೆ ಬರುವಂತೆ ಅಪ್ಪಣೆಯಾಯಿತು ಸ್ವಾಮಿಗೆ.

ಸ್ವಾಮಿನಾಥನ್ ಪುಸ್ತಕಗಳ ಮೇಲೆ ತೆಳ್ಳಗೆ ಒಂದು ಪದರ ಧೂಳು ಕುಳಿತಿತ್ತು. ಮೇಜಿನ ಮೂಲೆಗೂ ಇವನ ಪುಸ್ತಕಗಳಿಗೂ ಸೇರಿದ್ದಂತೆ ಜಾಣ ಜೇಡ ಒಂದು ತನ್ನ ಬಲೆಯನ್ನು ಹೆಣೆದಿತ್ತು. ಧೂಳನ್ನು ಊದಿ, "ನೀನು ಪುಸ್ತಕ ಮುಟ್ಟಿ ಎಷ್ಟು ದಿನವಾಯಿತು?" ಎಂದು ಅಪ್ಪ ಕೇಳಿದರು.

ಕೊಟ್ಟ ಮಾತಿಗೆ ತಪ್ಪಿ ಹೀಗೆ ನಡೆಯುವುದುಂಟೆ ಎನ್ನಿಸಿತು ಸ್ವಾಮಿಗೆ.

"ಸ್ಕೂಲಿಲ್ಲದಾಗಲೂ ಓದಬೇಕೇ?"

"ನೀನೇನು ಬಿ.ಎ. ಪ್ಯಾಸು ಮಾಡಿಬಿಟ್ಟೆ ಅಂದುಕೊಂಡಿದ್ದೀಯೋ?"

"ಹಾಗಲ್ಲಪ್ಪ, ನಾ ಹೇಳಿದ್ದು, ಸ್ಕೂಲು ಮುಚ್ಚಿರೋವಾಗಲೂನೂ ಪರೀಕ್ಷೆ ಯಾವುದೂ ಇಲ್ಲದೆ ಇರೋವಾಗಲೂನೂ ಓದಬೇಕೇ?"

"ಅಹಹ..........ಏನು ಪ್ರಶ್ನೆ! ಹೌದೇ ಹೌದು, ಮತ್ತೆ. ಓದಲೇಬೇಕು."

"ಆದರೆ ಪರೀಕ್ಷೆಗೆ ಮುಂಚೆ ನೀವೇ ಹೇಳಿದ್ರಲ್ಲಪ್ಪ, ಪರೀಕ್ಷೆ ಆದಮೇಲೆ ಓದಬೇಕಾಗಿಲ್ಲ ಅಂತ? ರಾಜಂ ಕೂಡ ಓದೊಲ್ಲ." ಈ ಕೊನೆಯ ವಾಕ್ಯ ಸುಳ್ಳು ಎನ್ನುವುದು ಸ್ವಾಮಿಗೇ ಗೊತ್ತು. 'ವಾರಕ್ಕೆ ಮೂರು ದಿನ ಹಾಳು ಮನೇಮೇಷ್ಟ್ರು ವಕ್ರಿಸಿ ಎರಡೆರಡು ಗಂಟೆ ಹೊತ್ತು ಗೋಳುಹೊಯ್ಕೊಳ್ತಾರಲ್ಲ' ಎಂದು ರಾಜಂ ಎಷ್ಟೋ ಸಲ ಹೇಳಿಕೊಳ್ಳುತ್ತಾ ಇರಲಿಲ್ಲವೆ? ಇದೊಂದನ್ನೂ ಅಪ್ಪ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ.

"ಪುಸ್ತಕದ ಧೂಳನ್ನೆಲ್ಲ ಕೊಡವು" ಎಂದು ಅವನಿಗೆ ಹೇಳಿ ಸೊಂಟದ ಮೇಲೆ ಕೈಯಿಟ್ಟುಕೊಂಡು ಅವನ ಕೆಲಸದ ಮೇಲೆ ಉಸ್ತುವಾರಿ ಮಾಡುತ್ತ ನಿಂತಿದ್ದರು. ಸ್ವಾಮಿನಾಥ ತನ್ನ ಎದೆತುಂಬ ಉಸಿರೆಳೆದುಕೊಂಡು ಪುಸ್ತಕಗಳ ಮೇಲಿದ್ದ ಧೂಳನ್ನು ಊದಿ ಹಾರಿಸತೊಡಗಿದ. ಜೇಡರ ಹುಳುವನ್ನು ಹುಷಾರಾಗಿ ಹಿಡಿದು, ಅದನ್ನು ಎಸೆಯುವುದಕ್ಕೆಂದು ಕಿಟಕಿಯ ಹತ್ತಿರ ಹೋದ. ಕಿಟಕಿಯ ಹೊರಗೆ ಅದನ್ನು ಹಿಡಿದುಕೊಂಡು ಒಂದು ಕ್ಷಣ ಅದರ ಕಡೆಯೇ ನೋಡಿದ. ಕೈಯಿಂದ ಇಳಿಬಿದ್ದು ಆ ಜೇಡರ ಹುಳು ನೇತಾಡುತ್ತಿತ್ತು. ಆ ಎಳೆ ಹತ್ತಾರು ಬಣ್ಣಗಳಿಂದ ಮಿನುಗುತ್ತಿತ್ತು.

"ಏನೋ, ದಿನವೆಲ್ಲ ಬೇಕೇನೋ, ಜೇಡನ್ನ ಬಿಸಾಡೋಕೆ?" ಎಂದರು ಅಪ್ಪ. ಆ ಜೇಡನ್ನು ಎಸೆದುಬಿಡುವುದು ಶುದ್ಧ ಹುಚ್ಚು ಕೆಲಸ. ಅದನ್ನು ಮುದ್ದಾಡಿ ಸಾಕಿದರೆ ಚೆನ್ನ ಎಂದು ಇದ್ದಕ್ಕಿದ್ದಂತೆ ಸ್ವಾಮಿಗೆ ಹೊಳೆಯಿತು. ಮೆಲ್ಲಗೆ ಅದನ್ನು ಜೇಬಿಗಿಳಿಯಬಿಟ್ಟು, ಬರಿಗೈಯನ್ನು ಕಿಟಕಿಯಾಚೆ ಕೊಡವಿ, ತನ್ನ ಕೆಲಸಕ್ಕೆ ಹಿಂದಿರುಗಿದ.

"ನಿನ್ನ ಇಂಗ್ಲಿಷ್ ರೀಡರ್ ಇಟ್ಟುಕೊಂಡಿರೋ ರೀತಿ ನೋಡು. ನಾಚಿಕೆ ಆಗೋದಿಲ್ವೆ?" ಜಿಟ್ಟು ಬಳೆದುಕೊಂಡಿದ್ದ ಕೆಂಪು ರಟ್ಟಿನ ನಾಲ್ಕನೆಯ ರೀಡರನ್ನು ಕೈಗೆ ತೆಗೆದುಕೊಂಡು,

ಅರ್ಧಕ್ಕೆ ಬಿಚ್ಚಿ, ಧೂಳು ಹೋಗುವಂತೆ ಥಟಕ್ಕನೆ ಅದರ ರಟ್ಟೆನ್ನು ಬಡಿದ. ಆಮೇಲೆ ರಟ್ಟಿನ ಮೇಲಿನ ಜಿಡ್ಡನ್ನು ತೆಗೆಯುವುದಕ್ಕೆಂದು ಅಂಗೈಗಳಿಂದ ಅದನ್ನು ತಿಕ್ಕತೊಡಗಿದ.

"ಒಂದು ಬಟ್ಟೆ ತುಂಡು ತೊಗೊಂಬಾರಯ್ಯಾ. ಹೀಗಲ್ಲ, ಧೂಳು ಹೊಡೆಯೋದು. ಬಟ್ಟೆ ಚೂರು ತೊಗೊಂಬಾ, ಹೋಗು" ಎಂದರು ಅಪ್ಪ, ಅರ್ಧ ಕರುಣೆ, ಅರ್ಧ ಬೇಸರದಿಂದ.

ಸ್ವಾಮಿನಾಥ ಅಲ್ಲಿ ಇಲ್ಲಿ ನೋಡಿ, "ಎಲ್ಲೂ ಸಿಗಲಿಲ್ಲಪ್ಪ" ಎಂದ.

"ಒಳಗೆ ಹೋಗಿ ನೋಡು."

ಸದ್ಯ, ಸ್ವಾಮಿ ಬಯಸಿದ್ದೇ ಇದು; ಚಂಗನೆ ಓಡಿದ. ಮೊದಲು ಅಜ್ಜಿಯ ಹತ್ತಿರ ಹೋದ.

"ಅಜ್ಜಿ, ಒಂದು ಚೂರು ಬಟ್ಟೆ ಕೊಡಜ್ಜಿ, ಬೇಗ."

"ನಾನೆಲ್ಲಿಂದ ತರಲೋ ಬಟ್ಟೇ ಚೂರನ್ನ?"

"ಹಾಗಾದರೆ ನಾನೆಲ್ಲಿಂದ ತರಬೇಕು? ರಜದಲ್ಲೂ ಓದಿಕೋಬೇಕೂ ಅಂದ್ರೆ ರಜ ಅನ್ನೋದು ಯಾಕೆ ಬರಬೇಕೋ ನಾ ಬೇರೆ ಕಾಣೆ."

"ಏನು ಸಮಾಚಾರ?"

ಸ್ವಲ್ಪ ಸಹಾನುಭೂತಿ ಗಿಟ್ಟಿಸಲು ಇದೇ ಸುಸಮಯವೆಂದು ಸ್ವಾಮಿ ಕಂಡುಕೊಂಡ. "ನೋಡಜ್ಜಿ. ರಾಜಂ, ಮಣಿ ಇಬ್ಬರೂ ಅಲ್ಲಿ ಕಾದ್ಕೊಂಡಿರ್ತಾರೆ. ನಾನಿಲ್ಲಿ ಹೀಗೇನೇ ವಾಲಾಡಿಕೊಂಡು ಇದ್ಬಿಟ್ರೆ ಅವರೇನು ತಿಳಕೊಂಡಾರು?"

ಹಾಲ್‌ನ ಆಚೆಯಿಂದ ಅಪ್ಪನ ಗಂಟಲು ಕೇಳಿಸಿತು. "ಬಟ್ಟೆ ಸಿಕ್ಕಿತೇನೋ?"

ಸ್ವಾಮಿನಾಥನ್ ಗಟ್ಟಿಯಾಗಿ ಕೂಗಿಕೊಂಡ : "ಅಜ್ಜಿಯ ಹತ್ತಿರ ಇಲ್ಲವಂತೆ. ಅಮ್ಮನ ಹತ್ತಿರ ಇದೆಯೇನೋ ನೋಡ್ತೀನಿ." ಅಮ್ಮ ಬೃಂದಾವನದ ಪಕ್ಕದಲ್ಲಿ ಚಾಪೆ ಹಾಸಿಕೊಂಡು ಕುಳಿತಿದ್ದಳು. ತೊಡೆಯ ಮೇಲೆ ಮಗ. ಸ್ವಾಮಿನಾಥ ಆಕೆಯನ್ನೇ ದುರದುರನೆ ನೋಡಿದ. ತನ್ನ ಮೇಲೆ ಅಪ್ಪನ ಕೈಯಲ್ಲಿ ಚಾಡಿ ಹೇಳಿದ್ದು ಇನ್ನೂ ಅವನ ಮನಸ್ಸನ್ನು ಕೊರೆಯುತ್ತಲೇ ಇತ್ತು. "ತುಂಬಾ ದೊಡ್ಡ ಮನುಷ್ಯಳಮ್ಮ ನೀನು. ನಾನೇನು ಮಾಡಿದ್ದೆನೋ ನಿನಗೆ, ಅನ್ಯಾಯವಾಗಿ ಗೋಳು ಹೊಯ್ಕೋತೀಯಲ್ಲ?" ಎಂದ ಸಣ್ಣ ದನಿಯಲ್ಲಿ.

ಹತ್ತು ನಿಮಿಷದ ಹಿಂದೆ ಗಂಡನಿಗೆ ಏನು ಹೇಳಿದ್ದಳೆಂಬುದು ಆಕೆಗೆ ಮರೆತೇ ಹೋಗಿತ್ತು. ಆದ್ದರಿಂದ ಸ್ವಾಮಿಯ ಮೂದಲಿಕೆ ಆಕೆಗೆ ಅರ್ಥವಾಗಲಿಲ್ಲ. "ಏನಂದೆ?" ಎಂದಳು.

"ನಿನಗೇನು ಮಾಡಬಾರದ್ದು ಮಾಡಿದ್ದೀನೋ? ಸುಮ್ಮಸುಮ್ಮನೆ ನನ್ನ ಮೇಲೆ ಯಾಕೆ ದೂರು ಹೇಳಬೇಕಾಗಿತ್ತೋ?" ಎಂದ.

ಇದೇ ರೀತಿ ಮಾತಾಡಿಕೊಂಡು ಕಾಲ ತಳ್ಳಲು ಅವನಿಗೇನೋ ಇಷ್ಟವೇ. ಆದರೆ ಅಪ್ಪ ಬಟ್ಟೆಯ ಚೂರಿಗಾಗಿ ಕಾಯುತ್ತ ಇದ್ದರು.

ಆದ್ದರಿಂದ ಯಾವ ವ್ಯವಹಾರಕ್ಕಾಗಿ ಬಂದಿದ್ದನೋ ಅದರ ಮಾತೆತ್ತಿದ. "ನನಗೊಂದು ಚೂರು ಬಟ್ಟೆ ಕೊಡ್ತೀಯಾಮ್ಮಾ?" ಎಂದ.

"ಯಾವ ಬಟ್ಟೆ?"

"ಯಾವ ಬಟ್ಟೆ? ನನಗೇನು ಗೊತ್ತು? ಮನೇ ದೂಳೆಲ್ಲ ಹೊಡೀಬೇಕಂತೆ. ಪುಸ್ತಕಾನೆಲ್ಲ ಸರಿಯಾಗಿ ಇಟ್ಕೋಬೇಕಂತೆ..... ಹೀಗೇ ಕಳೀಬೇಕು ರಜಾನ!"

"ಯಾವ ಬಟ್ಟೇನೂ ಇಲ್ಲ ಈಗ."

"ಯಾವುದೂ ಇಲ್ಲವಾ? ಊಹೂ?" ಸುತ್ತಮುತ್ತ ನೋಡಿದ. ಮಗುವಿನ ಬೆನ್ನ ಕೆಳಗೊಂದು ಬಟ್ಟೆಯಿತ್ತು. ಮಿಂಚು ಹೊಳೆಯುವಷ್ಟರಲ್ಲಿ ಮುಂದೆ ಬಗ್ಗಿ, ಮಗುವನ್ನು ಉರುಳಿಸಿ, ಬಟ್ಟೆಯನ್ನು ಎಳೆದುಕೊಂಡು ಓಡಿಯೇ ಹೋಗಿಬಿಟ್ಟ. ತನ್ನ ಸಕಲ ಕಷ್ಟಗಳಿಗೂ ಅಮ್ಮನೇ ಕಾರಣ ಎಂದು ಅವನ ಸಿದ್ಧಾಂತ. ಮಗುವಿಗೆ ತೊಂದರೆ ಕೊಟ್ಟು ಅದರ ಬಟ್ಟೆ ಕಸಿದುಕೊಂಡು ಅಮ್ಮನಿಗೆ ಪ್ರತೀಕಾರ ಮಾಡಿದ್ದರಿಂದ ಅವನ ಮನಸ್ಸಿಗೆ ಬಹಳ ಸಮಾಧಾನವಾಯಿತು. ಅದ್ಭುತ ತೃಪ್ತಿಯಿಂದ ಮೇಜನ್ನು ಮಗುಚಿ, ಅದರ ಮೇಲಿದ್ದ ಸಾಮಾನನ್ನೆಲ್ಲ ನೆಲದ ಮೇಲೆ ಕೆಡವಿ, ಒಂದೊಂದಾಗಿ ಎತ್ತಿ ಮೇಜಿನ ಮೇಲೆ ಕುಕ್ಕಿದ. ಅಪ್ಪ ಇವನ ಕೆಲಸವನ್ನೇ ನೋಡುತ್ತಿದ್ದರು. "ಹೀಗೇನೇನೋ ನೀನು ಸಾಮಾನೆಲ್ಲ ಇಟ್ಕೊಳ್ಳೋದು? ಪರವಾ ಇಲ್ಲ. ಬಹಳ ಜಾಣ. ಭಾರವಾದ್ದೆಲ್ಲ ಮೇಲುಗಡೆ, ಹಗುರವಾದ್ದೆಲ್ಲ ಕೆಳಗಡೆ. ಭೇಷ್! ತೆಗೀ ಆ ನೋಟುಬುಕ್ಕುಗಳ್ನ. ಅಟ್ಲಾಸ್‌ನ ಕೆಳಗಿಡು" ಎಂದು ಕೂಗಿದರು. ಆ ವೇಳೆಗೆ ಮಗುವನ್ನು ಎತ್ತಿಕೊಂಡು ಅಮ್ಮ ಬಂದಳು. "ನೋಡಿ, ಅವನ ಘಾತಕತನಾನ. ಮಗುವಿನ ಕೆಳಗೆ ಹಾಕಿದ್ದ ಬಟ್ಟೇನ ಎಳಕೊಂಡು ಹೋಗಿದಾನೆ. ಈ ಮನೇಲಿ ಅವನ್ನ ಹೇಳೋರು ಕೇಳೋರು ಯಾರೂ ಇಲ್ಲವೆ? ಈ ಹಾಳು ಸ್ಕೂಲು ಇನ್ನೂ ಎಷ್ಟು ದಿನ ಮುಚ್ಚಿರುತ್ತೋ?" ಎಂದಳು. ಸ್ವಾಮಿ ವಿಪರೀತ ಆಸ್ಥೆಯಿಂದ ತನ್ನ ಕೆಲಸವನ್ನು ಮುಂದುವರಿಸುತ್ತಿದ್ದ. ಅದೇನು ತೋರಿತೋ, ಅಮ್ಮನ ಮಾತನ್ನು ಅಪ್ಪ ಕಿವಿಯ ಮೇಲೇ ಹಾಕಿಕೊಳ್ಳಲಿಲ್ಲ; ನಿದ್ದೆ ಹೋಗುತ್ತಿದ್ದ ಮಗುವಿನ ಕೆನ್ನೆ ಜಿಗುಟಿ ಸುಮ್ಮನಾದರು. ಇದರಿಂದ ಅಮ್ಮ ಮತ್ತಷ್ಟು ಮುನಿಸಿಕೊಂಡು ಹೊರಟುಹೋದಳು.

ಇದಾಗಿ ಅರ್ಧ ಗಂಟೆ ಕಳೆದಿದೆ. ತಂದೆಯ ಕೋಣೆಯಲ್ಲಿ ಒಂದು ಕುರ್ಚಿಯ ಮೇಲೆ ಕುಳಿತು ಕೈಯಲ್ಲಿ ಸ್ಲೇಟು ಬಳಪಗಳನ್ನು ಹಿಡಿದು ಸಿದ್ಧವಾಗಿದ್ದಾನೆ, ಸ್ವಾಮಿ. ಅಪ್ಪ ಗಣಿತದ ಪುಸ್ತಕವನ್ನು ತೆರೆದಿಟ್ಟುಕೊಂಡು ಲೆಕ್ಕವನ್ನು ಓದಿ ಹೇಳುತ್ತಿದ್ದಾರೆ. ಸ್ವಾಮಿ ಬರೆದುಕೊಳ್ಳುತ್ತಿದ್ದಾನೆ. ರಾಮನ ಹತ್ತಿರ ಹತ್ತು ಮಾವಿನ ಹಣ್ಣುಗಳಿವೆ. ಅವನ್ನು ಮಾರಿ ಹದಿನೈದು ಆಣೆಗಳನ್ನು ಸಂಪಾದಿಸಬೇಕೆಂದು ಅವನು ಅಪೇಕ್ಷಿಸುತ್ತಾನೆ. ಕೃಷ್ಣನಿಗೆ ನಾಲ್ಕೇ ಮಾವಿನ ಹಣ್ಣುಗಳು ಸಾಕು. ಹಾಗಾದರೆ ಕೃಷ್ಣನು ಎಷ್ಟು ಕೊಡಬೇಕಾಗುತ್ತದೆ?

ಸ್ವಾಮಿನಾಥ ಲೆಕ್ಕದ ಕಡೆಯೇ ನೋಡುತ್ತ ಕುಳಿತ. ಒಂದೊಂದು ಸಲ ಓದಿದಾಗಲೂ ಅದು ಹೊಸ ಹೊಸ ಅರ್ಥ ತಾಳುತ್ತಿತ್ತು. ಯಾವುದೋ ಭೀಕರ ತೊಡಕಿನಲ್ಲಿ ಸಿಕ್ಕುಬಿದ್ದ ಭಾವನೆ ಉಂಟಾಯಿತು ಅವನಿಗೆ.

ಮಾವಿನ ಹಣ್ಣುಗಳ ಹೆಸರು ಕೇಳಿ ಅವನ ಬಾಯಲ್ಲಿ ನೀರೂರಿತು. ಹತ್ತು ಮಾವಿನ ಹಣ್ಣುಗಳ ಬೆಲೆ ಹದಿನೈದೇ ಆಣೆಗಳೆಂದು ರಾಮನು ಏಕೆ ನಿಗದಿ ಮಾಡಿದ ಎಂಬುದು ಅವನಿಗೆ ತೋರದೆ ಹೋಯಿತು. ರಾಮ ಎಂಥವನಿದ್ದಿರಬೇಕು? ಸುಮಾರು ಶಂಕರನ ಹಾಗಿದ್ದಿರಬಹುದು. ಆ ಹತ್ತು ಮಾವಿನ ಹಣ್ಣುಗಳು, ಅದನ್ನು ಹದಿನೈದೇ ಆಣೆಗಳಿಗೆ ಮಾರಬೇಕೆಂಬ ದೃಢತೆ, ಅವನ ಲೆಕ್ಕಾಚಾರ-ಇವನ್ನೆಲ್ಲ ಯೋಚಿಸಿದರೆ ಅವನು ಶಂಕರನ ಹಾಗೆ ಇದ್ದೇ ತೀರಬೇಕು. ರಾಮ ಶಂಕರನ ಹಾಗಿದ್ದರೆ, ಕೃಷ್ಣ ಬಟಾಣಿಯ ಹಾಗಿದ್ದಿರಬೇಕು. ಇದ್ದಕ್ಕಿದ್ದಂತೆ ಕೃಷ್ಣನ ಬಗ್ಗೆ ಸ್ವಾಮಿಗೆ ಮರುಕವುಂಟಾಯಿತು. ಏಕೆ ಎಂಬುದೇ ಅವನಿಗೆ ತಿಳಿಯದು.

ಅಪ್ಪ ಪೇಪರ್ ಓದುತ್ತ ಇದ್ದವರು ಇಣಿಕೆ ನೋಡಿ. "ಲೆಕ್ಕ ಮಾಡಿ ಮುಗೀತೇನೋ?" ಎಂದರು.

"ಅಪ್ಪ, ಆ ಮಾವಿನ ಹಣ್ಣುಗಳು ಚೆನ್ನಾಗಿ ಮಾಗಿದ್ದುವೇನಪ್ಪ?"

ಅಪ್ಪ ಕಷ್ಟಪಟ್ಟು ನಗುವನ್ನು ತಡೆದುಕೊಂಡು, "ಮೊದಲು ಲೆಕ್ಕ ಮಾಡು. ಹಣ್ಣು ಕಳಿತಿತ್ತೋ, ಕಾಯಿಮೇಲಿತ್ತೋ ಆಮೇಲೆ ಹೇಳ್ತೀನಿ."

ಸ್ವಾಮಿನಾಥನಿಗೆ ದಿಕ್ಕು ತೋಚಲಿಲ್ಲ. ರಾಮನು ಹಣ್ಣು ಮಾರುತ್ತಿದ್ದನೋ ಕಾಯಿ ಮಾರುತ್ತಿದ್ದನೋ ಎನ್ನುವುದನ್ನು ಅಪ್ಪ ಈಗಲೆ ಹೇಳಿದ್ದರೆ! ಆಮೇಲೆ ಹೇಳಿ ಏನು ಪ್ರಯೋಜನ? ಆ ಪ್ರಶ್ನೆಯ ಜವಾಬಿನ ಮೇಲೆ ಇಡೀ ಲೆಕ್ಕದ ಉತ್ತರ ನಿಂತಿದೆ ಎಂದು ಅವನಿಗೆ ತೋರಿತು. ಕಳಿತಿಲ್ಲದ ಹತ್ತು ಮಾವಿನ ಹಣ್ಣುಗಳಿಗೆ ರಾಮನು ಹದಿನೈದಾಣೆ ವಸೂಲು ಮಾಡುವುದು ತೀರ ಅನ್ಯಾಯವಲ್ಲವೆ? ಒಂದು ಪಕ್ಷ ಹಾಗೆ ಮಾಡಿದರೂ ಮಾಡಬಹುದು-ರಾಮನ ಗುಣವೇ ಹಾಗಲ್ಲವೆ? ಆ ರಾಮನ್ನ ಕಂಡರೆ ಸ್ವಾಮಿನಾಥನಿಗೆ ತುಂಬ ದ್ವೇಷ ಬಂದು ಹೋಯಿತು. ದುಷ್ಟ ಗುಣಗಳೆಲ್ಲ ರಾಮನಲ್ಲಿ ಮನೆಮಾಡಿರಬೇಕೆಂದು ಸ್ವಾಮಿನಾಥ ತೀರ್ಮಾನಿಸಿಬಿಟ್ಟಿದ್ದ.

"ಅಪ್ಪ, ನನ್ನ ಕೈಲಿ ಈ ಲೆಕ್ಕ ಮಾಡೋಕೆ ಆಗೋದಿಲ್ಲ" ಎಂದು ಸ್ಲೇಟನ್ನು ಕೆಳಗಿಟ್ಟುಬಿಟ್ಟ.

"ಏನೋ ಹೀಗಂತಿ? ಏನಾಗಿದೆಯೋ ನಿನಗೆ ಧಾಡಿ? ತ್ರೈರಾಶಿಯಲ್ಲಿ ಸಾಧಾರಣವಾದ ಲೆಕ್ಕ ಮಾಡೋಕೆ ಬರೋಲ್ವೆ?"

"ನಮ್ಮ ಸ್ಕೂಲಿನಲ್ಲಿ ಅದೆಲ್ಲ ಹೇಳಿಕೊಟ್ಟಿಲ್ಲ, ಅಪ್ಪ."

"ಆ ಸ್ಲೇಟು ತಾ ಇಲ್ಲಿ. ನಿನ್ನ ಕೈಯಲ್ಲೇ ಉತ್ತರ ಹೇಳಿಸ್ತೀನಿ" ಎಂದರು ಅಪ್ಪ. ಈ ಅದ್ಭುತ ಹೇಗಾದೀತೋ ಎಂದು ಸ್ವಾಮಿ ಕುತೂಹಲದಿಂದ ಕಾದು ನೋಡುತ್ತಿದ್ದ. ಅಪ್ಪ ಒಂದು ಕ್ಷಣ ಲೆಕ್ಕದ ಕಡೆ ನೋಡಿ, "ಹತ್ತು ಮಾವಿನ ಹಣ್ಣಿನ ಬೆಲೆಯೇನು?" ಎಂದು ಪ್ರಶ್ನಿಸಿದರು.

ಲೆಕ್ಕದ ಯಾವ ಭಾಗದಲ್ಲಿ ಈ ಪ್ರಶ್ನೆಗೆ ಉತ್ತರವಿದೆಯೆಂಬುದನ್ನು ಸ್ವಾಮಿ ಹುಡುಕಿ ಹುಡುಕಿ ನೋಡಿ, "ಗೊತ್ತಿಲ್ಲಾಪ್ಪ" ಎಂದ.

"ಅಬ್ಬ. ನಿನ್ನಂಥಾ ದಡ್ಡನ್ನ ನಾನು ಇದು ತನಕ ನೋಡಿಲ್ಲ ಕಾಣೊ. ಎಲ್ಲಿ, ಲೆಕ್ಕ ಓದು. ಹತ್ತು ಮಾವಿನ ಹಣ್ಣನ್ನು ಮಾರಿದರೆ ರಾಮನಿಗೆ ಎಷ್ಟು ದುಡ್ಡು ಬರಬೇಕು?"

ಹದಿನೈದಾಣೆ ಎಂದು ಸಾಮಿಗೇನೋ ಗೊತ್ತು. ಆದರೆ ಹತ್ತು ಹಣ್ಣುಗಳಿಗೆ ಅಷ್ಟು ಬೆಲೆ ಸರಿಯೆ? ದುರಾಶೆಯಿಂದ ರಾಮ ಅಷ್ಟು ಬೇಕೆಂದು ಅಪೇಕ್ಷಿಸಬಹುದು. ಆದರೆ ಅದು ಸರಿಯಾದ ಬೆಲೆಯೆ? ಇಷ್ಟರ ಮೇಲೆ ಇನ್ನೂ ಒಂದು ಮುಖ್ಯವಾದ ಪ್ರಶ್ನೆ ಇದೆ. ಆ ಹಣ್ಣುಗಳು ಕಳಿತಿದ್ದವೋ ಇಲ್ಲವೋ-ಎಂಬುದು. ಅವು ಚೆನ್ನಾಗಿ ಹಣ್ಣಾಗಿದ್ದರೇನೋ ಹದಿನೈದಾಣೆ ಕೊಡಬಹುದು. ದುಬಾರಿಯಲ್ಲ......ಇದನ್ನೆಲ್ಲ ಬಿಚ್ಚಿ ಹೇಳಿದರೆ ಅಪ್ಪನ ಗಂಟೇನು ಹೋಗುತ್ತೆ?

"ಆ ಮಾವಿನ ಹಣ್ಣುಗಳಿಂದ ರಾಮನಿಗೆ ಹದಿನೈದಾಣೆ ಬರಬೇಕು" ಎಂದು ಅರೆಮನಸ್ಸಿನಿಂದ ಹೇಳಿದ.

"ಗುಡ್. ಕೃಷ್ಣನಿಗೆ ಎಷ್ಟು ಮಾವಿನ ಹಣ್ಣು ಬೇಕು?"

"ನಾಲ್ಕು."

ತನಗೆ ಕಿರುಕುಳ ಕೊಡುವುದರಲ್ಲೇ ಅಪ್ಪನಿಗೆ ಏನೋ ಆನಂದ. ನಾಲ್ಕಕ್ಕೆಷ್ಟು ಎಂದು ತನಗೆ ಹೇಗೆ ಗೊತ್ತಾಗಬೇಕು? ಆ ಪೆದ್ದ ಕೃಷ್ಣ ಎಷ್ಟು ಕೊಡುತ್ತಾನೋ ಏನೊ?

"ನೋಡೊ ಇಲ್ಲಿ, ಸ್ವಾಮಿ. ನಿನ್ನನ್ನು ಚೆನ್ನಾಗಿ ತದಕಿಬಿಡೋಣ ಎನ್ನಿಸ್ತಾ ಇದೆ. ನಿನ್ನ ತಲೇಲಿ ಏನಿದೆಯೊ? ಹತ್ತು ಮಾವಿನ ಹಣ್ಣುಗಳಿಗೆ ಹದಿನೈದಾಣೆಯಾದರೆ ಒಂದಕ್ಕೆಷ್ಟೊ? ಹೂ, ಹೇಳು. ಹೇಳದೆ ಹೋದರೆ-" ಅಪ್ಪನ ಕೈ ಸ್ವಾಮಿನಾಥನ ಕಿವಿಯನ್ನು ಮೆಲ್ಲಗೆ ತಿರಚಿತು. ಈ ಲೆಕ್ಕವೇನು ಕೂಡುವುದೋ ಕಳೆಯುವುದೋ ಗುಣಾಕಾರವೋ ಭಾಗಾಕಾರವೋ ಒಂದೂ ತಿಳಿಯದೆ ಹೋದುದರಿಂದ ಸ್ವಾಮಿ ಬಾಯಿ ಬಿಡುವಂತೆಯೆ ಇರಲಿಲ್ಲ. ಇವನು ಎಷ್ಟು ಸುಮ್ಮನಿದ್ದನೋ ಕಿವಿಯ ನುಲಿತ ಅಷ್ಟೂ ಅಷ್ಟು ಬಲವಾಯಿತು. ಅಪ್ಪನಿಗೆ ರೇಗಿತು. ಸ್ವಾಮಿಯ ಉತ್ತರಕ್ಕಾಗಿ ಕಾದಿದ್ದರು. ಸ್ವಾಮಿ ಅಯ್ಯೋ ಎಂದು ಕಿರಚಿದ. ಬೇರೆ ಯಾವ ಉತ್ತರವೂ ಬರಲಿಲ್ಲ. "ಹತ್ತಕ್ಕೆ ಹದಿನೈದಾಣೆ ಆದರೆ ಒಂದಕ್ಕೆಷ್ಟೆಂತ ಹೇಳೋತನಕ ನಾನು ನಿನ್ನ ಕಿವಿಯನ್ನು ಬಿಡೋದಿಲ್ಲ." ಅಪ್ಪನಿಗೆ ಏನು ಬಂದುಬಿಟ್ಟಿದೆಯೋ? ಸ್ವಾಮಿನಾಥ ಬೆಪ್ಪುಬೆಪ್ಪಾಗಿ ಕಣ್ಣು ಬಿಟ್ಟುಕೊಂಡು ಕುಳಿತಿದ್ದ. ಆದರೆ ಬೆಲೆ ತಿಳಿಯುವ ಜರೂರಾದರೂ ಏನಿದೆ? ಅಪ್ಪನಿಗೆ ಅದು ತಿಳಿಯಲೇ ಬೇಕು ಅಂತ ಇದ್ದರೆ ಮಾರ್ಕೆಟ್ಟಿಗೆ ಹೋಗಿ ತಿಳಿದುಕೊಂಡು ಬರಲಿ. ಜೀವ ಏಕೆ ಹಿಂಡಬೇಕು? ಈ ರಾಮರು, ಈ ಕೃಷ್ಣರು - ಕೊನೆ ಮೊದಲಿಲ್ಲದ ಅದರ ವ್ಯಾಪಾರಿಗಳು, ಅವರ ಮಾವಿನ ಹಣ್ಣುಗಳು, ಅವರ ಚಿಲ್ಲರೆ ಲೆಕ್ಕಾಚಾರಗಳು ಎಲ್ಲ ಹಾಳಾಗಲಿ ಎಂದು ಸ್ವಾಮಿ ಮನಸಾರೆ ಶಪಿಸಿದ.

ಅಪ್ಪನೇ ಸೋಲಬೇಕಾಯಿತು. ತಾವೇ ಹೇಳಿದರು ಕೊನೆಗೆ : "ಒಂದು ಮಾವಿನ ಹಣ್ಣಿಗೆ ಹದಿನೈದು ಓವರ್ ಹತ್ತು ಆಣೆ. ಅದನ್ನು ಸುಲಭರೂಪಕ್ಕೆ ತಾ."

ಅಯ್ಯೋ, ಅಂಕಗಣಿತದಲ್ಲೆಲ್ಲ ಅತ್ಯಂತ ಕಷ್ಟವಾದ ಭಿನ್ನರಾಶಿಗಳು ಬಂದುಬಿಟ್ಟಿತಲ್ಲಪ್ಪ ಎಂದು ಸ್ವಾಮಿಯ ಗೋಳು ಇಮ್ಮಡಿಯಾಯಿತು. "ಅಪ್ಪ, ಸ್ಲೇಟು ಕೊಡೀಪ್ಪಾ. ಕಂಡು

ಹಿಡೀತೀನಿ" ಎಂದ. ಹದಿನೈದು ನಿಮಿಷಗಳು ಒಂದೇ ಮನಸ್ಸಿನಿಂದ ದುಡಿದು, "ಒಂದು ಮಾವಿನ ಹಣ್ಣಿಗೆ ಮೂರು ಓವರ್ ಎರಡಾಣೆ ಅಪ್ಪ" ಎಂದ. ಅಲ್ಲವೆಂದು ಅಪ್ಪ ಖಂಡಿತವಾಗಿ ಹೇಳಿಬಿಡುತ್ತಾರೆಂದು ಅವನ ನಿರೀಕ್ಷಣೆ. ಆದರೆ ಅಪ್ಪ "ಭೇಷ್! ಇನ್ನೂ ಸುಲಭ ರೂಪದಲ್ಲಿಡು" ಎಂದುಬಿಟ್ಟರು....... ಇದಾದ ಮೇಲೆ ಅಷ್ಟು ಕಷ್ಟವಾಗಲಿಲ್ಲ, ಇನ್ನರ್ಧ ಗಂಟೆ ಸಂಕಟಪಟ್ಟ ಮೇಲೆ "ಕೃಷ್ಣ ಆರಾಣೆ ಕೊಡಬೇಕು" ಎಂದು ಗದ್ಗದ ಗಂಟಲಿಂದ ಹೇಳಿದ. ಪಳಕ್ಕನೆ ಕಣ್ಣಿಂದ ನೀರು ಹರಿಯತೊಡಗಿತು.

## ಮೂರು

ಸಂಜೆ ಐದು ಗಂಟೆ. ಕ್ಲಬ್ಬಿಗೆ ಹೊರಡುವ ಸಮಯ. ಸ್ವಾಮಿನಾಥನ ತಂದೆಗೆ ಮಧ್ಯಾಹ್ನವೆಲ್ಲ ಮಗನನ್ನು ಪೀಡಿಸಿದೆನಲ್ಲಾ ಎಂದು ಪಶ್ಚಾತ್ತಾಪ ಹುಟ್ಟಿತು. ಪ್ರಾಯಶ್ಚಿತ್ತವೂ ಆಗಬೇಕಲ್ಲ ಇನ್ನು? ಕಂಬದ ಮರೆಯಲ್ಲಿ ಜೋಲುಮೋರೆ ಹಾಕಿಕೊಂಡು ಸ್ವಾಮಿ ನಿಂತಿದ್ದ. ಅಪ್ಪ ಅವನನ್ನು ಕರೆದು, "ನನ್ನ ಜೊತೇಲಿ ಕ್ಲಬ್ಬಿಗೆ ಬರ್‍ತೀಯೇನೋ ಮಗೂ?" ಎಂದರು. ಸ್ವಾಮಿ ಒಂದು ನಿಮಿಷ ಮಾಯವಾಗಿ, ಮರು ನಿಮಿಷ ಟೋಪಿ ಕೋಟುಗಳೊಡನೆ ಪ್ರತ್ಯಕ್ಷನಾದ. ಅವನನ್ನು ಆಪಾದಮಸ್ತಕವಾಗಿ ಪರಿಶೀಲಿಸಿ ಅಪ್ಪ ಅಂದರು : "ಇನ್ನೊಂದು ಸ್ವಲ್ಪ ನೀಟಾಗಿರಬಾರದೇನೋ?" ಸ್ವಾಮಿನಾಥ ಮುಖ ಸೊಟ್ಟಗೆ ಮಾಡಿದ.

"ಲಕ್ಷ್ಮೀ" ಅಂತ ಹೆಂಡತೀನ ಕೂಗಿ ಕರೆದರು. ಅಮ್ಮ ಬಂದಳು. "ಈ ಹುಡುಗನಿಗೆ ಬೇರೆ ಒಳ್ಳೆಯ ಬಟ್ಟೆ ಇರಬೇಕು ಪೆಟ್ಟಿಗೇಲಿ. ನೋಡಿ ಅಗಸರ ಬಟ್ಟೆ ತೆಕ್ಕೊಡು" ಅಂದರು ಅಪ್ಪ.

"ಅಯ್ಯೋ ಹೋಗೀಂದ್ರೆ, ಈಗ ಹಾಕ್ಕೊಂಡಿರೋ ಬಟ್ಟೆಗೇನಾಗಿದೆ? ಪೆಟ್ಟಿಗೆ ಯಾರು ತೆಗೆಯೋರು? ಬೀಗದ ಕೈ ಎಲ್ಲಿ ಬಿದ್ದಿದೆಯೋ?...... ಈಗ ತಾನೇ ಮಗೂಗೆ ಹಾಲು ಬೆರಸಿ ಇಟ್ಟು ಬಂದಿದ್ದೀನಿ-" ಎಂದಳು ಅಮ್ಮ.

"ಏನಾಯಿತು ಅವನ ಬಟ್ಟೆಯೆಲ್ಲ?"

"ಯಾವ ಬಟ್ಟೆಯೂ ಕಾಣೆ. ಹೋದ ವರ್ಷದ ಯುಗಾದಿಯಿಂದ ಅವನಿಗೆ ಒಂದಂಗುಲ ಕೂಡ ಬಟ್ಟೆ ತಂದಿಲ್ಲ."

"ಇದೇನು ಹೀಗಂತೀಯೆ?" ಮೂರು ನಾಲ್ಕು ತಿಂಗಳ ಹಿಂದೆ ತಂದೆನಲ್ಲೇ ಒಂದು ಟ್ವಿಲ್ ಬಟ್ಟೆ ಥಾನು, ಏನಾಯಿತೇ ಅದು?" ಎಂದು ಹೇಳಿ, ಬುಧವಾರದ ಸಾಯಂಕಾಲ ಹುಡುಗನನ್ನು ದರ್ಜಿ ಅಂಗಡಿಗೆ ಕರೆದುಕೊಂಡು ಹೋಗಬೇಕೆಂದು ಮನಸ್ಸಿನಲ್ಲೇ ಗುರುತು ಮಾಡಿಕೊಂಡರು. ಅಮ್ಮ ಬೇರೆ ಬಟ್ಟೆ ತಂದುಕೊಡದೆ ಹೋದದ್ದೆ ಒಳ್ಳೆಯದಾಯಿತು ಅನಿಸಿತು ಸ್ವಾಮಿಗೆ. ಬೇರೆ ಬಟ್ಟೆ ಹಾಕಿಕೊಳ್ಳುವುದಕ್ಕೆ ಒಳಗೆ ಹೋದರೆ ಅಪ್ಪ ಎಲ್ಲಿ ಬಿಟ್ಟು ಹೊರಟುಹೋಗುತ್ತಾರೋ ಎಂದು ಭಯ ಬೇರೆ.

ಮನೆಯ ಮುಂದೆ ಒಂದು ಮೋಟಾರು ಹಾರನ್ ಸದ್ದಾಯಿತು. ಅಪ್ಪ ಟೇಬಲ್

ಮೇಲಿದ್ದ ಟೆನ್ನಿಸ್ ಬ್ಯಾಟನ್ನು ಬಾಚಿಕೊಂಡು ಓಡಿದರು ಬಾಗಿಲ ಹತ್ತಿರಕ್ಕೆ. ಸ್ವಾಮಿನಾಥನ್ ಹಿಂದೆಯೇ ಓಡಿದ. ಬ್ಲೇಜರ್ ಕೋಟ್ ಹಾಕಿದ ದೊಡ್ಡವರೊಬ್ಬರು ಡ್ರೈವ್ ಮಾಡ್ತಾ ಇದ್ದರು. ಅವರ ಕೋಟನ್ನು ಕಂಡು ಸ್ವಾಮಿಗೆ ತುಂಬ ಮೆಚ್ಚಿಗೆಯಾಯಿತು. ಆತ ದೊಡ್ಡದಾಗಿ ಹಲ್ಲು ಬಿಟ್ಟು, "ಹಲೋ ಶ್ರೀನಿವಾಸನ್, ಗುಡ್ ಈವಿನಿಂಗ್" ಎಂದರು.



ತನ್ನನ್ನು ಕಾರ್‌ನಲ್ಲಿ ಕೂರಿಸಿಕೊಳ್ಳಲು ಅವರು ಒಪ್ಪದೆ ಹೋಗಬಹುದೆಂದು ಸ್ವಾಮಿಗೆ ಬಹಳ ಭಯವಾಯಿತು. ಆದರೆ ಆತ ಬಹಳ ನಯವಾಗಿ, "ಏನು ಶ್ರೀನಿವಾಸನ್, ನಿಮ್ಮ ಮಗನ್ನ ಕ್ಲಬ್ಬಿಗೆ ಕರಕೊಂಡು ಬರ್‍ತೀರಾ? ರೈಟೋ!" ಎಂದರು. ಸ್ವಾಮಿಯ ಸಂಶಯಗಳೆಲ್ಲ ನಿವಾರಣೆಯಾದವು. ಅಪ್ಪ ತಮ್ಮ ಸ್ನೇಹಿತರ ಜತೆಯಲ್ಲಿ ಮುಂದಿನ ಸೀಟಿನಲ್ಲಿ ಕೂತರು. ಸ್ವಾಮಿಯೊಬ್ಬನೇ ಹಿಂದಿನ ಸೀಟಿನಲ್ಲಿ ಕೂತ.

ಜುಯ್ಯೆಂದು ಮುಂದೆ ಹೊರಟಿತು ಕಾರು. ಸ್ವಾಮಿಯ ಖುಷಿಯೇ ಖುಷಿ. ಯಾರಾದರೂ ತನ್ನ ಸ್ನೇಹಿತರು ಆಗ ತನ್ನನ್ನು ನೋಡಿದರೆ..... ಯಾವುದೋ ಒಂದು ಗೇಟಿನಲ್ಲಿ ನುಸಿದು, ಇನ್ನೈದಾರು ಕಾರುಗಳ ನಡುವೆ ನಿಂತಿತು ಇವರ ಕಾರು.

ಅಪ್ಪ ಟೆನ್ನಿಸ್ ಆಡುವುದನ್ನೇ ಸ್ವಾಮಿ ನೋಡುತ್ತಿದ್ದ. ಪಕ್ಕಪಕ್ಕದಲ್ಲೇ ಇದ್ದ ಆ ಮೂರು ಕೋರ್ಟುಗಳಲ್ಲಿ ಆಡುತ್ತ ಇದ್ದ ಎಲ್ಲರ ಪೈಕಿ ಅಪ್ಪನೇ ಗಟ್ಟಿಗ ಎಂದು ಅವನಿಗೆ ತೋರಿತು. ಅಪ್ಪ ಯಾವಾಗ ಚೆಂಡು ಹೊಡೆಯಲಿ ಎದುರು ಕಡೆಯವರಿಗೆ ಅದನ್ನು ತಡೆಯುವುದಕ್ಕೇ ಆಗುತ್ತಿರಲಿಲ್ಲ. ಬಿಟ್ಟೇ ಬಿಡುವರು. ಪ್ರತಿಸಲವೂ ಚೆಂಡು ಹೋಗಿ ಹಿಂದುಗಡೆಯಿದ್ದ ತಡಿಕೆಗೇ ತಗಲುತ್ತಿತ್ತು. ಅಷ್ಟೇ ಅಲ್ಲ, ಚೆಂಡು ಎತ್ತಿಕೊಡುವ ಹುಡುಗರ ಜೀವನ ತುಂಬಾ ಅಪಾಯಕರವಾದುದು ಎನ್ನುವದನ್ನೂ ಸ್ವಾಮಿ ಕಂಡುಹಿಡಿದುಕೊಂಡ.

ಸ್ವಾಮಿನಾಥ ಸೌಖ್ಯದ ಸ್ವರ್ಗದಲ್ಲಿದ್ದ. ಅಲ್ಲಿದ್ದು ಆಟ ನೋಡುವ ಅವಕಾಶ ದೊರೆತಿರುವುದೇ ಅವನ ಬಗ್ಗೆ ಮಿಕ್ಕವರಿಗಿದ್ದ ಗೌರವದ ಸೂಚನೆಯಲ್ಲವೆ? ನಾಳೆ ಹಗಲಿಂದ ರಾತ್ರಿವರೆಗೆ ತನ್ನ ಸ್ನೇಹಿತರಿಗೆ ಈ ವಿಷಯವನ್ನೇ ಹೇಳಬಹುದು........ಮೆಲ್ಲಗೆ ಸರಿದು ಅಪ್ಪನ ಹಿಂದೆ ತಡಿಕೆಯ ಹತ್ತಿರ ನಿಂತ. ಅಲ್ಲಿರುವ ಕಾಕಿಬಟ್ಟೆಯ ಹುಡುಗ ಏನಾದರೂ ಅಂದುಬಿಡಬಹುದೋ ಏನೋ ಎಂದು ಸ್ವಲ್ಪ ಹಿಂದು ಮುಂದು ನೋಡಿದ. ಆದರೆ ಆ ಹುಡುಗನ ಲಕ್ಷ್ಯವೆಲ್ಲವೂ ಚೆಂಡುಗಳನ್ನು ಎತ್ತಿ ಆಟಗಾರರಿಗೆ ಎಸೆಯುವುದರಲ್ಲೇ ಇದ್ದುಬಿಟ್ಟಿದ್ದರಿಂದ ಇವನ ಕಡೆ ಅವನು ನೋಡಲೇ ಇಲ್ಲ. ಸ್ವಾಮಿ ಹತ್ತು ನಿಮಿಷ ನಿಂತಿದ್ದ ಅಲ್ಲಿ. ಅಪ್ಪನ ಆಟವನ್ನು ಪಕ್ಕದಲ್ಲಿ ನಿಂತು ನೋಡುವುದಕ್ಕಿಂತ ಹಿಂದುಗಡೆ ನಿಂತು ನೋಡಿದರೆ ಹೆಚ್ಚು ಸೊಗಸು ಎನಿಸಿತು. ಅವನಿಗೆ ಚೆಂಡು ಬ್ಯಾಟಿಗೆ ತಗಲಿದಾಗ ಹೊರಡುತ್ತಿದ್ದ ಠೊಯ್ ಎನ್ನುವ ಸದ್ದು ಸಂಗೀತಕ್ಕಿಂತ ಮಧುರವಾಗಿತ್ತು.

ಹಾಗೆ ಅವನ ದೃಷ್ಟಿ ಕಾಕಿಬಟ್ಟೆ ಹುಡುಗನ ಹತ್ತಿರ ಸುಳಿಯಿತು. ಅವನನ್ನು ನೋಡುನೋಡುತ್ತ ಸ್ವಾಮಿಯ ಮುಖದ ಚಹರೆಯೇ ಬದಲಾಯಿಸಿತು. ಕಂಡದ್ದು ದಿಟವೋ ಎಂಬಂತೆ ಕಣ್ಣನ್ನು ಬಲವಾಗಿ ಮಿಟಕಿಸಿ ಮಿಟಕಿಸಿ ಮತ್ತೆ ಮತ್ತೆ ನೋಡಿದ. ಆ ಕಾಕಿಯ ಬಟ್ಟೆಯ ಹುಡುಗ ಬೇರೆ ಯಾರೂ ಅಲ್ಲ-ಕೋಚ್‌ಮ್ಯಾನ್ ಮಗ! ಬಟ್ಟೆ ಮಾತ್ರ ಬೇರೆ. ಹುಡುಗನು ಇವನ ಕಡೆ ತಿರುಗಿ ನೋಡಿ, ಅಪಹಾಸ್ಯದ ನಗು ನಕ್ಕು ಸರಕ್ಕನೆ ಜೇಬಿನಿಂದ ಚಾಕು ಒಂದನ್ನು ತೆಗೆದು ಅದನ್ನು ಬಿಚ್ಚಿ ಮೇಲಕ್ಕೆತ್ತಿ ತೋರಿಸಿದ. ಸ್ವಾಮಿಯ ಜಂಘಾಬಲವೆಲ್ಲ ಉಡುಗಿಹೋಯಿತು; ಮೈ ಬೆವರಿತು. ಮುಖ ಬೆಳ್ಳಗೆ

ಬಿಳಿಚಿಕೊಂಡಿತು. ಬೇಗ ಮೊದಲಿದ್ದ ಸ್ಥಳಕ್ಕೇ ಹಿಂದಿರುಗಿಬಿಟ್ಟ. ಶತ್ರು ಬಲು ದೂರದಲ್ಲಿ ಇದ್ದ. ಇನ್ನು ಭಯವಿಲ್ಲ, ಸದ್ಯ.

ಅಪ್ಪನ ಆಟ ಮುಗಿಯಿತು. ಕಟ್ಟಡದ ಕಡೆ ಹೊರಟರು. ಹಿಂದುಗಡೆ ಬಂದರೆ ಹುಡುಗನೆಲ್ಲಿ ಓಡಿಬಂದು ಹಿಂದಿನಿಂದ ಇರಿದುಬಿಟ್ಟಾನೋ ಎಂಬ ಭಯದಿಂದ ಜಾಗರೂಕವಾಗಿ ಸ್ವಾಮಿ ಅಪ್ಪನ ಮುಂದುಗಡೆಯೇ ನಡೆಯುತ್ತ ಹೊರಟ.

"ಸ್ವಾಮಿ, ಮುಂದೆ ಬರಬೇಡ, ಕಾಲು ಕಾಲಿಗೇ ಸಿಕ್ಕಿ ಹಾಕಿಕೊಳ್ಳುತ್ತೀಯೆ." ಸ್ವಾಮಿನಾಥ ನಿರ್ವಾಹವಿಲ್ಲದೆ ಒಪ್ಪಬೇಕಾಯಿತು. ದೃಷ್ಟಿ ಎಲ್ಲ ಹಿಂದುಗಡೆಯೇ. ಸಮಯಕ್ಕೆ ಬೇಕಾಗಬಹುದೆಂದು ಒಂದು ಚೂಪಾದ ಕಲ್ಲನ್ನು ಆರಿಸಿ ಇಟ್ಟುಕೊಂಡ. ಟೆನ್ನಿಸ್ ಕೋರ್ಟಿನಿಂದ ಕಟ್ಟಡಕ್ಕೆ ಹತ್ತು ಹದಿನೈದು ಗಜ ದೂರ. ಆದರೆ ಸ್ವಾಮಿಗದು ಒಂದೂವರೆ ಮೈಲಿಯಂತೆ ತೋರುತ್ತಿತ್ತು.

ಇಸ್ಪೀಟು ರೂಮಿನಲ್ಲಿ ಅಪ್ಪನ ಕುರ್ಚಿಯ ಪಕ್ಕದಲ್ಲಿ ತಾನೂ ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳುವ ತನಕ ಸ್ವಾಮಿಯ ಭೀತಿ ತಗ್ಗಲಿಲ್ಲ. ಕೊಟಡಿಯಲ್ಲಿ ದಟ್ಟವಾದ ತಂಬಾಕಿನ ಹೊಗೆ ಆಕಾಶದ ಕಡೆಗೆ ಸಾಗಿಹೋಗುತ್ತಿತ್ತು. ಅಪ್ಪ ಬಹಳ ರಭಸದಿಂದ ಇಸ್ಪೀಟು ಕಲಸಿ ಮೇಜಿನ ಸುತ್ತ ಕುಳಿತಿದ್ದವರಿಗೆಲ್ಲ ಎರಡು ಮೂರು ಎಲೆಯಂತೆ ಎಸೆಯುತ್ತಿದ್ದರು. ಪ್ರಪಂಚದಲ್ಲಿ ಇದಕ್ಕಿಂತ ಸುರಕ್ಷಿತವಾದ ಸ್ಥಳ ಮತ್ತೊಂದುಂಟೆ ಎನ್ನಿಸಿತು ಸ್ವಾಮಿಗೆ. ಅಪ್ಪ ಇದ್ದರು, ಅಪ್ಪನ ಸ್ನೇಹಿತರೆಲ್ಲ ಇದ್ದರು. ಕೋಚ್‌ಮ್ಯಾನ್ ಮಗನ ಬೇಳೆಕಾಳು ಹೇಗ ಬೆಂದೀತೋ ನೋಡೋಣ ಇಲ್ಲಿ! ಸ್ವಲ್ಪ ಹೊತ್ತಾದ ಮೇಲೆ ಸ್ವಾಮಿ ಕಿಟಕಿಯಿಂದ ಇಣಿಕಿ ನೋಡಿದ. ಆಕಾಶದಲ್ಲಿ ನಕ್ಷತ್ರಗಳು ಮೂಡಿದ್ದವು. ಸ್ವಾಮಿಗೆ ಸ್ವಲ್ಪ ದಿಗಿಲಾಯಿತು; 'ಅಪ್ಪನ ಆಟ ಮುಗಿಸಿ ಮನೆಗೆ ಹೊರಡುವ ವೇಳೆಗೆ ಇನ್ನೂ ಕತ್ತಲಾಗಿ ಬಿಟ್ಟಿರುತ್ತಲ್ಲವೆ? ಆಮೇಲೇನು ಗತಿ!'

ಒಂದು ಗಂಟೆ ಕಳೆಯಿತು. ಅಪ್ಪ ಎದ್ದರು. ಕಟ್ಟಡದ ಕೊನೆಯ ಮೆಟ್ಟಿಲನ್ನಿಳಿಯುವ ವೇಳೆಗೆ ಸ್ವಾಮಿಯ ಎದೆ ಜಲ್ಲೆಂದಿತು. ಸುತ್ತಲಿನ ಕತ್ತಲಲ್ಲಿ ಏನು ಅಪಾಯ ಅಡಗಿಕೊಂಡಿದೆಯೋ? ಅಪ್ಪ, ಅಪ್ಪನ ಸ್ನೇಹಿತರು ಇವರಿಬ್ಬರ ನಡುವೆ ಸ್ವಾಮಿ ಭದ್ರವಾಗಿದ್ದ. ಇದರಿಂದ ಅವನಿಗೆ ಸ್ವಲ್ಪ ಧೈರ್ಯವಾಯಿತು. ಆದರೆ ಕ್ಲಬ್ಬಿನಲ್ಲಿರುವ ಎಲ್ಲರೂ ತಮ್ಮ ಜೊತೆಯಲ್ಲಿಯೇ ಬಂದು ಕಾರ್‌ವರೆಗೆ ಬಿಟ್ಟುಬಿಟ್ಟು ಹೋಗಿದ್ದರೆ ಚೆನ್ನಾಗಿರುತ್ತಿತ್ತು ಎಂದು ಸ್ವಾಮಿಗೆ ಎನಿಸಿತು. ಎಷ್ಟು ಜನ ಸಾಧ್ಯವೊ ಅಷ್ಟು ಜನ ಅಂಗರಕ್ಷಕರು ಬೇಕಿತ್ತು ಆಗ. ಯಾರಿಗೆ ಗೊತ್ತು? ಹುಡುಗ ಓಡಿಹೋಗಿ ತಲೆಗಡುಕರ ದಂಡನ್ನೇ ಕಟ್ಟಿಕೊಂಡು ಬಂದು ಅವನಿಗಾಗಿ ಕಾಯುತ್ತ ಇರಬಹುದು.......ಮುಂದೆ ಹೋಗೋಣವೆಂದರೆ ಅದು ಸಾಧ್ಯವಿಲ್ಲ. ಅಪ್ಪನ ಕಾಲಿಗೆ ತೊಡರಿಕೊಂಡು ಬೈಸಿಕೊಳ್ಳಬೇಕಾಗುತ್ತದೆ. ಅದೂ ಅಲ್ಲದೆ ಕಾರಿರುವ ಸ್ಥಳ ಅವನಿಗೆ ಗೊತ್ತಿಲ್ಲ. ಹಿಂದೆ ಬರೋಣವೆಂದರೋ-ಆ ಮಾತೇ ಬೇಡ.......... ಕಾರಿನ ಹತ್ತಿರ ಸೇರದೆಯೇ ಹೋಗಬಹುದು......ಆದುದರಿಂದ ಒಂದೇ ಸಲ ಹಿಂದೂ ಮುಂದೂ ಕಾಣಿಸುವಂತೆ

ವಿಚಿತ್ರ ಅಡ್ಡ ನಡಗೆಯಲ್ಲಿ ನಡೆದುಕೊಂಡು ಹೋದ. ಎಷ್ಟು ನಡೆದರೂ ದಾರಿ ಮುಗಿಯುವಂತೆಯೇ ತೋರಲಿಲ್ಲ......ಅಪ್ಪನಿಗೆ ಎಲ್ಲವನ್ನೂ ವಿವರಿಸಿ ಅವರ ರಕ್ಷಣೆ ಪಡೆದುಕೊಳ್ಳುವುದೇ ಲೇಸೆಂದು ನಿಶ್ಚಯಿಸಿದ.

"ಅಪ್ಪಾ!"

"ಏನು ಮಗೂ?"

ಇದ್ದಕ್ಕಿದ್ದಂತೆ, ಈ ವ್ಯವಹಾರವೊಂದನ್ನೂ ಅಪ್ಪನಿಗೆ ತಿಳಿಸುವುದು ಬೇಡ; ಅದೆಷ್ಟೇ ಅಪಾಯಕರವಾಗಿದ್ದರೂ ಪರವಾ ಇಲ್ಲ ಎನಿಸಿತು.

ಅಪ್ಪ ಮತ್ತೆ ಕೇಳಿದರು : "ಏನು ಬೇಕು, ಮಗೂ?"

"ಅಪ್ಪ, ಮನೇಗಾ ಈವಾಗ ನಾವು ಹೋಗ್ತಿರೋದು?"

"ಹೌದು."

"ನಡಕೊಂಡೇನಪ್ಪ?"

"ಅಲ್ಲ, ಮಗೂ, ಗೇಟ್ ಹತ್ತಿರ ಕಾರ್ ನಿಂತಿದೆ."

ಕಾರಿನ ಹತ್ತಿರ ಬಂದರು. ಮೊದಲು ಹತ್ತಿ ಹಿಂದಿನ ಸೀಟಿನಲ್ಲಿ ಕುಳಿತು ಬಿಟ್ಟ ಸ್ವಾಮಿ. ಭಯ ಇನ್ನೂ ತಪ್ಪಲಿಲ್ಲ. ಕಾರ್ ಸ್ಟಾರ್ಟ್ ಮಾಡಲು ಅಪ್ಪನ ಸ್ನೇಹಿತರು ಸ್ವಲ್ಪ ನಿಧಾನ ಮಾಡಿದರು. ಹಿಂದಿನ ಸೀಟಿನಲ್ಲಿ ಒಬ್ಬನೇ ಒಬ್ಬ ಕುಳಿತಿದ್ದಾನೆ, ಕತ್ತಲಲ್ಲಿ. ಈಗಲೂ ಕೂಡ, ಕೋಚ್‌ಮ್ಯಾನ್ ಮಗನೂ ಅವನ ತಂಡದವರೂ ಸುಲಭವಾಗಿ ಎಳೆದುಕೊಂಡು ತನ್ನ ಕತೆ ಪೂರಯಿಸಿ ಬಿಡಬಹುದು.

ಕಾರು ಹೊರಟಿತು. ಕಾರಿನ ಇಂಜನ್ನಿನ ಮೊರೆತ ಅನಾಥ ರಕ್ಷಕನ ದಿವ್ಯವಾಣಿಯ ಹಾಗೆ ಇಂಪಾಗಿತ್ತು ಸ್ವಾಮಿನಾಥನ ಕಿವಿಗೆ. ಕಾರು ಗೇಟನ್ನು ದಾಟಿತು. ವೇಗ ಹೆಚ್ಚಿತು. ತನ್ನ ಪಂಚೆಯ ತುದಿಯನ್ನೆತ್ತಿ ಸ್ವಾಮಿನಾಥ ಹಣೆಯ ಮೇಲಿನ ಬೆವರನ್ನೊತ್ತಿಕೊಂಡ.

# ಮುರಿದ ಕಿಟಕಿಗಳು

ಬೊಂಬಾಯಿನ ಸುಪ್ರಸಿದ್ಧ ದೇಶಭಕ್ತ ಗೌರೀಶಂಕರರ ಸಲುವಾಗಿ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಲೋಸುಗ 1930ನೆಯ ಆಗಸ್ಟ್ 15ನೆಯ ತಾರೀಖಿನ ದಿನ ಮಾಲ್ಗುಡಿಯ ಸರಯೂ ನದಿಯ ಮರಳಿನ ಮೇಲೆ ಎರಡು ಸಾವಿರ ನಾಗರಿಕರು ಸಭೆ ಸೇರಿದ್ದರು. ಖಾದಿ ಬಟ್ಟೆ ಧರಿಸಿದ ಕಾರ್ಯಕರ್ತಾಸಿ ತರುಣನೊಬ್ಬನು ಮರದ ವೇದಿಕೆಯ ಮೇಲೆ ನಿಂತು ಭಾಷಣ ಮಾಡುತ್ತಿದ್ದ. ಕಿವಿಯನ್ನು ಕೊರೆಯುವಂತೆ ಉಚ್ಚ ಶ್ರುತಿಯಲ್ಲಿ ಆತನು ಗೌರೀಶಂಕರರ ಜನ್ಮ, ಜೀವನ, ಸೇವಾದೀಕ್ಷೆ ಎಲ್ಲವನ್ನೂ ಚಿತ್ರಿಸಿ ಅನಂತರ ದೇಶದ ದುಃಸ್ಥಿತಿಯ ಬಣ್ಣನೆಗೆ ಬಂದ. "ಇಂದು ನಾವು ಗುಲಾಮರು. ನಮ್ಮ ಪಾಡು ಗುಲಾಮರಿಗಿಂತ ಕಡೆ. ಹಿಂದೆಂದೂ ಇಷ್ಟು ಕೀಳು ಮಟ್ಟಕ್ಕಿಳಿದಿರಲಿಲ್ಲ ನಮ್ಮ ಬಾಳು. ನಮ್ಮ ದೇಶದ ಭವ್ಯ ಚರಿತ್ರೆಯನ್ನು ಜ್ಞಾಪಕ ಮಾಡಿಕೊಳ್ಳೋಣ. ರಾಮಾಯಣ ಮಹಾಭಾರತಗಳ ದಿವ್ಯ ಕಾಲವನ್ನು ಮರೆತುಬಿಡುವುದೇ? ಈ ನಮ್ಮ ಪುಣ್ಯ ಭೂಮಿ ಒಬ್ಬ ಕಾಳಿದಾಸ, ಒಬ್ಬ ಬುದ್ಧ, ಒಬ್ಬ ಶಂಕರ-ಇಂತಹ ಮಹಾ ವಿಭೂತಿಗಳಿಗೆ ಜನ್ಮ ಕೊಟ್ಟಿದೆ. ಇಂಗ್ಲಿಷ್ ಜನ ಬಟ್ಟೆಯನ್ನೂ ಅರಿಯದೆ ಬರಿ ಬೆತ್ತಲೆಯಾಗಿ ಕಾಡಿನಲ್ಲಿ ಅಲೆದಾಡುತ್ತ, ಹಸಿಯ ಮಾಂಸವನ್ನು ಕಿತ್ತು ತಿನ್ನುತ್ತಿದ್ದ ಕಾಲಕ್ಕೆ ನಮ್ಮ ದೇಶದ ಹಡುಗುಗಳು ಸಪ್ತಸಾಗರಗಳಲ್ಲೂ ಸಂಚರಿಸುತ್ತಿದ್ದವು. ನಾಗರಿಕತೆಯ ಪರಾಕಾಷ್ಠತೆಯಲ್ಲಿದ್ದೆವು ನಾವು. ಆದರೆ ಈಗ ನಾವು ಯಾವ ಗತಿಯಲ್ಲಿದ್ದೇವೆ?" ಒಂದು ನಿಮಿಷ ತಡೆದು ಸಮಯಸ್ಫೂರ್ತಿಯಿಂದ, ಸರಿಯೋ ತಪ್ಪೋ ಎಂಬುದನ್ನು ಪರೀಕ್ಷಿಸುವ ಗೊಡವೆಗೆ ಹೋಗದೆ "ಈಗ ನಾವು ಗುಲಾಮರ ಗುಲಾಮರು, ದಾಸಾನುದಾಸರು" ಎಂದ. ಸ್ವಾಮಿನಾಥನಿಗೂ ಮಣಿಗೂ ಭಾಷಣದ ಈ ಭಾಗ ತಲೆಗೆ ಹತ್ತಲಿಲ್ಲ. ಆದರೆ ಐದು ನಿಮಿಷದ ತರುವಾಯ ಭಾಷಣಕಾರ ಎಲ್ಲರಿಗೂ ಅರ್ಥವಾಗುವಂಥ ಸಲಹೆಯೊಂದನ್ನಿತ್ತ. "ಒಂದು ಕ್ಷಣ ಚಿಂತಿಸಿ. ನಾವು ಮೂವತ್ತುಮೂರು ಕೋಟಿ ಮಂದಿ ಇದ್ದೇವೆ. ಇಡೀ ಯೂರೋಪು ಖಂಡದಲ್ಲಿ ರಷ್ಯವನ್ನು ಕಳೆದರೆ ಎಷ್ಟು ವಿಸ್ತೀರ್ಣವಾಗುತ್ತದೋ ನಮ್ಮ ನಾಡು ಅಷ್ಟು ವಿಸ್ತಾರವಾಗಿದೆ. ಇಂಗ್ಲೆಂಡು ನಮ್ಮ ಮದರಾಸು ಪ್ರಾಂತಕ್ಕಿಂತ ಸಣ್ಣದು. ಬೆರಳಿನ ಮೇಲೆ ಲೆಕ್ಕಮಾಡುವಷ್ಟು ಬಿಳಿಯ ಚಂಡಾಲರು ಅಲ್ಲಿ, ಸಾವಿರಾರು ಮೈಲಿಗಳಾಚೆ, ತಮ್ಮ ಭಂಡ ಬಾಳನ್ನು ನಡೆಸುತ್ತಿದ್ದಾರೆ. ಆದರೂ ಅವರಿಗೆ ನಾವು ಡಗ್ ಸಲಾಂ ಹೊಡೆಯಬೇಕೇ? ಎಂಥ ಅವಮಾನವಿದು? ದೋಷ ನಮ್ಮದಲ್ಲ. ಆದರೂ

ನಾವೇಕೆ ಹೀಗೆ ಹೇಡಿಗಳಾಗಿದ್ದೇವೆ? ಇದಕ್ಕೆಲ್ಲ ಕಾರಣ ಸರಕಾರವೇ. ನಮಗೆ ಅರೆಹೊಟ್ಟೆ ಕೂಳು ಹಾಕುತ್ತ, ಗೊಡ್ಡು ಬೆದರಿಕೆಗಳಿಂದ ನಮ್ಮ ಸಾರವನ್ನೆಲ್ಲ ಹೀರಿದ್ದಾರೆ. ನೀವಿನ್ನೇನೂ ಮಾಡಬೇಕಾಗಿಲ್ಲ. ಪ್ರತಿಯೊಬ್ಬ ಭಾರತೀಯನೂ ಬಾಯಿತುಂಬ ಎಂಜಲು ತುಂಬಿಕೊಂಡು ಇಂಗ್ಲೆಂಡಿನ ಮೇಲೆ ಉಗಳಲಿ. ಆ ಜೊಲ್ಲಿನ ಸಮುದ್ರದಲ್ಲಿ ಇಂಗ್ಲೆಂಡ್ ಮುಳುಗಿ ಹೋಗುತ್ತದೆ......."

ಭಾಷಣಕಾರನ ವಾಕ್‌ಪ್ರೌಢಿಮೆಯಿಂದ ಸ್ವಾಮಿನಾಥ ಚಕಿತನಾದ. ಆವೇಶದಿಂದ, "ಗಾಂಧೀಕೀ ಜೈ" ಎಂದು ಕೂಗಿದ. ಮಣಿ ಬಲವಾಗಿ ಅವನನ್ನು ತಿವಿದು, "ಲೋ, ಸುಮ್ಮನೆ ಬಾಯಿ ಮುಚ್ಚಿಕೊಂಡು ಇರಬಾರದೇ?" ಎಂದ.

ಸ್ವಾಮಿನಾಥ ಕೇಳಿದ : "ನಿಜವೇನೋ ಅದು?"

"ಯಾವುದು?"

"ಎಂಜಲುಗಿದು ಪರಂಗಿಯವರನ್ನ ಮುಳುಗಿಸೋದು."

"ಇದ್ದೇ ಇರಬೇಕು. ಇಲ್ಲದೆ ಹೋದರೆ ಅವನು ಹಾಗೆ ಹೇಳ್ತಾ ಇದ್ದನಾ?"

"ಹಾಗಾದರೆ ಎಲ್ಲರೂ ಯಾಕೆ ಹೀಗೆ ಮಾಡಿಬಿಡಬಾರದು. ಕಷ್ಟ ಏನಿಲ್ಲದರಲ್ಲಿ. ಅಷ್ಟು ಸುಲಭವಾಗಿದೆ!"

"ಆ ಪರಂಗೀವರಿಗೆ ದಯೆ ಅನ್ನೋದೇ ಇಲ್ಲ ಕಾಣೋ. ನಮ್ಮೆಲ್ಲರನ್ನೂ ಷೂಟ್ ಮಾಡಿಬಿಡ್ತಾರೆ." ಸ್ವಾಮಿಗೆ ಈ ಉತ್ತರ ನಿಜ ಎನಿಸಿತು. ಇನ್ನೇನೋ ಕೇಳಬೇಕೆಂದು ಬಾಯಿಬಿಡುವುದರಲ್ಲಿದ್ದ. ಅಷ್ಟರೊಳಗೆ ಅಕ್ಕ ಪಕ್ಕದಲ್ಲಿ ಕೂತಿದ್ದ ಇಬ್ಬರು ಮೂವರು ಇವನ ಕಡೆ ದುರುಗುಟ್ಟಿಕೊಂಡು ನೋಡಿದರು.

ಸಂಜೆಯೆಲ್ಲಾ ಭಾಷಣಕಾರನ ವಾಗ್ಝರಿಯಲ್ಲೇ ಸ್ವಾಮಿ ಕೊಚ್ಚಿಕೊಂಡು ಹೋಗಿದ್ದ. ಮಣಿಯೂ ಅಷ್ಟೇ. ಭಾರತದ ಬಡ ಬೋರೆಗೌಡನ ದೌರ್ಭಾಗ್ಯವನ್ನು ಭಾಷಣಕಾರನು ವರ್ಣಿಸಿದಾಗ ಅವನೊಡನೆ ಇವರೂ ಅತ್ತರು. ಪರದೇಶೀ ಪದಾರ್ಥಗಳನ್ನು ಬಹಿಷ್ಕಾರ ಮಾಡುತ್ತೇವೆಂದು ಪ್ರತಿಜ್ಞೆ ತೆಗೆದುಕೊಂಡರು. ಅದರಲ್ಲೂ, ಮುಖ್ಯವಾಗಿ ಆ ಮ್ಯಾಂಚೆಸ್ಟರ್ ಮತ್ತು ಲ್ಯಾಂಕಾಷೈರಿನ ಬಟ್ಟೆಗಳನ್ನು ಮುಟ್ಟುವುದೇ ಇಲ್ಲವೆಂದು ಶಪಥ ಮಾಡಿದರು. ಒಂದಾನೊಂದು ಕಾಲದಲ್ಲಿ ಯಾವ ಮಸ್ಲಿನ್ ಬಟ್ಟೆಗಾಗಿ ಭಾರತ ದೇಶ ಪ್ರಖ್ಯಾತವಾಗಿತ್ತೋ ಅದನ್ನು ತಯಾರಿಸುತ್ತಿದ್ದ ಡಾಕಾ ನೇಯ್ಗೆಗಾರರ ಕೈಬೆರಳನ್ನು ಕತ್ತರಿಸಿದ ಪರದೇಶೀ ಮಿಲ್ ಮಾಲೀಕರಿಗೆ ನಾವೇಕೆ ದುಡ್ಡು ತೆತ್ತಿ ದೇಶದ್ರೋಹಿಗಳಾಗಬೇಕು? ನಲವತ್ತು ಗಜಗಳ ಬಟ್ಟೆಯನ್ನು ಮಡಿಸಿ ಒಂದು ನಶ್ಯದ ಡಬ್ಬಿಯಲ್ಲಿ ಮುಚ್ಚಿಡಬಹುದಾಗಿತ್ತೆಂದರೆ ಆ ಬಟ್ಟೆ ಇನ್ನದೆಷ್ಟು ನಯವಾಗಿರಬೇಕು? ಗಾಳಿಯ ಪೊರೆಯೇ ಅಲ್ಲವೆ? ಅಂಥ ನೇಯ್ಕಾರರ ಬೆರಳನ್ನು ಕತ್ತರಿಸಿದ ಖೂಳರಿಗೆ ಎಂತಹ ಭೀಕರ ನರಕವಾದರೂ ಸಾಲದು. ಖಾದಿ ಎಷ್ಟೇ ಒರಟಾಗಿರಲಿ, ಸದಾ ಅದನ್ನೇ ಧರಿಸುವುದರಿಂದ, ಆ ನಿರ್ದಯ ರಾಕ್ಷಸರಿಗೆ ತಕ್ಕ ಶಿಕ್ಷೆ ಕೊಡುತ್ತೇನೆಂದು ಸ್ವಾಮಿ ತೀರ್ಮಾನ ಮಾಡಿಬಿಟ್ಟ. ಆಗ ತಾನು ಧರಿಸಿದ್ದ ಬಟ್ಟೆಗಳ ಕಡೆ ನೋಡಿಕೊಂಡ. ರೋಷವೂ ಅವಮಾನವೂ ಒಟ್ಟಿಗೆ

ಉಂಟಾದವು. ಮೆಲ್ಲಗೆ ಕೇಳಿದ : "ಮಣಿ, ನಾನು ಯಾವ ಬಟ್ಟೆ ಹಾಕಿಕೊಂಡಿದ್ದೀನಿ ಅಂತ ನಿನಗೇನಾದರೂ ಗೊತ್ತೇನೊ?"

ಮಣಿ ಸ್ವಾಮಿನಾಥನ ಕೋಟನ್ನು ಮುಟ್ಟಿ ನೋಡಿ, "ಪಕ್ಕಾ ಲ್ಯಾಂಕಾ ಷೈರ್ ಬಟ್ಟೆ ಕಾಣೋ" ಎಂದು ತೀರ್ಮಾನ ಹೇಳಿದ.

"ನಿನಗೆ ಹೇಗೆ ಗೊತ್ತು?"

ಮಣಿ ಉತ್ತರ ಹೇಳಲಿಲ್ಲ, ಬಿರ್‍ರನೆ ಕಣ್ಣು ಬಿಟ್ಟ.

"ಹಾಗಾದರೆ ನೀನೇನು ಹಾಕಿಕೊಂಡಿದ್ದೀಯ?" ಎಂದ ಸ್ವಾಮಿ.

"ಖಾದೀ. ಇನ್ನೇನು ಅಂದ್ಕೊಂಡಿದ್ದೀಯ? ಆ ಲ್ಯಾಂಕಕಾಷೈರ್ ದಯ್ಯಗಳಿಗೆ ಒಂದು ಕುರುಡು ಕಾಸನ್ನಾದರೂ ಕೊಡ್ತೀನಿ ನಾನು ಅಂದು ಕೊಂಡಿದ್ದೀಯೇನು?"

ಈ ವಿಷಯದಲ್ಲಿ ಸ್ವಾಮಿಗೆ ಅನೇಕ ಶಂಕೆಗಳಿದ್ದವು. ಆದರೆ ಸುಮ್ಮನಿರುವುದೇ ವಾಸಿಯೆಂದುಕೊಂಡ. ಅಂತೂ, ಈ ಲ್ಯಾಂಕಾಷೈರಿನ ಬಟ್ಟೆಗಳಲ್ಲಿ ಮೆರೆಯೋಕ್ಕಿಂತ ಬೆತ್ತಲೆ ಬಂದಿದ್ದರೇನೇ ಗೌರವವಾಗಿ ಇರುತ್ತಿತ್ತೆಂದು ಭಾವಿಸಿದ.

ಜನರ ಗುಂಪಿನಿಂದ 'ಭಾರತಮಾತಾಕೀ ಜೈ' ಎಂಬ ಭಾರಿ ಕೂಗೆದ್ದಿತು. ಅನಂತರ 'ಗಾಂಧೀಕೀ ಜೈ' ಎಂದು ಆಕಾಶವನ್ನು ಸೀಳುವಂಥ ಜಯಕಾರಗಳಾದವು. ಆಮೇಲೆ ಅಳುವ ಧ್ವನಿಯಲ್ಲಿ ರಾಷ್ಟ್ರಗೀತೆ ಹಾಡಿದ್ದೂ ಆಯಿತು. ಆ ಸಂಜೆಯ ಕಾರ್ಯಕ್ರಮದ ಕಡೆಯ ಅಂಶವಾಗಿ ಬಟ್ಟೆ ಸುಡುವುದಕ್ಕಾಗಿ ಭಾರಿ ಕಿಚ್ಚೊಂದನ್ನು ಹೊತ್ತಿಸಿದರು. ಆಗಲೇ ಕಾಡಿಗೆಯಂತೆ ಕತ್ತಲೆಯಾಗಿತ್ತು. ಇದ್ದಕ್ಕಿದ್ದಂತೆ ಎಲ್ಲೆಲ್ಲೂ ಕೆಂಬಣ್ಣದ ಬೆಳಕು ಹೊಳೆಯತೊಡಗಿತು. ಗಾಂಧೀಟೋಪಿ ಹಾಕಿಕೊಂಡಿದ್ದ ಇಬ್ಬರು ಹುಡುಗರು ಎಲ್ಲರ ಹತ್ತಿರವೂ ಹೋಗಿ ತಮ್ಮ ಪರದೇಶೀ ಬಟ್ಟೆಯನ್ನು ಅಗ್ನಿ ಸಂಸ್ಕಾರ ಮಾಡಬೇಕೆಂದು ಬೇಡಿಕೊಂಡರು. ಕೋಟುಗಳೇನು, ಟೋಪಿಗಳೇನು, ಷರ್ಟುಗಳೇನು, ಅಂಗವಸ್ತ್ರಗಳೇನು- ಎಲ್ಲವೂ ಭಾರಿಯ ರಣಹದ್ದುಗಳಂತೆ ಗಾಳಿಯಲ್ಲಿ ತೂರಿಬಂದು ದೊಪ್ಪೆಂದು ಬೆಂಕಿಯಲ್ಲಿ ಬಿದ್ದವು. ಜ್ವಾಲೆಯಾದರೋ ಸರಸರ ಚಟಚಟ ಎಂದು ಶಬ್ದಮಾಡುತ್ತ ಮೇಲಕ್ಕೇರಿ ತನ್ನ ಕಪ್ಪು ಹೊಗೆಯಿಂದ ಆಕಾಶವನ್ನೆಲ್ಲ ಆವರಿಸಿತು. ಸುಟ್ಟ ಬಟ್ಟೆಯ ನಾತ ಎಲ್ಲೆಲ್ಲೂ ಹಬ್ಬಿತು. ನೆತ್ತರಿನ ಬಣ್ಣದ ಆ ಬೆಳಕಿನಲ್ಲಿ ಮನುಷ್ಯರೂ ನೆರಳಿನಂತೆ ಕಾಣುತ್ತಿದ್ದರು. ಇದನ್ನು ಕಂಡು ಸ್ವಾಮಿನಾಥನ ಮೈಯಲ್ಲೆಲ್ಲ ಸಂತೋಷದ ಅಲೆಗಳು ಹರಿದವು. ಯಾರೋ ಅವನ ಹತ್ತಿರ ಬಂದು "ಏನಯ್ಯಾ, ನಮ್ಮ ದೇಶ ಶಾಶ್ವತವಾಗಿ ದಾಸ್ಯದಲ್ಲಿ ಕೊಳೆಯಬೇಕೆಂದು ನಿನ್ನ ಅಭಿಲಾಷೆಯೇನಯ್ಯ?" ಎಂದರು.

"ಇಲ್ಲಾಪ್ಪ" ಎಂದ ಸ್ವಾಮಿ.

"ಹಾಗಾದರೇಕೆ ಪರದೇಶೀ ಟೋಪಿ ಹಾಕಿಕೊಂಡಿದ್ದೀಯ?"

ಸ್ವಾಮಿನಾಥ ಅವಮಾನದಿಂದ ಕುಸಿದುಬಿದ್ದ. "ಅಯ್ಯೋ, ನೋಡಲಿಲ್ಲ" ಎಂದು ಹೇಳಿ ಟೋಪಿಯನ್ನು ಎತ್ತಿ ಬೆಂಕಿಯಲ್ಲಿ ಒಗೆದು, 'ಸದ್ಯ, ದೇಶವನ್ನು ಉಳಿಸಿದೆನಲ್ಲ!' ಎಂದುಕೊಂಡ.

## ಎರಡು

ಮಾರನೆಯ ದಿನ ಬೆಳಿಗ್ಗೆ, ಸ್ವಾಮಿನಾಥನಿಗೆ ಆಗತಾನೇ ಎಚ್ಚರವಾಗಿತ್ತು. ಆದರೂ ಹಾಸಿಗೆಯಿಂದ ಎದ್ದಿರಲಿಲ್ಲ, ಪಕ್ಕದಲ್ಲೇ ಹಾದುಹೋಗುತ್ತಿದ್ದ ಸೂರ್ಯನ ಕಿರಣದಲ್ಲಿ ದೂಳಿನ ಕಣಗಳು ಕುಣಿಯುತ್ತಿರುವುದನ್ನೇ ನೋಡುತ್ತ ಮಲಗಿದ್ದ. ಮನಸ್ಸು ನಿದ್ರೆಯ ಹಿಡಿತದಿಂದ ಆಗತಾನೇ ಬಿಡಿಸಿಕೊಳ್ಳುತ್ತಿತ್ತು. ಆದರೂ ಏನೋ ತಿಳಿಯದ ಭಯ ಬಾಧಿಸುತ್ತಿದೆ. ಏನು ಆ ಭಯ ಎಂದು ಸ್ವಾಮಿ ತನ್ನನ್ನೇ ಕೇಳಿಕೊಂಡ. ಸ್ಕೂಲಿಗೆ ಸಂಬಂಧಪಟ್ಟಿದ್ದೇ ಏನೋ ಇರಬೇಕು.......ಹೋಂ ವರ್ಕೇ? ಅಲ್ಲ, ಆ ಬಾಬಿನಲ್ಲಿ ಎಲ್ಲಾ ಸರಿಯಾಗಿತ್ತು......ಆ! ತನ್ನ ಬಟ್ಟೆಗೆ ಸಂಬಂಧಿಸಿದ ಸಂಗತಿ. ಪರದೇಶೀ ವಸ್ತ್ರಗಳ ದಹನ. ಹಿಂದಿನ ದಿನ ತನ್ನ ಟೋಪಿ ರಾಷ್ಟ್ರಪ್ರೇಮಾಗ್ನಿಗೆ ಆಹುತಿಯಾಯಿತೆಂಬುದು ಈಗ ಸಂಪೂರ್ಣವಾಗಿ, ಸ್ಪಷ್ಟವಾಗಿ ಜ್ಞಾಪಕಕ್ಕೆ ಬಂತು ;......ಅಪ್ಪನಿಗಂತೂ ಇದೊಂದನ್ನೂ ತಿಳಿಸಿಲ್ಲ.

ಸ್ಕೂಲಿಗೆ ಏನು ಹಾಕಿಕೊಂಡು ಹೋಗುವುದು? ಅಪ್ಪನಿಗೆ ಹೇಳಿ ಬೇರೆ ಟೋಪಿ ಕೊಂಡುಕೊಳ್ಳುವುದು ನಡೆಯದ ಮಾತು. ಬರಿ ತಲೆಯಲ್ಲಿ ಸ್ಕೂಲಿಗೆ ಹೋಗುವುದು ಹೇಗೆ?

ದೇವರ ಮೇಲೆ ಭಾರಹಾಕಿ, ಕೋಟು ಮಾತ್ರ ಹಾಕಿಕೊಂಡು, ತಲೆಗೆ ಏನೂ ಇಲ್ಲದೆಯೆ ಸ್ಕೂಲಿಗೆ ಹೊರಟ. ದೇವರು ಇವನ ವಿಷಯವಾಗಿ ದಯವನ್ನೇ ತೋರಿದ. ಸ್ಕೂಲ್ ಬಳಿ ಸೇರುವ ವೇಳೆಗೆ ನೋಡುತ್ತಾನೆ : ಎಲ್ಲ ಹುಡುಗರೂ ಬಾಗಿಲ ಹತ್ತಿರ ಗುಂಪು ಕಟ್ಟಿಕೊಂಡು ಗಲಾಟೆ ಮಾಡುತ್ತಿದ್ದಾರೆ. ಇದರಲ್ಲಿ ದೇವರ ಕೈವಾಡ ಇರಬೇಕೆಂದು ಸ್ವಾಮಿ ಭಾವಿಸಿದ.

ಸ್ವಾಮಿನಾಥನ್ ಗುಂಪಿನ ನಡುವೆ ಹಾದು ಸ್ಕೂಲ್ ಗೇಟಿನ ಬಳಿ ಹೋದ. ಮೇಲಿನ ತರಗತಿಗೆ ಸೇರಿದವನು ಯಾರೋ ಅಪರಿಚಿತನೊಬ್ಬ ಇವನನ್ನು "ಎಲ್ಲಿಗೋ ಹೋಗ್ತಿದ್ದೀಯ?" ಎಂದು ಕೇಳಿದ. ಇದರಲ್ಲಿ ಏನೋ ಇರಬೇಕು ಎಂದು ಸ್ವಾಮಿಗೆ ತೋರಿದುದರಿಂದ ಸ್ವಲ್ಪ ತಡವರಿಸಿದ, "ಇಲ್ಲೇ ಅ-ಅ-ಆದೇ......."

"ಇವತ್ತು ಸ್ಕೂಲಿಲ್ಲ. ಭಾರತಮಾತೆಯ ಮಹಾ ಪುತ್ರರಲ್ಲೊಬ್ಬರು ದಸ್ತಗಿರಿಯಾಗಿದ್ದಾರೆ" ಎಂದು ಆ ಹೊಸಬ ಬಹಳ ಉದ್ವೇಗದಿಂದ ಸಾರಿದ.

"ನಾನು ಸ್ಕೂಲಿಗೆ ಹೋಗೊಲ್ಲ ಇವತ್ತು" ಎಂದ ಸ್ವಾಮಿ. ಟೋಪಿಯ ಸಮಸ್ಯೆ ಇಷ್ಟೊಂದು ಸುಲಭವಾಗಿ ಬಗೆಹರಿದುದರಿಂದ ಮನಸ್ಸು ಹಗುರಾಯಿತು.

ಹೆಡ್‌ಮೇಷ್ಟರೂ ಮಿಕ್ಕ ಮೇಷ್ಟರುಗಳೂ ಮುಂದಿನ ಪಡಸಾಲೆಯಲ್ಲಿ ನಿಂತಿದ್ದರು. ಹೆಡ್‌ಮೇಷ್ಟರ ಮುಖ ಕಳೆಗುಂದಿತ್ತು. ಎಬನೀಜರ್ ಬೆತ್ತವನ್ನು ಬೀಸುತ್ತ ಇಲ್ಲಿಂದಲ್ಲಿಗೆ ಓಡಾಡುತ್ತಿದ್ದರು. ಚರಿತ್ರೆ ಮೇಷ್ಟರಾದ ಡಿ. ಪಿಳ್ಳೆಯವರು ಕೂಡ ವ್ಯಸನಾಕ್ರಾಂತರಾಗಿ

ತಮ್ಮ ಮೋಟು ಮೀಸೆಯನ್ನು ತುರಿಸಿಕೊಳ್ಳುತ್ತಿದ್ದರು. ಹೀಗವರು ದುಃಖದಿಂದಿದ್ದುದನ್ನು ಹುಡುಗರು ಕಂಡುದು ಇದೇ ಮೊದಲು. ರಸ್ತೆಯಲ್ಲಿದ್ದ ಗುಂಪಿನ ಗದ್ದಲವೂ ಸಂಭ್ರಮವೂ ಹೆಚ್ಚುತ್ತ ಹೋದುವು. ಸ್ಕೂಲಿನ ಒಳಗಡೆ ಹಾಳು ಸುರಿಯುತ್ತಿತ್ತು. ಹತ್ತು ಗಂಟೆಗೆ ಐದು ನಿಮಿಷವಿದ್ದಾಗ ಮೊದಲನೆಯ ಬೆಲ್ ಹೊಡೆಯಿತು. ಯಾರಿಗಾದರೂ ಅದು ಕೇಳಿಸಿದ್ದರೆ ತಾನೇ? ಅಷ್ಟು ಗಲಾಟೆ. ಉಪಾಧ್ಯಾಯರೂ ಹೆಡ್‌ಮೇಷ್ಟರೂ ಏನೋ ಮಂತ್ರಾಲೋಚನೆ ನಡೆಸಿದರು. ಎರಡನೆಯ ಬೆಲ್ ಕೂಡ ಹೊಡೆಯಿತು. ದಿನವೂ ತುಂಬುನಾದ ಹೊರಹೊಮ್ಮಿಸುತ್ತಿದ್ದ ಗಂಟೆ ಈವತ್ತೇಕೋ ಬಹಳ ಸಪ್ಪೆ. ಹೆಡ್‌ಮೇಷ್ಟರೂ ಮಿಕ್ಕ ಮೇಷ್ಟರುಗಳೂ ಗೇಟಿನ ಹತ್ತಿರ ಬಂದರು. ಗುಂಪಿನ ಸದ್ದಡಗಿತು.

ಸರಿಯಾದ ರೀತಿಯಲ್ಲಿ ವರ್ತಿಸಬೇಕೆಂದೂ, ಎಲ್ಲರೂ ಸದ್ದಿಲ್ಲದೆ ತಮ್ಮ ತಮ್ಮ ತರಗತಿಗಳಿಗೆ ಹೋಗಬೇಕೆಂದೂ ಹೆಡ್‌ಮೇಷ್ಟರು ಕೇಳಿಕೊಂಡರು. ಆದರೂ ಹುಡುಗರು ಕದಲಲಿಲ್ಲ. ಮೇಷ್ಟರುಗಳೆಲ್ಲ ಪ್ರಯತ್ನಿಸಿದರು. ಡಿ. ಪಿಳ್ಳೆಯವರಿಗೂ ಕೂಡ ಹುಡುಗರು ಜಗ್ಗಲಿಲ್ಲ. ತಮ್ಮ ಮಾತು ಕೇಳದವರಿಗೆ ಬಲವಾದ ಶಿಕ್ಷೆಯಾಗುತ್ತದೆಂದು ಎಚ್ಚರಿಕೆಯಿತ್ತು ಹೆಡ್‌ಮೇಷ್ಟರು ಒಳಕ್ಕೆ ಹೊರಟು ಹೋದರು. ತಕ್ಷಣ ಹುಡುಗರು "ಬೋಲೋ ಭಾರತಮಾತಾಕೀ ಜೈ", "ಗಾಂಧೀಕೀ ಜೈ", "ಗೌರೀಶಂಕರ್ ಕೀ ಜೈ" ಎಂದು ಘೋಷಿಸಿದರು.

ಅಸಲು ವಿದ್ಯಾರ್ಥಿಗಳದೇ ಆಗಿದ್ದ ಗುಂಪಿಗೆ ಕ್ರಮೇಣ ಎಲ್ಲ ಬಗೆಯ ಜನರೂ ಸೇರಿಕೊಂಡರು. ಆಗಿಂದಾಗ್ಗೆ ಏಳುತ್ತಿದ್ದ 'ಗಾಂಧೀಕೀ ಜೈ' ಗಳಲ್ಲಿ ವಯಸ್ಕ ಗಂಟಲುಗಳನ್ನೂ ಪತ್ತೆ ಹಚ್ಚಬಹುದಾಗಿತ್ತು.

ಆರೇಳು ಜನ ಹುಡುಗರು ಸ್ವಯಂ ನಾಯಕರಾಗಿ ಮುಂದೆ ಬಂದವರೇ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಬಹಳ ಗಡಿಬಿಡಿಯಿಂದ ಓಡಾಡುತ್ತ "ಮರೆಯಬೇಡಿ. ಈವತ್ತು ಹರತಾಳ. ಶೋಕದ ದಿನ. ದುಃಖದಿಂದಲೂ ಮೌನದಿಂದಲೂ ಈ ದಿನವನ್ನು ಆಚರಿಸಿರಿ" ಎಂದು ಕೂಗುತ್ತಿದ್ದರು.

ಈ ಗುಂಪಿನಲ್ಲಿ ಸ್ವಾಮಿನಾಥನ್ ಕಣ್ಣಿಗೆ ಬೀಳದ ಕಣದಂತಿದ್ದ. ಇದೇ ಬಗೆಯ ಕಣ್ಣಿಗೆ ಬೀಳದ ಇನ್ನೊಂದು ಕಣವು ಸಡಗರದಿಂದ ಕಲ್ಲುಗಳನ್ನು ಸೇರಿಸಿ ಶಾಲೆಯ ಕಟ್ಟಡದ ಮುಂಭಾಗದ ಕಿಟಕಿಗಳ ಕಡೆಗೆ ಅದ್ಭುತವಾದ ಗುರಿಯಿಟ್ಟು ಬೀರುತ್ತಿತ್ತು. ಅವನ ಮಾದರಿಯನ್ನೇ ಸ್ವಾಮಿನಾಥನೂ ಅನುಸರಿಸಿದ. ಇಲ್ಲದಿದ್ದರೆ ಮನಸ್ಸು ಕೇಳುವುದೆ? ತಾನೂ ಒಂದಷ್ಟು ಕಲ್ಲುಗಳನ್ನು ಆರಿಸಿಕೊಂಡು ಕಿಟಕಿಗಳನ್ನು ಹುಡುಕಿದ. ಮುಕ್ಕಾಲುಪಾಲು ಕಿಟಕಿ ಗಾಜನ್ನೆಲ್ಲಾ ಆಗಲೇ ಯಾರೋ ವಿಚಾರಿಸಿಕೊಂಡುಬಿಟ್ಟಿದ್ದರು. ಅದನ್ನು ನೋಡಿ ಅವನಿಗೆ ಬಹಳ ನಿರಾಶೆಯಾಯಿತು.

ಹೆಡ್‌ಮೇಷ್ಟರ ರೂಮಿನ ಕಿಟಕಿಯ ಮೇಲುಗಡೆ ಒಂದು ವೆಂಟಿಲೇಟರ್ ಇತ್ತು. ಅದರ ಮೇಲೆ ಯಾರ ಕೃಪಾಕಟಾಕ್ಷವೂ ಇದುವರೆಗೆ ಬಿದ್ದಿರಲಿಲ್ಲ. ಸ್ವಾಮಿಗೆ ಬಹಳ ಖುಷಿಯಾಯಿತು. 'ಆಲೀಮದತ್' ಎಂದು ಕೂಗಿಕೊಂಡ. ಒಂದು ಕಲ್ಲನ್ನು ಅದರ ಕಡೆ

ಗುರಿಯಿಟ್ಟು ಎಸೆದ. ಕಲ್ಲು ಗಾಜಿಗೆ ತಗಲುವ ಇಂಪಾದ ಶಬ್ದವನ್ನು ಕೇಳುವುದಕ್ಕಾಗಿ ಕಿವಿಗೊಟ್ಟು ನಿಂತ. ಅರ್ಧ ಕ್ಷಣವಾದ ಮೇಲೆ ಗಾಜು ಒಡೆದ ಟಲ್ ಎಂಬ ಸದ್ದು ಕೇಳಿಸಿತು. ರೋಮಾಂಚಕರವಾಗಿತ್ತು ಆ ಶಬ್ದ. ಕೊಯಕಲು ಮನುಷ್ಯನೊಬ್ಬನು ಓಡೋಡಿ ಬಂದು ಗುಂಪಿನೊಳಕ್ಕೆ ನುಗ್ಗಿ ಕೀರಲು ದನಿಯಲ್ಲಿ, "ಬೋರ್ಡ್ ಹೈಸ್ಕೂಲಿನಲ್ಲಿ ಕ್ಲಾಸ್ ನಡೀತಿದೆ" ಎಂದು ಕಿರಚಿಕೊಂಡ.

ಈ ಕೆಟ್ಟ ಸುದ್ದಿ ಕೇಳಿ ಗುಂಪೆಲ್ಲ ಬೋರ್ಡ್ ಹೈಸ್ಕೂಲಿನ ಕಡೆ ಚಲಿಸ ತೊಡಗಿತು. ಮಾರ್ಕೆಟ್ ರಸ್ತೆಯ ಇನ್ನೊಂದು ತುದಿಯಲ್ಲಿತ್ತು ಈ ಹೈಸ್ಕೂಲು.

ಆ ಕಟ್ಟಡದ ಬಳಿ ಸೇರಿದಾಗ ಸ್ವಯಂನಿಯಮಿತ ನಾಯಕರು ಮೇಲಕ್ಕೆ ಕೈಯೆತ್ತಿ ನಾವು ಶಾಲೆಯೊಳಕ್ಕೆ ಹೋಗಿ ಅಧಿಕಾರಿಗಳೊಡನೆ ಸಂಧಾನ ನಡೆಸಿ ಹಿಂದಿರುಗುವ ವರೆಗೂ ಹೊರಗೆ ಜನರು ಶಾಂತಿ ಶಿಸ್ತುಗಳನ್ನು ಪರಿಪಾಲಿಸಬೇಕೆಂದು ಪ್ರಾರ್ಥಿಸಿಕೊಂಡರು. ಕಾಲು ಘಂಟೆಯೊಳಗೆ ಗುಂಪೆಲ್ಲ ಶಾಲೆಯ ಅಂಗಳದೊಳಕ್ಕೆ ಬಂದು ಬಿಟ್ಟಿತ್ತು.

ಗುಂಪಿನ ಮುಖಂಡ ಮುಖ್ಯೋಪಾಧ್ಯಾಯರಿಗೆ ಹೇಳಿದ : "ನಾವಿಲ್ಲಿ ಗಲಾಟೆ ಮಾಡುವುದಕ್ಕೆ ಬಂದಿಲ್ಲ. ನೀವು ಸ್ಕೂಲನ್ನು ಮುಚ್ಚಬೇಕೆಂಬುದಷ್ಟೇ ನಮ್ಮ ಕೇಳಿಕೆ. ನೀವು ಹಾಗೆ ಮಾಡಲೇಬೇಕು. ಅದು ಕಡ್ಡಾಯ. ನಮ್ಮ ನಾಡಿನ ನಾಯಕಮಣಿಯನ್ನು ಸೆರೆಮನೆಯಲ್ಲಿಟ್ಟಿದ್ದಾರೆ. ನಮ್ಮ ಮಾತೃಭೂಮಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದೆ."......ಇತ್ಯಾದಿ.

ಕಂದಿಹೋದ ಬಡಕಲ ಮುದಿಗೂಬೆಯನ್ನು ನೆನಪಿಗೆ ತರುವಂತಿತ್ತು ಮುಖ್ಯೋಪಾಧ್ಯಾಯರ ಸ್ವರೂಪ. "ಯಾರ ಅಪ್ಪಣೆ ಪಡೆದು ನೀವು ಒಳಕ್ಕೆ ಕಾಲಿಟ್ಟಿರಿ? ದಯಮಾಡಿಸಿ. ಇಲ್ಲದಿದ್ದರೆ ನಾನು ಪೊಲೀಸಿನವರಿಗೆ ಹೇಳಿ ಕಳುಹಿಸಬೇಕಾಗುತ್ತದೆ" ಎಂದು ಆತ ಹೇಳಿದರು.

ಇದಕ್ಕೆ ಉತ್ತರವಾಗಿ ಹುಡುಗರೆಲ್ಲ ಗಟ್ಟಿಯಾಗಿ ಕೇಕೆ ಹಾಕಿದರು. ಮನಬಂದಂತೆ ಕೂಗಿದರು. ಮುಖ್ಯೋಪಾಧ್ಯಾಯರನ್ನು ಅಣಕಿಸಿದರು. ಇದಾದ ನಂತರ ಬೋರ್ಡ್ ಸ್ಕೂಲಿನ ಕುರ್ಚಿ ಬೆಂಚುಗಳೆಲ್ಲ ಕೆಳಗುರುಳಿದವು ಕಿಟಕಿಗಳು ಒಡೆದವು. ಅಲ್ಲಿನ ವಿದ್ಯಾರ್ಥಿಗಳಲ್ಲಿ ಬಹುಮಂದಿ ಗುಂಪಿನೊಂದಿಗೆ ಬೆರೆತು ಹೋದರು. ಕೆಲವರು ಮಾತ್ರ ದೂರ ನಿಂತಿದ್ದರು. ಗುಂಪಿನವರು ಅವರನ್ನು ಕರೆದರು. ಅವರು ಬರಲಿಲ್ಲ. ಅದರಿಂದ ಗುಂಪಿನವರೆಲ್ಲ ಅವರನ್ನು ದರದರನೆ ಎಳೆದು ಹೊರಗೆ ಹಾಕಿದರು.

ಈ ನಾಟಕದಲ್ಲಿ ಸ್ವಾಮಿನಾಥ ವಹಿಸಿದ ಪಾತ್ರ ಅಲ್ಪವೇನಲ್ಲ. ಮುಖ್ಯೋಪಾಧ್ಯಾಯರು "ಪೊಲೀಸರನ್ನು ಕರೆಸುತ್ತೇನೆ" ಎಂದು ಬೆದರಿಸಿದಾಗ, "ಪೊಲೀಸಿನವರ ಮುಖದ ಮೇಲೆ ಉಗಿದು ಬಿಡುತ್ತೇವೆ" ಎಂದವನು ಅವನೇ. ಆದರೆ ಗುಂಪಿನ ಗಲಭೆಯಲ್ಲಿ ಇವನ ಮಾತು ಯಾರಿಗೂ ಕೇಳಿಸದೆ ಹೋಯಿತು. ಪೊಲೀಸಿನವರ ಹೆಸರು ಕೇಳಿದ ಇವನ ರಕ್ತ ಕುದಿಯಲಾರಂಭಿಸಿತು. ಲ್ಯಾಂಕಾಷೈರಿನ ಬೆರಳು ಕಟುಕರ ಜವಾನರಾದ ಪೊಲೀಸರನ್ನು ಕರೆಸುವುದಂತೆ? ಎಂಥ ನಾಚಿಕೆಗೇಡು! ಎಂಥ ದ್ರೋಹ! .......ಗಲಿಬಿಲಿ

ಮೊದಲಾದಮೇಲಂತೂ ಕಾರ್ಯಸಾಧನೆಯಲ್ಲಿ ಸ್ವಾಮಿ ಯಾರಿಗೂ ಹಿಂದೆ ಬೀಳಲಿಲ್ಲ. ಅನೇಕ ಕಿಟಕಿಗಳು ಭಿನ್ನವಾಗದೆ ಇನ್ನೂ ಉಳಿದಿರುವುದನ್ನು ನೋಡಿ ಅವನಿಗೆ ಅಮಿತವಾದ ಆನಂದವಾಯಿತು. ಕಿಟಕಿ ಗಾಜು ಒಡೆಯಬೇಕೆಂಬ ಆಸೆಗೆ ತನ್ನ ಶಾಲೆಯಲ್ಲಿ ಸಾಕಾದಷ್ಟು ಆಸ್ಪದ ದೊರೆತಿರಲಿಲ್ಲ. ಹಸಿದವನಿಗೆ ಇಲ್ಲಿ ರಸಗವಳ ಸಿಕ್ಕಂತೆ ಆಯಿತು. ಸ್ಕೂಲಿನ ಎಲ್ಲ ಕೋಣೆಗಳಿಗೂ ನುಗ್ಗಿ, ಸಿಕ್ಕಿದ ಸಾಮಾನೆಲ್ಲ ಕಿಟಕಿಗಳ ಮೇಲೆ ಎಸೆದ. ಬೋರ್ಡ್ ಹೈಸ್ಕೂಲಿನ ಹುಡುಗರನ್ನು ಹೊರಗೆ ಎಳೆದು ಹಾಕಲು ಆಸೆ. ಆದರೆ ತ್ರಾಣವಿಲ್ಲದೆ ಸುಮ್ಮನಿರಬೇಕಾಯಿತು. ಇದ್ದಕ್ಕಿದ್ದಂತೆ ಒಂದು ಹೊಸ ಯೋಚನೆ ಹೊಳೆಯಿತು ಅವನಿಗೆ. ಗುಂಪನ್ನು ಭೇದಿಸಿಕೊಂಡು ಇನ್ನೊಂದು ಕಡೆ ಓಡಿದ. ಅಲ್ಲಿ ಪ್ರಾಥಮಿಕ ತರಗತಿಗಳ ಮಕ್ಕಳು ಭಯದಿಂದ ನಡುನಡುಗುತ್ತ ಒಟ್ಟಿಗೆ ಹುದುಗಿಕೊಂಡಿದ್ದರು. ಆಕಳ ಹಿಂಡಿನ ಮೇಲೆ ಹುಲಿ ಎರಗಿದಂತೆ ಈ ಪಿಳ್ಳೆಗಳ ಮೇಲೆ ಸ್ವಾಮಿ ನುಗ್ಗಿದ. ಈ ರಭಸಕ್ಕೆ ಅಂಜಿ ಮಕ್ಕಳು ದಿಕ್ಕಾಪಾಲಾಗಿ ಚೆದರಿ, ಬಿದ್ದು, ಎದ್ದು, ಗೆದ್ದೆವಲ್ಲಪ್ಪಾ ಎಂದು ಓಡಿಹೋದರು. ಯಾವುದೋ ಒಂದು ಮಗು ಅದೃಷ್ಟಹೀನವಾಗಿತ್ತೆಂದು ಕಾಣುತ್ತೆ. ಸ್ವಾಮಿಯ ದೃಷ್ಟಿ ಅವನ ಮೇಲೆ ಬಿತ್ತು. ಅವನ ಮೇಲೆ ಹಾರಿ, ಟೋಪಿ ಕಿತ್ತು ನೆಲದ ಮೇಲೆಸೆದು, ಚೆನ್ನಾಗಿ ಅದನ್ನು ಮಣ್ಣಲ್ಲಿ ಹೊರಳಿಸಿ, ಹುಡುಗನನ್ನು ಬಾಯಿತುಂಬ ಬೈದು, ಅವನ ರಟ್ಟೆ ಹಿಡಿದು ಜಗ್ಗಿಸಿ, ತಲೆಯ ಮೇಲೆ ಒಂದು ಬಲವಾದ ಪೆಟ್ಟನ್ನು ಕೊಟ್ಟು ಅವನನ್ನು ಒಂದು ಮೂಲೆಗೆ ದಬ್ಬಿಬಿಟ್ಟ. ಅಷ್ಟು ಮಾಡಿದ ಮೇಲೆ ಸ್ವಲ್ಪ ಸಮಾಧಾನವಾಯಿತು.

ಬೋರ್ಡ್ ಹೈಸ್ಕೂಲಿನ ಕಾರ್ಯವನ್ನು ನಿಲ್ಲಿಸುವುದರಲ್ಲಿ ವಿಜಯ ಗಳಿಸಿ, ಗುಂಪಿನವರೆಲ್ಲ ಮಾರ್ಕೆಟ್ ರಸ್ತೆಯಲ್ಲಿ ಮೆರವಣಿಗೆ ಹೊರಟರು. ಸಾವಿರ ಗಂಟಲುಗಳು ನೂರು ಶ್ರುತಿಗಳಲ್ಲಿ ಹತ್ತು ತಾಳಗಳಲ್ಲಿ ಹಾಡುತ್ತಿದ್ದ ರಾಷ್ಟ್ರಗೀತೆಗಳಿಂದ ಗಾಳಿಯೆಲ್ಲ ಜಿಗಿಯುತ್ತಿತ್ತು. ಸ್ವಾಮಿನಾಥ ಮೆರವಣಿಗೆಯ ಕಟ್ಟಕಡೆಯ ಸಾಲಿನಲ್ಲಿ ಬರುತ್ತಿದ್ದ. ಯಾರು ಯಾರೋ ಅಪರಿಚಿತರು ಇವನ ಸುತ್ತ ತುಂಬಿಕೊಂಡಿದ್ದರು. ತಿಳಿದ ಮುಖ ಒಂದಾದರೂ ಇಲ್ಲ. ಬಿಸಲಿಂದ ಬೆಂದ ಆ ಬೋಳು ರಸ್ತೆಯ ಝಳದಿಂದ ಕಣ್ಣು ಕತ್ತಲೆಗಟ್ಟಿ ಹೋಯಿತು. ಸಾವಿರಾರು ಕಾಲುಗಳು ನಡೆದು ಹೋಗುತ್ತಿದ್ದುದರಿಂದ ಎದ್ದ ಬಿಳಿಯ ದೂಳು ಮಂಜಿನಂತೆ ಎಲ್ಲವನ್ನೂ ಆವರಿಸಿ ಉಸಿರಾಡುವುದಕ್ಕೂ ಕಷ್ಟವಾಗುತ್ತಿತ್ತು. ಸುತ್ತಲೂ ಇದ್ದ ಜನಗಳ ಬೆನ್ನು ಭುಜಗಳ ಹೊರತು ಸ್ವಾಮಿಗೆ ಏನೂ ಕಾಣುತ್ತಿರಲಿಲ್ಲ. ಆಗಾಗ ಯಾವುದೋ ಒಂದು ಕಟ್ಟಡ ಕಾಣಿಸಿಕೊಳ್ಳುವುದು. ಮತ್ತೆ ಮಾಯವಾಗುವುದು. ಕೂಗಿ ಕೂಗಿ ಗಂಟಲು ಒಣಗಿ ಬೆಂಡಾಗಿತ್ತು. ಬಹಳ ಹಸಿವೆತ್ತಿಕೊಂಡಿತ್ತು. ಹೇಗಾದರೂ ಮಾಡಿ ಯಾರಿಗೂ ತಿಳಿಯದಂತೆ ತಪ್ಪಿಸಿಕೊಂಡು ಮನೆ ಸೇರೋಣವೆಂದು ಯೋಚಿಸುವಷ್ಟರಲ್ಲಿ ಮೆರವಣಿಗೆ ಹಠಾತ್ತನೆ ನಿಂತಿತು. ನಿಮಿಷಮಾತ್ರದಲ್ಲಿ ಹಿಂದಿನ ಸಾಲುಗಳಲ್ಲಿದ್ದವರೆಲ್ಲ ಏನಾಗುತ್ತಿದೆ ಎಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಮುಂದಕ್ಕೆ ನುಗ್ಗಿದರು.

ಮೆರವಣಿಗೆ ಈಗ ಮಾರ್ಕೆಟ್ ರೋಡಿನ ಮಧ್ಯಭಾಗದಲ್ಲಿದ್ದ ಫೌಂಟನ್ ಬಳಿ ಬಂದಿತ್ತು. ಫೌಂಟನ್ನಿನ ಇನ್ನೊಂದು ಕಡೆ ಸುಮಾರು ಐವತ್ತು ಪೊಲೀಸಿನವರು ಲಾಠಿ ಹಿಡಿದು ನಿಂತಿದ್ದರು. ಹತ್ತು ಜನ ಪೊಲೀಸಿನವರು ಮೆರವಣಿಗೆಯನ್ನು ತಡೆಗಟ್ಟಿದರು. ಬೆಲ್ಟಿನಿಂದ ರಿವಾಲ್ವರ್ ನೇತು ಹಾಕಿಕೊಂಡು, ಕೈಯಲ್ಲೊಂದು ಛಡಿಬೆತ್ತ ಹಿಡಿದುಕೊಂಡಿದ್ದ ಎತ್ತರವಾದ ಒಬ್ಬಾತ ಮೆರವಣಿಗೆಯ ಬಳಿ ಬಂದ. ಆತನ ಬೆಲ್ಟುಗಳು, ಆತನ ಪಟ್ಟಿಗಳು, ಥಳಥಳನೆ ಹೊಳೆಯುತ್ತಿದ್ದ ಬೂಟ್ಸುಗಳು ಎಲ್ಲವನ್ನೂ ಕಂಡು ಸ್ವಾಮಿಗೆ ಆತನಲ್ಲಿ ಬಹಳ ಗೌರವ ಹುಟ್ಟಿತು. ಸ್ವಾಮಿ ಇನ್ನೊಂದಷ್ಟು ಸೂಕ್ಷ್ಮವಾಗಿ ನೋಡುತ್ತಾನೆ. ಆತ ರಾಜಂ ತಂದೆ! ಬೇರೆ ಯಾರೂ ಇಲ್ಲ. ಸ್ವಾಮಿನಾಥನಿಗೆ ಜೀವವೇ ಹೋದಹಾಗಾಯಿತು. ರಾಜಂ ತಂದೆ ಹೀಗಿದ್ದಾರಲ್ಲ ಎಂದು ಸ್ವಾಮಿಗೆ ಬಹಳ ಸಂಕಟವಾಯಿತು. ಆ ನೀಚರ, ಆ ದ್ರೋಹಿಗಳ ಮುಖಂಡನಾಗಿ ರಾಜಂ ತಂದೆ ನಿಂತುಕೊಳ್ಳಬೇಕೇ? ರಾಜಂ ತಂದೆ! ಛೆ, ಏನನ್ಯಾಯ!.......ಪೊಲೀಸು ಸೂಪರಿಂಟೆಂಡೆಂಟರ ಕಣ್ಣು ಕೈಗಡಿಯಾರದ ಕಡೆಯೇ ಇತ್ತು. "ಇದು ಅಕ್ರಮ ಕೂಟವೆಂದು ನಾನು ಸಾರುತ್ತೇನೆ. ಗುಂಪು ಚೆದರುವುದಕ್ಕೆ ಐದು ನಿಮಿಷಗಳ ಕಾಲಾವಧಿ ಕೊಡುತ್ತೇನೆ" ಎಂದು ಆತ ಗಟ್ಟಿಯಾಗಿ ಹೇಳಿದ. ಐದು ನಿಮಿಷವಾಯಿತು. ಆತ ತಲೆಯನ್ನು ಮೇಲಕ್ಕೆತ್ತಿ ಎಲ್ಲರ ಕಡೆ ಒಂದು ಸಲ ನೋಡಿ, ಒಡಕು ಗಂಟಲಲ್ಲಿ "ಛಾರ್ಜ್" ಎಂದು ಆಜ್ಞೆಯಿತ್ತ.

ದಿಕ್ಕು ದಿವಾಳಿಯಿಲ್ಲದ ಆ ಗೊಂದಲದಲ್ಲಿ ಸ್ವಾಮಿನಾಥ ಬದುಕಿದ್ದೇ ಹೆಚ್ಚು. ಎಷ್ಟು ಸಲ ನೆಲಕ್ಕುರುಳಿಕೊಂಡನೋ! ಎಷ್ಟು ಜನ ತುಳಿದರೋ...... ನುಗ್ಗಿದರು ಪೊಲೀಸಿನವರು ಗುಂಪಿನೊಳಕ್ಕೆ. ದಬ್ಬಿ, ನೂಕಿ, ಬಡಿದು, ಹೊಡೆದು ಎಲ್ಲರನ್ನೂ ಚೆಲ್ಲಾಪಿಲ್ಲಿಯಾಗಿ ಚೆದುರಿಸಿದರು. ಹೆದರಿ ಓಡುತ್ತಿದ್ದವರ ಗುಂಪೊಂದರಲ್ಲಿ ಸ್ವಾಮಿನಾಥನೂ ಸೇರಿಕೊಂಡ. ಪೋಲಿಸಿನವರು ಲಾಠಿಗಳನ್ನು ಬೀಸಿಕೊಂಡು ಅವರನ್ನು ಅಟ್ಟಿಸಿಕೊಂಡು ಬಂದರು. "ಅಯ್ಯೋ, ನನ್ನನ್ನು ಕೊಲ್ಲಬೇಡಿ, ದಮ್ಮಯ್ಯ, ನನಗೇನೂ ಗೊತ್ತಿಲ್ಲ" ಎಂದು ಸ್ವಾಮಿ ಅವರನ್ನು ಕೇಳಿಕೊಂಡ. ಅಕ್ಕಪಕ್ಕದವರ ಮೈಮೇಲೆ ಲಾಠಿ ಇಳಿದ ಮಸಕು ಸದ್ದು ಅವನ ಕಿವಿಗೆ ಬಿತ್ತು. ಅವರಲ್ಲೊಬ್ಬರ ಹಣೆಯಿಂದ ರಕ್ತ ಚಿಮ್ಮಿತು. ಲಾಠಿಗಳು ಮತ್ತೆ ಇಳಿದವು. ಓಡುತ್ತಿದ್ದವನೊಬ್ಬ ನರಳುತ್ತ ಕೆಳಗುರುಳಿದ. ಮೂರನೆಯವನೊಬ್ಬನ ಬೆನ್ನ ಮೇಲೆ ಲಾಠಿಗಳು ಬಿದ್ದದ್ದೂ ಬಿದ್ದದ್ದೇ.......

ಅಂಜಿಕೆಯಿಂದ ಸ್ವಾಮಿ ತಲ್ಲಣಿಸಿದ. ಅವನ ತಲೆ ಸುತ್ತುತ್ತಿತ್ತು. ಆದರೂ ಬಲವನ್ನೆಲ್ಲ ಬಿಟ್ಟು, ಎಷ್ಟು ಬೇಗ ಓಡಲು ಸಾಧ್ಯವಾಯಿತೋ ಅಷ್ಟು ಬೇಗ ಓಡಿದ. ಆದರೆ ಪೊಲೀಸಿನವರು ಬಿಡಬೇಕಲ್ಲ! ಅವನ ಸಮಕ್ಕೂ ಓಡಿದರು. ಅವರಲ್ಲೊಬ್ಬ ಸ್ವಾಮಿಯ ಜುಟ್ಟು ಹಿಡಿದೆಳೆದು, "ಏನೋ,- ಯಾಕೋ ಬಂದೆ ಇಲ್ಲಿ? ನಿನಗೇನು ಕೆಲಸವೋ?" ಎಂದ.

"ನನಗೇನೂ ಗೊತ್ತಿಲ್ಲಾಪ್ಪ. ನನ್ನನ್ನು ಬಿಟ್ಟುಬಿಡೀಪ್ಪ, ನಿಮಗೆ ಪುಣ್ಯ ಬರುತ್ತೆ" ಎಂದು ಸ್ವಾಮಿ ಅಂಗಲಾಚಿದ.

"ಏನೂ ಗೊತ್ತಿಲ್ಲವಂತೆ, ನೋಡೋ ಈ ಕೋತೀನ!" ಎಂದ ಆ ಪೊಲೀಸಿನವನು......ಹತ್ತಿರದಿಂದ ನೋಡಿದರೆ ಪೊಲೀಸಿನವರು ಎಷ್ಟು ಅಸಹ್ಯವಾಗಿ, ಎಷ್ಟು ದಯ್ಯದಯ್ಯವಾಗಿ ಕಾಣಿಸುತ್ತಾರೆ! ಅಬ್ಬ! ಆ ಅಸಹ್ಯವಾದ ಪೊಲೀಸಿನವನು ತನ್ನ ಲಾಠಿಯ ತುದಿಯನ್ನು ಸ್ವಾಮಿಯ ತಲೆಯ ಮೇಲೆ ಮೆತ್ತಗೆ ತಗಲಿಸಿ, "ಓಡಿಹೋಗು, ಒದ್ದುಬಿಟ್ಟೇನ್; ಅಷ್ಟರಲ್ಲಿ ಮನೆ ಸೇರಿಕೊ, ನಡಿ" ಎಂದ.

## ಮೂರು

ಅಪ್ಪನ ಕೈಯಲ್ಲಿ ಈ ಮಾತು ಎತ್ತಕೂಡದೆಂದು ಸ್ವಾಮಿ ತೀರ್ಮಾನ ಮಾಡಿಕೊಂಡಿದ್ದ. ಸಾಯಂಕಾಲ ಅಪ್ಪ ಮನೆಗೆ ಬಂದರು. ಬಂದೊಡನೆ ಕೋಟು ಬಿಚ್ಚುವುದಕ್ಕೂ ಮುಂಚೆ, ಅಮ್ಮನನ್ನು ಕರೆದು ಆ ದಿನದ ಘಟನೆಗಳ ವರದಿಯನ್ನೊಪ್ಪಿಸಿದರು. "ಆ ಪೊಲೀಸ್ ಸೂಪರಿಂಟೆಂಡೆಂಟು ಬಲು ಕಟುಕ. ಅಬ್ಬ!" ಎಂದು ಹೇಳಿ, ಬಟ್ಟೆ ಬದಲಾಯಿಸಿಕೊಂಡು ಬರುವುದಕ್ಕಾಗಿ ತಮ್ಮ ಕೊಟಡಿಗೆ ಹೋದರು. ಹತ್ಯಾಕಾಂಡವಾರಂಭಿಸಲು ಅಪ್ಪಣೆ ಕೊಡುವುದಕ್ಕೆಂದು ಗಡಿಯಾರದ ಕಡೆಯೇ ನೋಡುತ್ತ ಕ್ಷಣಕ್ಷಣವನ್ನೂ ಎಣಿಸುತ್ತಿದ್ದ ರಾಜಂ ತಂದೆಯ ಚಿತ್ರ ಸ್ವಾಮಿಯ ಮನಸ್ಸಿನ ಮುಂದೆ ನಿಂತಿತು. ಆತ ಕಟುಕನೇ ಸರಿಯೆಂದು ಅಪ್ಪ ಹೇಳಿದ ಮಾತನ್ನು ಅವನು ಒಪ್ಪಿಕೊಂಡ. ಅಪ್ಪ ಟೈಯನ್ನು ಬಿಚ್ಚುತ್ತ ಹೊರಗಡೆ ಬಂದು, "ಐವತ್ತು ಜನರನ್ನು ಆಸ್ಪತ್ರೆಗೆ ಸೇರಿಸಿದ್ದಾರಂತೆ. ಮೈಯೆಲ್ಲ ಗಾಯಗಳಾಗಿ ಹೋಗಿವೆಯಂತೆ. ಇಬ್ಬರು ಮೂರು ಜನ ಸತ್ತು ಹೋದರೆಂದು ಸುದ್ದಿ" ಎಂದರು. ಸ್ವಾಮಿಯ ಕಡೆ ತಿರುಗಿ, "ಹುಡುಗರು ತುಂಬ ತಂಟೆ ಮಾಡಿದರಂತೆ. ನೀನೇನೂ ಮಾಡಲಿಲ್ಲ ತಾನೆ?" ಎಂದು ಕೇಳಿದರು.

ತನ್ನ ಟೋಪಿಯ ಸಮಸ್ಯೆಯನ್ನು ಪರಿಹರಿಸಲು ಇದೇ ಸುಸಮಯವೆಂದು ಸ್ವಾಮಿಗೆ ತೋಚಿತು. "ಅಪ್ಪಾ, ಇವತ್ತು ಸ್ಟ್ರೈಕು, ಹರತಾಳ........ಏನು ಗಲಾಟೆ ಅಂತೀರಿ! ಯಾರೋ ಬಂದು ನನ್ನ ಟೋಪಿ ಕಿತ್ತು, ಹರಿದುಹಾಕಿ ಚಿಂದಿಚಿಂದಿ ಮಾಡಿಬಿಟ್ಟರು.......ನಾಳೆ ಸ್ಕೂಲಿಗೆ ಹೋಗಬೇಕು. ಆ ವೇಳೆಗೆ ನನಗೊಂದು ಟೋಪಿ ಬೇಕಪ್ಪಾ" ಎಂದ.

"ಯಾರು ಅವನು ಕಿತ್ತು ಹಾಕಿದ್ದು?" ಎಂದು ಅಪ್ಪ ಕೇಳಿದರು.

"ನನಗೆ ಗೊತ್ತಿಲ್ಲ. ಯಾರೋ ಒಬ್ಬ ಪೋಲೀ........"

"ಯಾಕಂತೆ ಹಾಗೆ ಮಾಡಿದ್ದು?"

"ಪರದೇಶೀ ಟೋಪಿಯಂತೆ......."

"ಯಾರು ಹೇಳಿದ್ದು? ಮೊನ್ನೆತಾನೇ ಎರಡು ರೂಪಾಯಿ ಕೊಟ್ಟು ಖದ್ದರ್ ಸೊಸೈಟಿಯಿಂದ ತಂದೆನಲ್ಲೋ! ಕರೀ ಖಾದಿ ಟೋಪಿ. ಎಲ್ಲಾ ಗೊತ್ತಿರೋವನ ಹಾಗೆ ಮಾತಾಡ್ತೀಯಲ್ಲ. ನೀನು?"

"ನನಗೆ ಗೊತ್ತಿರಲಿಲ್ಲಪ್ಪ, ನಾನು ಬೇಡ ಅಂತ ಹಟ ಹಿಡಿದೆ. ಆದರೆ ಅವನು

ಕೇಳಲಿಲ್ಲ. ಅವರೆಲ್ಲ ಸೇರಿಕೊಂಡು ನನ್ನನ್ನ ಚೆನ್ನಾಗಿ ಅಪ್ಪಚ್ಚಿ ಮಾಡಿಬಿಡೋದರಲ್ಲಿದ್ದರು."

"ಅವನ್ನ ತದಕಬೇಕಾಗಿತ್ತು ಬಲವಾಗಿ. ಖದ್ದರ್ ಸೊಸೈಟಿಯಲ್ಲಿ ನಿನ್ನ ಟೋಪಿ, ನಿನ್ನ ಕೋಟಿಗೆ ಬಟ್ಟೆ ಎರಡೂ ಒಟ್ಟಿಗೆ ಒಂದೇ ದಿನ ತಂದೆನಲ್ಲೋ? ಖಾದೀ ಅಲ್ಲ ಅಂತ ಹೇಳೋವರು ಕುರುಡರೇ ಆಗಿರಬೇಕು."

"ನನ್ನ ಟೋಪಿ ಲ್ಯಾಂಕಾಷೈರದೂ ಅಂದರಣ್ಣ."

"ಅವನ ತಲೆ! ಬಾಯಿ ಮುಚ್ಚಿಕೊಂಡು ಬಿದ್ದಿರಿ ಅಂತ ದಬಾಯಿಸಬೇಕು ಅವರ್ನ. ಗೊತ್ತಾಯ್ತೋ? ಇನ್ನು ಮೇಲೆ ಅದು ಇದು ಹೇಳಿದವರಿಗೆಲ್ಲ ಬಟ್ಟೆ ಬಿಚ್ಚಿಕೊಟ್ಟುಬಿಟ್ಟರೆ ನೀನು ಬೆತ್ತಲೇನೇ ಇರಬೇಕಾಗುತ್ತೆ, ಅಷ್ಟೆ. ನನಗೆ ಹೇಳಿಕೊಡೋಕೆ ಬರಬೇಕೇ ನನ್ನ ಜವಾಬ್ದಾರೀನ? ಒಂದು ಬಿಡಿ ಕಾಸನ್ನೂ ಪರದೇಶಕ್ಕೆ ಕಳಿಸಿಕೊಡೋವನಲ್ಲ ನಾನು....... ಅದೇನೇ ಆಗಲಿ. ನಿಮ್ಮಂಥ ಚಿಲ್ಟೇರಿಗಳೆಲ್ಲ ರಾಜಕೀಯಕ್ಕೆ ತಲೆಹಾಕದೆ ನಿಮ್ಮಷ್ಟಕ್ಕೆ ನೀವಿರಬಾರದೇನ್ರೋ? ಈಗಾಗಲೇ ಸಾಕಾದಷ್ಟು ಫಜೀತಿ ಇದೆ ನಮ್ಮ ದೇಶದಲ್ಲಿ. ಇನ್ನು ನಿಮ್ಮಂಥಾ ಮಕ್ಕಳು ಬೇರೆ ಬಂದು ಬಿಟ್ಟರೆ......"

ಹಾಸಿಗೆಯಲ್ಲಿ ಮಲಗಿ ಎಷ್ಟು ಹೊತ್ತಾದರೂ ಸ್ವಾಮಿಗೆ ನಿದ್ದೆ ಬರಲಿಲ್ಲ. ಹೊತ್ತು ಏರುತ್ತ ಬಂತು. ಮನೆಯ ದೀಪಗಳು ಒಂದಾದಮೇಲೊಂದು ಆರಿದವು. ಆ ದಿನ ತಾನು ತಿಂದ ಪೆಟ್ಟುಗಳನ್ನೆಲ್ಲ ಎಣಿಸತೊಡಗಿದ ಸ್ವಾಮಿ. ಮೊಣಕಾಲು ಮೊಣಕೈಗಳ ಕತೆ ಹೇಳತೀರದು. ಮೂರು ನಾಲ್ಕು ಸಲ ಮುಗ್ಗರಿಸಿ ಬಿದ್ದಿದ್ದು ನೆನಪಾಯಿತು. ಮೊದಲನೆಯದು-ಆ, ಹೌದು-ರಾಜಂ ಕಾರಿನಿಂದ ಇಳಿದು ಸ್ಕೂಲಿನೊಳಗೆ ಹೋದಾಗ, ತಾನು ಬಚ್ಚಿಟ್ಟು ಕೊಳ್ಳಬೇಕೆಂದು ಓಡಿ ಅವಸರದಲ್ಲಿ ಜಲ್ಲಿಕಲ್ಲಿನ ರಾಶಿಯ ಮೇಲೆ ಜಾರಿ ಬಿದ್ದದ್ದು, ಮೊಣಕಾಲು ಜೋರಾಗಿ ತರಚಿಕೊಂಡು ಚರ್ಮ ಕಿತ್ತುಹೋಗಿದ್ದದ್ದು. ಆಮೇಲೆ ಪೋಲೀಸಿನವರು ನುಗ್ಗಿದಾಗ, ತಾನು ಓಡಿ ಓಡಿ ಹೋಗಿ, ಎಡವಿ, ಯಾವುದೋ ಜವಳಿ ಅಂಗಡಿ ಮುಂದೆ ಅನಾಮತ್ತು ಬಿದ್ದದ್ದು. ಆಗ ಯಾರೋ ರಾಕ್ಷಸ ಬೆನ್ನ ಮೇಲೆ ಬಲವಾಗಿ ತುಳಿದು ಅಜ್ಜಿಬಜ್ಜಿ ಮಾಡಿದ್ದು.....

ಪಕ್ಕಕ್ಕೆ ತಿರುಗಿಕೊಳ್ಳಲು ನೋಡುತ್ತಾನೆ-ಸೊಂಟ ವಿಪರೀತ ನೋಯುತ್ತಿದೆ. ತೊಡೆಯ ಮೇಲೆ ಇಪ್ಪತ್ತು ಮಣ ಹೇರಿದ ಹಾಗಿದೆ. ತಲೆಯಲ್ಲಿ ಸುತ್ತಿಗೆ ತೆಗೆದುಕೊಂಡು ಹೊಡೆದ ಹಾಗಾಗುತ್ತಿದೆ. 'ಅಬ್ಬ, ಎಂಥಾ ಪಿಶಾಚಿಗಳು ಆ ಪೋಲೀಸಿನವರು. ಅವರ ಲಾಠಿಯೇಟೇನು ಸಾಮಾನ್ಯವಾಗಿತ್ತೆ? ಅಲ್ಲ. ಅಷ್ಟು ಸಾಲದೂ ಅಂತ ನನ್ನನ್ನು ಕೋತೀ ಅಂತ ಬೇರೆ ಬೈದಿದ್ದಾರೆ! ನನ್ನನ್ನೇ ಕೋತೀ ಅನ್ನೋದು? ಇಷ್ಟಕ್ಕೂ, ಪೋಲೀಸಿನವರೇ ಕೋತಿಗಳ ಹಾಗೆ ಕಾಣಿಸೋವರು. ಅವರು ಆಡೋದೂನೂ ಹಾಗೇನೆ........'

## ನಾಲ್ಕು

ಹೆಡ್‌ಮೇಷ್ಟರು ತರಗತಿಯೊಳಕ್ಕೆ ಪ್ರವೇಶಿಸಿದರು; ಅವರ ಮುಖ ಕೆರಳಿತ್ತು; ಕಣ್ಣಿನಲ್ಲಿ ಏನೋ ಅನಿಷ್ಟ ಸಂಭವಿಸಬಹುದೆಂಬ ಸೂಚನೆಯಿತ್ತು. ಕ್ಲಾಸಿನಿಂದ ಓಡಿಹೋದರೆ ಚೆನ್ನಾಗಿರುತ್ತದೆನ್ನಿಸಿತು ಸ್ವಾಮಿಗೆ. ಹೆಡ್‌ಮೇಷ್ಟರು ಹಲ ನಿಮಿಷ "ಅಯೋಗ್ಯ ಮುಂಡೇವೆ! ನಿನ್ನೆ ಮಾಡಬಾರದ್ದನ್ನೆಲ್ಲ ಮಾಡಿಬಿಟ್ಟು ಈವತ್ತು ಕ್ಲಾಸಿಗೆ ಕುರಿಗಳಂತೆ ಕುತ್ತಿಗೆ ತಗ್ಗಿಸಿ ಕುಕ್ಕರಿಸಿ ಕೊಳ್ಳೋಕೆ ನಾಚಿಕೆ ಆಗೊಲ್ವೇ ನಿಮಗೆ?" ಎಂದರು. ತರಗತಿಗೆ ಐದಾರು ಹುಡುಗರು ಮಾತ್ರ ಹಿಂದಿನ ದಿನ ಬಂದಿದ್ದರು. ಅವರಿಗೆ ವಿಶೇಷ ಗೌರವ ಸೂಚಿಸಬೇಕೋ ಇಲ್ಲವೊ? ಅದಕ್ಕಾಗಿ ಹೆಡ್‌ಮೇಷ್ಟರು ಅವರ ಹೆಸರುಗಳನ್ನು ಓದಿದರು. ಆಮೇಲೆ, ತಪ್ಪಿಸಿಕೊಂಡವರ ಹೆಸರುಗಳನ್ನೆಲ್ಲ ಓದಿ ಇವರೆಲ್ಲ ಬೆಂಚಿನ ಮೇಲೆ ನಿಂತುಕೊಳ್ಳಬೇಕು ಎಂದು ಅಪ್ಪಣೆ ಮಾಡಿದರು. ಬೆಂಚಿನ ಮೇಲೆ ನಿಲ್ಲಿಸಿದರೆ ಸಾಲದು ಎಂದು ಅವರನ್ನೆಲ್ಲಾ ಡೆಸ್ಕಿನ ಮೇಲೆ ನಿಲ್ಲಿಸಿದರು. ಅವರಲ್ಲಿ ಸ್ವಾಮಿಯೂ ಒಬ್ಬ. ಆ ಔನ್ನತ್ಯದಿಂದ ಸ್ವಾಮಿಗೆ ಬಹಳ ಅಪಮಾನವಾಯಿತು......ಹೀಗೆ ದುಷ್ಟ ಶಿಕ್ಷಣ ಮಾಡಿದ ಮೇಲೆ, ಮೇಷ್ಟರು ಭಾರಿ ಭಾಷಣ ಮಾಡಿದರು. ಭಾಷಣ ಮುಗಿಯಿತು. "ನಿನ್ನೆ ಯಾಕೆ ಬರಲಿಲ್ಲ? ಒಬ್ಬೊಬ್ಬರಾಗಿ ಹೇಳಿ" ಎಂದರು. "ತುಂಬ ತಲೆನೋವು ಬಂದಿತ್ತು, ಅದರಿಂದ ಬರೋಕಾಗಲಿಲ್ಲ ಸಾರ್" ಎಂದ ಒಬ್ಬ. ಅವನಿಗೆ ಡಾಕ್ಟರ್ ಸರ್ಟಿಫಿಕೇಟ್ ತರಹೇಳಿದರು ಹೆಡ್‌ಮೇಷ್ಟರು. ಎರಡನೆಯವನು, "ನೆನ್ನೆ ನಾನು ಸ್ಕೂಲಿಗೆ ಬರುತ್ತಿದ್ದೆ ಸಾರ್, ಯಾರೋ ಸಿಕ್ಕಿ ಈವತ್ತು ಸ್ಕೂಲಿಲ್ಲ ಅಂದುಬಿಟ್ಟರು ಸಾರ್. ಅದರಿಂದ ಬರಲಿಲ್ಲ, ಸಾರ್"ಎಂದು ಹೇಳಿದ. ಅದಕ್ಕೆ ಹೆಡ್‌ಮೇಷ್ಟರು, "ಬೀದೀಲಿ ಹೋಗೋ ಪುಂಡುಪೋಕರಿಗಳು ಹೇಳೋದನ್ನೆಲ್ಲ ಕೇಳಿಕೊಂಡು ಕುಣೀತೀಯಾ? ಚಮಡಾ ನಿಕಾಲ್ ಮಾಡಬೇಕು ನಿನಗೆ. ಅದು ಸರಿಯೆ; ಸ್ಕೂಲ್ ಹತ್ತಿರ ಬಂದು ನೋಡಿಕೊಂಡು ಹೋಗಬೇಕಾಗಿತ್ತು. ಯಾಕೆ ಹಾಗೆ ಮಾಡಲಿಲ್ಲ?" ಎಂದರು. ಉತ್ತರವಿಲ್ಲ. ಹತ್ತು ದಿನದ ಆಬ್ಸೆಂಟ್ ಗುರ್ತು, ಎರಡು ರೂಪಾಯಿ ಜುಲ್ಮಾನೆ, ದಿನವೆಲ್ಲಾ ಬೆಂಚಿನ ಮೇಲೆ ನಿಲ್ಲುವುದು-ಇಷ್ಟು ಶಿಕ್ಷೆ ಬಿತ್ತು. ಮೂರನೆಯವನಿಗೆ ತಲೆನೋವು ಬಂದಿತ್ತು. ನಾಲ್ಕನೆಯವನಿಗೆ ಹೊಟ್ಟೆನೋವು ಬಂದಿತ್ತು. ಐದನೆಯವನು, "ಸ್ಕೂಲಿಗೆ ಹೊರಟಿದ್ದೆ ಸಾರ್, ಆಗ ನಮ್ಮ ಅಜ್ಜಿ ಸತ್ತುಹೋದಳು, ಸಾರ್" ಎಂದ. "ನಿಮ್ಮ ತಂದೆಯಿಂದ ಒಂದು ಕಾಗದ ತೊಗೊಂಬಾ" ಎಂದರು ಹೆಡ್‌ಮೇಷ್ಟರು. "ನನಗೆ ತಂದೆ ಇಲ್ಲ, ಸಾರ್." "ಹಾಗಾದರೆ ಪೋಷಕರು ಯಾರು? ಅಜ್ಜಿ. ಆದರೆ ಅಜ್ಜಿ ಸತ್ತುಹೋದರು, ಅಲ್ಲವೆ?" "ಅಲ್ಲ, ಅವರು ಇನ್ನೊಬ್ಬ ಅಜ್ಜಿ." "ಒಬ್ಬ ಮನುಷ್ಯನಿಗೆ ಎಷ್ಟು ಜನ ಅಜ್ಜಿಯರಿರುತ್ತಾರೆ?" ಉತ್ತರವಿಲ್ಲ. "ಪಕ್ಕದ ಮನೆಯಿಂದ ಒಂದು ಕಾಗದ ಬರೆಸಿಕೊಂಡು ತರೋಕ್ಕಾಗುತ್ತೋ?" "ಆಗೊಲ್ಲ, ಅಕ್ಕಪಕ್ಕದ ಮನೆಯವರು ಯಾರಿಗೂ ಓದು ಬರಹ ಬರೊಲ್ಲ." "ಆ ಪ್ರದೇಶ ಅಷ್ಟು ಹಿಂದುಳಿದಿರುವುದಾದರೆ ಒಬ್ಬರು ಮೇಷ್ಟರನ್ನು ಕಳುಹಿಸಿ ಅಜ್ಜಿ ಸತ್ತಿದ್ದು ನಿಜವೇ

ವಿಚಾರಿಸುತ್ತೀನಿ" ಎಂದರು ಹೆಡ್‌ಮೇಷ್ಟರು. ಸ್ವಲ್ಪ ಹೊತ್ತು ಮೌನ. ಹಣೆಯ ಮೇಲೆ ಬೆವರು. ಆಮೇಲೆ ಉತ್ತರ : "ಅವರೊಬ್ಬರಿಗೂ ಗೊತ್ತಿರೊಲ್ಲ, ಸಾರ್. ಅಜ್ಜಿ ಹೋದದ್ದು ಹಳ್ಳೀಲಿ." ಹೆಡ್‌ಮೇಷ್ಟರು ಬೆತ್ತ ತೆಗೆದುಕೊಂಡು ಹುಡುಗನ ಕೈಗಳ ಗೆಣ್ಣಿನ ಮೇಲೆ ಬಲವಾಗಿ ಬಿಗಿದರು. ಬೀದಿನಾಯಿ ಅಂತ ಬೈದರು. ಹದಿನೈದು ದಿನ ಸಸ್ಪೆಂಡ್ ಎಂದು ತೀರ್ಮಾನ ಕೊಟ್ಟರು.

ಸ್ವಾಮಿನಾಥನ ಸರದಿ ಬಂತು. ಕಣ್ಣುಕಣ್ಣು ಬಿಟ್ಟ. ಸುತ್ತಮುತ್ತ ನೋಡಿದ. ರಾಜಂ ಮೂರು ಬೆಂಚುಗಳ ಆಚೆ ಕುಳಿತಿದ್ದ. ಪ್ರಯಾಸದಿಂದ ಬೇರೆ ಕಡೆ ಮುಖ ತಿರುಗಿಸಿಕೊಂಡಿದ್ದ. ಅವನ ಗಮನವೆಲ್ಲ ಬೋರ್ಡಿನ ಮೇಲೆಯೆ. ಅವನ ಕೆಂಪು ಕಿವಿ ಮಾತ್ರ ಸ್ವಾಮಿಗೆ ಕಾಣಿಸುತ್ತ ಇತ್ತು. ಯಾಕೋ ಅದನ್ನು ಕಂಡು ಸ್ವಾಮಿಗೆ ರೇಗಿತು. ಆ ಕೆಂಪು ಕಿವಿಯವನ ತಲೆ ಇತ್ತ ಕಡೆ ತಿರುಗಿ ತನ್ನ ಮುಖವನ್ನಲ್ಲಿ ನೋಡುತ್ತೋ ಎಂದು ಸ್ವಾಮಿಗೆ ತುಂಬ ಆತಂಕವಾಗಿತ್ತು. ಯಾರಾದರೂ ಪುಣ್ಯಾತ್ಮರು ಆ ಬೋರ್ಡನ್ನು ತಂದು ತನಗೂ ಆ ಕೆಂಪು ಕಿವಿಗೂ ಮಧ್ಯೆ ಇಟ್ಟರೆ!.......

ಹೆಡ್‌ಮೇಷ್ಟರು ಕೇಳುತ್ತಿದ್ದ ಪ್ರಶ್ನೆ ಅವನ ಕಿವಿಗೇ ಬೀಳಲಿಲ್ಲ. ಅವರ ಬೆತ್ತ ಇವನ ಮೈಮೇಲೆ ಎರಗಿದಾಗಲೇ ಅವನಿಗೆ ಎಚ್ಚರವಾದುದು.

"ಯಾಕೆ ಬರಲಿಲ್ಲ ನಿನ್ನೆ?" ಎಂದರು ಹೆಡ್‌ಮೇಷ್ಟರು. ತಾನು ಬಂದೇ ಇದ್ದೆ, ಚಕ್ಕರ್ ಹೊಡೆಯಲೇ ಇಲ್ಲ ಅಂತ ದಬಾಯಿಸೋಣ ಎನಿಸಿತು ಮೊದಲು. ಆದರೆ ರಿಜಿಸ್ಟರ್ ಅಲ್ಲೇ ಇತ್ತು. 'ಇಲ್ಲ ಇಲ್ಲ, ಕಲ್ಲು ತಗೊಂಡು ಹೊಡೆದು ಬಿಟ್ಟರು. ಬರೋಕೆ ಪ್ರಯತ್ನ ಮಾಡಿದೆ; ಆದರೆ ನನ್ನ ಟೋಪಿ ಕಿತ್ತುಕೊಂಡು ಸುಟ್ಟು ಹಾಕಿಬಿಟ್ಟರು. ಬರ್ತಾ ಇದ್ದೆ. ಯಾರು ಯಾರೋ ಧಾಂಡಿಗರೆಲ್ಲ ಸೇರಿಕೊಂಡು ದಬ್ಬಿಬಿಟ್ಟರು.......ಮಹಾನುಭಾವನನ್ನ ಜೈಲಿಗೆ ಹಾಕಿದಾಗ ....... ನಾಚಿಕೆಯಿಲ್ಲವೇ ನಿಮಗೆ? ಬ್ರಿಟಿಷರ ಗುಲಾಮನಾಗಿರೋಕೆ......ಕತ್ತರಿಸಿ ಹಾಕಿಬಿಡಲಿಲ್ಲವೇ ಅವರು.......ಡಕ್ಕಾ ಮಸ್ಲಿನ್........ಗುಲಾಮರ ಗುಲಾಮ, ದಾಸಾನುದಾಸ......' ಆಗ ಅವನ ತಲೆಯೊಳಗೆ ನುಗ್ಗಿದ ಕಾರಣಗಳಲ್ಲಿ ಇವು ಕೆಲವು. ಆದರೆ ಅವನ್ನೆಲ್ಲ ಗಟ್ಟಿಯಾಗಿ ಹೇಳಲಿಲ್ಲ ಸದ್ಯ! ತಲೆನೋವು ಎನ್ನೋಣ ಎಂದರೆ ತನಗೊಬ್ಬನಿಗೇ ಅಲ್ಲದೆ ಎಷ್ಟೋ ಜನಕ್ಕೆ ತಲೆನೋವು ಬಂದುಬಿಟ್ಟಿತ್ತು......ಹೆಡ್‌ಮೇಷ್ಟರು, "ಬಾಯಿ ಬಿಡೊಲ್ಲವೇನೋ?" ಎಂದು ಅರಚಿದರು. ಸ್ವಾಮಿಯ ಬಲಭುಜದ ಮೇಲೆ ಬೆತ್ತ ಇಳಿಯಿತು. ಚುರ್ರೆಂದಿತು. ಏಟು ಬಿದ್ದ ಸ್ಥಳವನ್ನು ಎಡಗೈಯಿಂದ ಉಜ್ಜಿಕೊಳ್ಳುತ್ತ ಹೆಡ್‌ಮೇಷ್ಟರ ಕಡೆಯೆ ನೋಡುತ್ತ ನಿಂತುಬಿಟ್ಟ. "ಕೇಳಿದ ಪ್ರಶ್ನೆಗೆ ಉತ್ತರ ಹೇಳದೆ ಹೆಣದ ಹಾಗೆ ಕಣ್ಣು ಬಿಟ್ಟುಕೊಂಡು ನಿಂತಿದ್ದರೆ, ಭೂಗತ ಮಾಡಿಬಿಡ್ತೀನಿ, ಹುಷಾರ್!" ಎಂದು ಹೆಡ್‌ಮೇಷ್ಟರು ಗರ್ಜಿಸಿದರು.

"ನ.....ನನಗೆ ಬರೋಕಾಗಲಿಲ್ಲ ಸಾ........" ಸ್ವಾಮಿನಾಥನ್ ತೊದಲಿದ.

"ಓಹೋ ಹಾಗೇನು?" ಎಂದು ಹೇಳಿ ಹೆಡ್‌ಮೇಷ್ಟರು ಮುಂದಿನ ಬೆಂಚಿನಲ್ಲಿ ಕುಳಿತಿದ್ದ ಹುಡುಗನೊಬ್ಬನಿಗೆ "ಜವಾನನ್ನು ಕರೆದುಕೊಂಡು ಬಾರೋ" ಎಂದು ಅಪ್ಪಣೆ

ಮಾಡಿದರು.

'ಜವಾನನ ಕೈಲಿ ಹೊಡೆಸ್ತಾರಾ ನನ್ನನ್ನ? ಹಾಗೇನಾದರೂ ಮಾಡಲಿ, ಎಲ್ಲರನ್ನೂ ಬಲವಾಗಿ ಕಚ್ಚಿ ಕಚ್ಚಿ ಕೊಂದು ಬಿಡ್ತೀನಿ' ಎಂದುಕೊಂಡ ಸ್ವಾಮಿ. ಜವಾನ ಬಂದ. ಅವನಿಗೆ ಹೆಡ್‌ಮೇಷ್ಟರು ಹೇಳಿದರು : "ಡೆಸ್ಕಿನ ಮೇಲೆ ನಿಂತಿದ್ದಾನಲ್ಲ ಈ ಅಯೋಗ್ಯ. ಇವನ ವಿಷಯ ನಿನಗೇನು ಗೊತ್ತು ಹೇಳೋ."

ಜವಾನ ಸ್ವಾಮಿಯನ್ನು ನುಂಗುವಂತೆ ನೋಡಿ, "ಕಿಟಕಿ ಒಡೀತಾ ಇರಲಿಲ್ಲವೇನೋ ನೀನು?" ಎಂದ.

ಹೆಡ್‌ಮೇಷ್ಟರು ತಲೆ ಹಾಕಿದರು : "ನನ್ನ ರೂಮಿನ ವೆಂಟಿಲೇಟರಿನ ಗಾಜನ್ನ?"

ತಪ್ಪಿಸಿಕೊಳ್ಳಲು ಯಾವ ದಾರಿಯೂ ಇಲ್ಲ. ದಡ್ಡನ ಹಾಗೆ ಅಗಲವಾಗಿ ಕಣ್ಣು ಬಿಟ್ಟುಕೊಂಡು ಸ್ವಾಮಿ ನಿಂತ. ಬೆನ್ನ ಮೇಲೆ ಛಟಯಕ್ ಎಂದು ಒಂದು ಬಿತ್ತು. "ಬೊಗಳೋ, ಭಡವಾ" ಎಂದರು ಹೆಡ್‌ಮೇಷ್ಟರು. ಭಡವಾ ಏನೂ ಬೊಗಳಲಿಲ್ಲ. ಅವನು ಕಿಟಕಿ ಒಡೆದದ್ದು ದಿಟ. ಅವರೆಲ್ಲ ನೋಡಿದ್ದರು ಅದನ್ನು. ಅಂದಮೇಲೆ ಇನ್ನೇನು? ಬೆನ್ನ ಮೇಲೆ ಇನ್ನೊಂದು ಗಲೀತ ಬಿತ್ತು. "ಹೊಡೀಬೇಡಿ ಸಾರ್, ನೋಯುತ್ತೆ" ಎಂದು ಕೂಗಿಕೊಂಡ ಸ್ವಾಮಿ. ಹೀಗೆ ಕೂಗಿದುದರಿಂದ ಇನ್ನೂ ನಾಲ್ಕು ಸಲ ಚಚ್ಚುವುದಕ್ಕೆ ಕರೆಯೋಲೆಯಂತಾಯ್ತು. "ನಿನ್ನನ್ನ ಡಿಸ್‌ಮಿಸ್ ಮಾಡಿದ್ದೀನಿ. ತಿರುಗಿ ನಾನು ಬರೋವರೆಗೂ ಬೇಕೂಫನ ಹಾಗೆ ಬೆಂಚಿನ ಮೇಲೇ ಬಿದ್ದಿರು" ಎಂದರು ಹೆಡ್‌ಮೇಷ್ಟರು.

ಬೆತ್ತ ಸೋಕಿದುದರಿಂದ ಸ್ವಾಮಿನಾಥನ ದೇಹದ ಪ್ರತಿ ರಂಧ್ರವೂ ಉರಿಯತೊಡಗಿತ್ತು. ಧೈರ್ಯದ ಪ್ರವಾಹವೊಂದು ನುಗ್ಗಿ ಬಂತು; ನಿಸ್ಸಹಾಯತೆಯ ಪರಮಾವಧಿಯಲ್ಲಿ ಬರುವ ಧೈರ್ಯ ಅದು. ಜಲಪಾತದಂತೆ ಸುರಿದು ಬೀಳಲು ಸಿದ್ಧವಾಗಿದ್ದ ಕಣ್ಣೀರನ್ನು ಅದುಮಿ ತಡೆದುಕೊಂಡು, ಬೆಂಚಿನಿಂದ ಕೆಳಕ್ಕೆ ಧುಮುಕಿ ಪುಸ್ತಕಗಳನ್ನು ಎತ್ತಿಕೊಂಡು, "ನಿನ್ನ ಹಾಳು ಸ್ಕೂಲಿಗೆ ಬೆಂಕಿಯಿಕ್ಕ, ಈವತ್ತೇ ಹಾಳಾಗಿ ಹೋಗಲಿ" ಎಂದು ವಟಗುಟ್ಟಿ ಓಡಿಹೋದ ಹೊರಕ್ಕೆ.

# ಎಂ. ಸಿ. ಸಿ.

ಸ್ವಾಮಿನಾಥನ ಪಾಪಗಳನ್ನೆಲ್ಲ ಕ್ಷಮಿಸಿದ್ದೇನೆಂದು ತಿಳಿಸುವುದಕ್ಕಾಗಿ ಆರು ವಾರಗಳನಂತರ ಅವನ ಮನೆಗೆ ರಾಜಂ ಬಂದ. ಸ್ವಾಮಿಯೆಸಗಿದ್ದ ಪಾಪಗಳೆಂದರೆ......ಒಂದು, ಅವನ ರಾಜಕೀಯ ಚಟುವಟಿಕೆಗಳು; ಎರಡು, ಅವನ ಬೋರ್ಡ್ ಸ್ಕೂಲ್ ವಿದ್ವತ್ತು, ಎಂದರೆ, ಒಂದು ತರಹದ ಜೋಬದ್ರತನ.

ಶತ್ರುಗಳ ದವಡೆಯಿಂದ ತಪ್ಪಿಸಿಕೊಂಡ ನಾಟಕದ ನಾಯಕನಂತೆ ಆಲ್ಬರ್ಟ್ ಮಿಷನ್ ಸ್ಕೂಲಿನಿಂದ ಮುಷ್ಕರದ ಮೂರನೆಯ ದಿನ ನಿಷ್ಕ್ರಮಿಸಿದ ಸ್ವಾಮಿಯ ಮೊಂಡುತನವನ್ನು ಕಂಡು ಗತ್ಯಂತರವಿಲ್ಲದೆ ಅವರ ತಂದೆ ಕೆಲವು ದಿನಗಳಾದ ಮೇಲೆ ಅವನನ್ನು ಬೋರ್ಡ್ ಹೈಸ್ಕೂಲಿಗೆ ಕರೆದುಕೊಂಡು ಹೋಗಿ ಸೇರಿಸಿದರು. ಹೊಸ ಸ್ಕೂಲಿನಲ್ಲಿ ಹೊಂದಿಕೊಂಡು ಸುಖವಾಗಿರುವುದು ಹೇಗೆ ಸಾಧ್ಯ ಎಂಬ ಚಿಂತೆ ಸ್ವಾಮಿಯನ್ನು ಬಾಧಿಸುತ್ತಿತ್ತು. ಆದರೆ ಹೊಸಬರ ಬಗ್ಗೆ ಎಲ್ಲರಿಗೂ ಯಾವಾಗಲೂ ಕುತೂಹಲ. ಅದೇ ರೀತಿ ಎರಡನೆಯ 'ಸಿ'ಯಲ್ಲಿ ಎಲ್ಲರ ಕಣ್ಣೂ ಸ್ವಾಮಿಯ ಮೇಲೆಯೆ. ಇದರಿಂದ ಅವನಿಗೆ ಬಹಳ ಸಮಾಧಾನವಾಯಿತು. ತೀರ ಹೊಸ ಮುಖಗಳು. ಆದರೆ ಎಲ್ಲರೂ ಅವನನ್ನು ನೋಡಬೇಕು, ಅವನ ಮಾತನ್ನು ಕೇಳಬೇಕು ಎಂದು ಅವನ ಸುತ್ತಲೂ ಮುತ್ತಿಕೊಳ್ಳುವರು. ಆಪ್ತರು ಎಂದು ಕರೆದುಕೊಳ್ಳಬಹುದಾದಂತಹವರನ್ನು ಇನ್ನೂ ಆರಿಸಿಕೊಂಡಿರಲಿಲ್ಲ. ಆಲ್ಬರ್ಟ್ ಮಿಷನ್ನಿನ ತಮ್ಮ ತಂಡ ಹಾಗೇ ಭದ್ರವಾಗಿದೆಯೆಂದೇ ಅವನ ಭಾವನೆ. ಆದರೂ ಈ ಸಲದ ರಜ ಮುಗಿದು ಜೂನ್ ತಿಂಗಳಲ್ಲಿ ಸ್ಕೂಲು ಬಾಗಿಲು ತೆರೆದಾಗ ಆ ತಂಡದಲ್ಲಿ ಅನೇಕ ಬದಲಾವಣೆಗಳಾಗಿಬಿಟ್ಟಿದ್ದವು. ಶಂಕರ ಅದೃಶ್ಯವಾಗಿಬಿಟ್ಟಿದ್ದ. ಅವರ ತಂದೆಗೆ ವರ್ಗವಾಯಿತೆಂದು ಯಾರೋ ಹೇಳಿದರು. ಸೋಮು ಪ್ಯಾಸ್ ಆಗಲಿಲ್ಲ. ಆದುದರಿಂದ ತಂಡದಿಂದ ಅವನಿಗೆ ಬರ್ತಘ್ ಆಯಿತು. ಬಟಾಣಿಗೇನೋ ಪ್ಯಾಸಾಯಿತು. ಆದರೆ ಸ್ಕೂಲು ತೆರೆದು ಸರಿಯಾಗಿ ಮೂರು ತಿಂಗಳು ಕಳೆದ ಮೇಲೆ ಕ್ಲಾಸಿಗೆ ಬಂದ ಅವನು. ಡಾಕ್ಟರ್ ಸರ್ಟಿಫಿಕೇಟ್‌ಗಳು, ಕ್ಷಮಾಪಣೆಗಳು, ವಿವರಣೆಗಳು- ಇವುಗಳ ಹೊರೆಯನ್ನೇ ಹೊತ್ತುಕಂಡು ಬಂದ ಆ ಮನುಷ್ಯನಿಗೀಗ ನೂರು ತಾಪತ್ರಯಗಳು. ಹಳೆಯ ಗೆಳೆಯರೊಡನೆ ಅಪರಿಚಿತನಂತೆ ಓಡಾಡುತ್ತಿದ್ದ. ರಾಜಂ ಮಣಿ ಇಬ್ಬರು ಮಾತ್ರ ಭದ್ರವಾಗಿದ್ದರು. ಸ್ವಾಮಿಗೆ ಕೂಡ ಅಷ್ಟೇ ಬೇಕಾಗಿದ್ದುದು. ಮಣಿಯೇನೋ ನಿತ್ಯ ಸಿಕ್ಕುತ್ತಾ ಇದ್ದ. ಆದರೆ ಆ ಮುಷ್ಕರದ ಹಗರಣದ ಕಾಲದಿಂದ ರಾಜಂ ಅವನ ಕೈಯಲ್ಲಿ

ಮಾತಾಡಿರಲಿಲ್ಲ.

ಆ ದಿನ ಮಧ್ಯಾಹ್ನ ಮನೆಯಲ್ಲಿ ಎಲ್ಲಕ್ಕಿಂತ ಕತ್ತಲೆ ಮುಸುಕಿದ್ದ ಮೂಲೆಯಲ್ಲಿ ಕುಳಿತು ರಟ್ಟಿನ ಪೆಟ್ಟಿಗೆ, ಕನ್ನಡಕದ ಗಾಜು ಎರಡನ್ನೂ ಜೋಡಿಸಿ ಸ್ವಾಮಿ ಒಂದು ಕ್ಯಾಮೆರಾ ತಯಾರಿಸುತ್ತ ಇದ್ದ. ರಟ್ಟಿನ ಡಬ್ಬಿಯಲ್ಲಿ ಅವನು ಕತ್ತರಿಸಿದ್ದ ಕಂಡಿ ಅವನ ಹತ್ತಿರಿದ್ದ ಗಾಜಿಗಿಂತ ಒಂದು ಸುತ್ತು ದೊಡ್ಡದು. ಏನೇನು ಮಾಡಿದರೂ ತೂತಿನೊಳಗೆ ಆ ಗಾಜನ್ನು ಸಿಕ್ಕಿಸುವ ಯತ್ನ ನಿಷ್ಫಲವಾಯಿತು. ಇದರಿಂದ ಸ್ವಾಮಿಗೆ ಇನ್ನೇನು ಕೋಪ ಬರಬೇಕು; ಅಷ್ಟರೊಳಗೆ ಹಳೆಯ ಬಳಕೆಯ ದನಿಯೊಂದು ಕೇಳಿಸಿತು. ಓಡಿದ ಬಾಗಿಲ ಬಳಿಗೆ.

"ಬಾರೋ, ಬಾರೋ, ರಾಜಂ. ಬರ್ತೀನಿ ಅಂತ ಮೊದಲೇ ಯಾಕೆ ಹೇಳಲಿಲ್ಲವೋ?"

"ಏನೋ ಅದು, ನಿನ್ನ ಕೈಲಿರೋದು?" ಎಂದು ರಾಜಂ ಕೇಳಿದ.

"ಓ........" ಸ್ವಾಮಿಯ ಮುಖ ಕೆಂಪಾಯಿತು.

"ಇರಲಿ, ಇರಲಿ, ತಾ ಇಲ್ಲಿ, ಅದೇನೋ ನೋಡೋಣಂತೆ."

"ಏನಿಲ್ಲ ಕಾಣೋ" ಎಂದು ಉದ್ಗಾರ ಎಳೆದು ಸ್ವಾಮಿ ಅದನ್ನು ಕೊಟ್ಟ ರಾಜಂ ಕೈಗೆ.

ರಬ್ಬರಿನ ಪೆಟ್ಟಿಗೆಯ ರಂಧ್ರದ ಮೂಲಕ ರಾಜಂ ಈ ಇಹಲೋಕದ ದರ್ಶನ ಪಡೆಯುತ್ತಿದ್ದಾಗ ಸ್ವಾಮಿ ಹೇಳಿದ : "ನಮ್ಮ ಕ್ಲಾಸಿನ ಅಕ್ಬರ್ ಆಲಿ ಅನ್ನೋವನು ಎಂಥ ಕ್ಯಾಮರ ಮಾಡಿದ್ದಾನೆ ಅಂತೀಯ?"

"ಹೌದಾ? ಏನು ಮಾಡ್ತಾನೆ ಅದಿಟ್ಟುಕೊಂಡು?"

"ಬೇಕಾದಷ್ಟು ಫೋಟೋ ತೆಗೆದಿದ್ದಾನೆ"

"ಹಾಗೇನು? ಯಾವ ಯಾವುದರ ಫೋಟೋಗಳು?"

"ಇನ್ನೂ ಅವನು ತೋರಿಸಿಲ್ಲ ನನಗೆ-ಮನೆಗಳು, ಗಿಡಗಳು, ಮನುಷ್ಯರು ಇವೆಲ್ಲಾದರ ಫೋಟೋಗಳಿರಬಹುದು."

ರಾಜಂ ಹೊಸಿಲ ಮೇಲೆ ಕೂತುಕೊಂಡು "ಈ ಅಕ್ಬರ್ ಆಲಿ ಅನ್ನೋವನು ಯಾರು?" ಎಂದು ಕೇಳಿದ.

"ಅವನು ತುರುಕರವನು ಕಾಣೋ. ತುಂಬ ಒಳ್ಳೆಯವನು. ನಮ್ಮ ಕ್ಲಾಸ್‌ನವನು."

"ಓ! ಬೋರ್ಡ್ ಹೈಸ್ಕೂಲಿನವನೋ?" ಅವನ ದನಿಯಲ್ಲಿ ಹೀನಾಯದ ಸ್ವರ ಸ್ವಲ್ಪವೇ ಸ್ವಲ್ಪ ತೋರುತ್ತಿತ್ತು. ಸ್ವಾಮಿನಾಥ ಅದಕ್ಕೆ ಲಕ್ಷ್ಯ ಕೊಡಲಿಲ್ಲ. "ಅವನ ಹತ್ತಿರ ಒಂದು ಬೈಸ್ಕಲಿದೆ. ಅವನು ಬಹಳ ಒಳ್ಳೆ ತುರುಕ. ಘಜನೀಮಹಮ್ಮದನೂ ಔರಂಗಜೇಬನೂ ಲುಚ್ಚಾಗಳು, ದುಷ್ಟರು ಅಂತ ಬೈತಾನೆ ಕಾಣೊ" ಎಂದ.

"ಅವರೇನು ಮಾಡಿದ್ದರು ನಿನಗೆ?"

"ನಮ್ಮ ಗುಡಿಗಳನ್ನೆಲ್ಲ ಅವರು ನಾಶಮಾಡಲಿಲ್ಲವೊ? ನಮ್ಮ ಹಿಂದುಗಳಿಗೆಲ್ಲ ಚಿತ್ರಹಿಂಸೆ ಕೊಡಲಿಲ್ಲವೊ? ಸೋಮನಾಥಪುರದ ದೇವರ ವಿಷಯ ಚರಿತ್ರೇಲಿರೋದು

ಮರೆತು ಹೋಯಿತೋ ನಿನಗೆ?"

"ನಮ್ಮ ಬ್ರಾಹ್ಮಣರಿಗೆ ಇನ್ನೂ ಆಗಬೇಕು ಶಾಸ್ತಿ........ನಮ್ಮನೇಲಿ ನೋಡೋ. ಅಮಾವಾಸ್ಯೆ ಗಿಮಾವಾಸ್ಯೆ ಒಂದಕ್ಕೂ ನಮ್ಮ ತಂದೆ ಹೆದರೋದೇ ಇಲ್ಲ. ತಿಥಿಗಿತಿ ಒಂದೂ ಮಾಡೊಲ್ಲ......." ಎಂದ ರಾಜಂ. ರಾಜಂ ಏಕೋ ಹೇಳಿದ್ದಕ್ಕೆಲ್ಲ ಬದಲಾಡುವ ಮನಸ್ಸಿನಲ್ಲಿದ್ದ. ಸ್ವಾಮಿ ಇದನ್ನು ತಿಳಿದುಕೊಂಡು ಮುಂದಕ್ಕೆ ಮಾತು ಬೆಳಸದೆ ಸುಮ್ಮನಾದ. ರಾಜಂ ಹೇಳಿದ : "ನಾನು ಹೇಳ್ತೀನಿ ನೋಡು, ಯಾಕೆ ಗೊತ್ತಾ ನೀನು ಹೀಗಾಡ್ತೀಯ? ಎಲ್ಲಾ ಆ ಬೋರ್ಡ್ ಹೈಸ್ಕೂಲಿನ ಪ್ರಭಾವ."

ರಾಜಂ ಹೇಳಿದ್ದೆಲ್ಲಕ್ಕೂ ಒಪ್ಪಿಗೆ ಕೊಡುವುದೇ ಹ್ಹಾಯಾದ ದಾರಿ ಎಂದು ಸ್ವಾಮಿಗೆನ್ನಿಸಿತು. "ನೀನು ಹೇಳುವುದೂ ಒಂದು ರೀತೀಲಿ ನಿಜ. ಆ ಬೋರ್ಡ್ ಹೈಸ್ಕೂಲು ಕಂಡರೆ ನನಗೆ ಇಷ್ಟವಿಲ್ಲ ಕಾಣೋ."

"ಹಾಗಾದರೆ ಹೋಗಿ ಅಲ್ಲೇಕೆ ಸೇರಿಕೊಂಡೆ?"

"ನಾನೇನು ಮಾಡೋಹಾಗಿತ್ತೋ? ಹೆಡ್‌ಮೇಷ್ಟರು ಹೇಗೆ ಕರಡಿಗಿಂತ ಕಡೆಯಾಗಿ ಹಾರಾಡಿದ ಅನ್ನೋದನ್ನ ನೀನೇ ನೋಡಿದೆಯಪ್ಪ. ನೀನೇನಾದರೂ ನನ್ನ ಜಾಗದಲ್ಲಿದ್ದಿದ್ದರೆ ಝಾಡಿಸಿ ಒದ್ದುಬಿಡ್ತಿದ್ದೆ ಅವನನ್ನ."

ಈ ಸ್ತೋತ್ರದಿಂದಲೂ ರಾಜಂಗೆ ಸಮಾಧಾನವಾಗಲಿಲ್ಲ. "ನಾನೇನಾದರೂ ನಿನ್ನ ಜಾಗದಲ್ಲಿದ್ದಿದ್ದರೆ ಆ ಸ್ಟ್ರೈಕು, ಆ ಹಾಳು ಮೂಳು ಒಂದನ್ನೂ ತಲೆಗೆ ಹಚ್ಚಿಕೊಳ್ಳದೆ ಹಾಯಾಗಿರ್ತಾ ಇದ್ದೆ" ಎಂದ. ಎಷ್ಟೇ ಆಗಲಿ, ಅವರ ತಂದೆ ಸರ್ಕಾರಿ ನೌಕರ, ಆದ್ದರಿಂದ ರಾಜಂ ಮನೆಯವರೆಲ್ಲಾ ರಾಜಕೀಯ ವಿರೋಧಿಗಳಾಗಿದ್ದರು.

ಸ್ವಾಮಿ ಒಪ್ಪಿಕೊಂಡ : "ಹೌದು, ನಿಜ ಕಾಣೋ. ಆವತ್ತಿನ ದಿನ ನಾನು ಮನೇಲೇ ಇದ್ದು ಬಿಡಬೇಕಾಗಿತ್ತು." ಈ ಸಂಪೂರ್ಣ ದೈನ್ಯ ರಾಜಂ ಮನಸ್ಸು ಕಲಕಿಸಿತು. ಆದುದರಿಂದ ಸ್ವಾಮಿನಾಥನ ಅಪರಾಧಗಳೆಲ್ಲವನ್ನೂ ಮನ್ನಿಸುವುದಾಗಿಯೂ, ಅವನು ಬೋರ್ಡ್ ಹೈಸ್ಕೂಲಿಗೆ ಸೇರಿರುವುದನ್ನು ಕೂಡ ಮರೆತು ಬಿಡುವುದಾಗಿಯೂ ಮಾತು ಕೊಟ್ಟ. ಮೊದಲಿನಂತೆ ಮತ್ತೆ ಪರಮ ಮಿತ್ರರಾಗಿರಬೇಕೆಂದು ಇಬ್ಬರೂ ಒಪ್ಪಂದ ಮಾಡಿಕೊಂಡರು. "ಕ್ರಿಕೆಟ್ ಟೀಂ ಒಂದನ್ನು ಮಾಡಬೇಕು, ಅಂತ ನನಗೆ ಆಸೆ. ನೀನು ಏನಂತೀಯ?" ಎಂದು ರಾಜಂ ಕೇಳಿದ.

ಕ್ರಿಕೆಟ್ ಎಂಬುದು ತನ್ನಂತಹವರು ಆಡಬಹುದಾದ ಆಟ ಎಂದು ಸ್ವಾಮಿ ಬಗೆದಿದ್ದುದೇ ಇಲ್ಲ. ಹಾಬ್ಸ್, ಬ್ರಾಡ್‌ಮನ್ ಇವರ ಹೆಸರುಗಳನ್ನೆಲ್ಲ ಕೇಳಿಯೇನೋ ಇದ್ದ. ರಾಜಂ ಹಾಗೆ ತಾನೂ ಅವರ ಸ್ಕೋರುಗಳನ್ನೆಲ್ಲ ಗಟ್ಟಿ ಮಾಡಿಕೊಳ್ಳುತ್ತಿದ್ದ. ಆ ಪೇಪರ್‌ನಲ್ಲಿ ಈ ಪೇಪರ್‌ನಲ್ಲಿ ಬಂದ ಕ್ರಿಕೆಟ್ ಚಿತ್ರಗಳನ್ನು ಕತ್ತರಿಸಿಕೊಂಡು ರಾಜಂ ಹಾಗೆ ತಾನೂ ಅವನ್ನು ಒಂದು ಆಲ್ಬಂನಲ್ಲಿ ಅಂಟಿಸಿಕೊಳ್ಳುತ್ತಿದ್ದ. ಆದರೆ ಒಳಮನಸ್ಸಿನಲ್ಲಿ ಕ್ರಿಕೆಟ್ ಎಂದರೆ ಅವನಿಗೆ ಅಂಥ ಅಭಿಮಾನವೇನೂ ಇರಲಿಲ್ಲ. ಆಲ್ಬಮ್ಮಿನ ಪ್ರತಿ ಪೇಜಿನಲ್ಲೂ

ಒಂದೇ ಚಿತ್ರ ಇದೆಯೇನೋ ಎನಿಸುತ್ತಿತ್ತು, ಒಂದೊಂದು ಸಲ. ಅವನಿಗೆ ಆ ಆಟ ಏಕೋ ಸ್ವಲ್ಪ ಸಪ್ಪೆ.

"ಇಲ್ಲ, ರಾಜಂ. ನನಗೆ ಆಡೋಕ್ಕೆ ಬರೊಲ್ಲ."

"ಎಲ್ಲರೂ ತಿಳಿದುಕೊಂಡಿರೋದೂ ಹಾಗೇನೇ. ನಾನು ನೋಡಪ್ಪ ಅಷ್ಟು ಕ್ರಿಕೆಟ್ ಪಿಕ್ಚರ್ ಕೂಡಿಹಾಕ್ತೀನಿ, ನನಗೆ ಕೂಡ ಆಟ ಆಡೋದು ಹೇಗೆ ಅನ್ನೋದು ಗೊತ್ತಿಲ್ಲ" ಎಂದ ರಾಜಂ.

ಪರವಾ ಇಲ್ಲ, ಸುಮಾರು ಹಾಬ್ಸ್ ಕೂಡ ಬ್ಯಾಟ್ ಹಿಡಿದು ಬೀಸುವ ಮುಂಚೆ ನಾಚಿಕೆ, ಭಯ ಎಲ್ಲ ಪಟ್ಟುಕೊಳ್ಳುತ್ತಾ ಇದ್ದನೇನೋ!

"ಎಲ್ಲಾ ಟೀಂ ಮೇಲೂ ಮ್ಯಾಚ್ ಬಿಡಬಹುದು ಅಲ್ಲವೇನೋ! ನಮ್ಮ ಸ್ಕೂಲಿನ ಮೇಲೂ ಆಡಬಹುದು........ ಅವರ ಗರ್ವ ಎಷ್ಟೂ ಅಂತೀಯ! ಅವರನ್ನು ಸೋಲಿಸೋವರು ಹುಟ್ಟಿ ಬಂದಿಲ್ಲ ಎಂದುಕೊಂಡುಬಿಟ್ಟಿದ್ದಾರೆ" ಎಂದು ಸ್ವಾಮಿನಾಥನ್ ಹೇಳಿದ.

"ಏನು, ಬೋರ್ಡ್ ಹೈಸ್ಕೂಲು ಗುಲ್‌ಷನ್‌ಗಳು ಅಷ್ಟೊಂದು ರೋಫ್ ಕತ್ತರಿಸ್ತಾರಾ? ಅವರ ಜಬರ್‌ದಸ್ತಿಗೆ ತಕ್ಕ ಶಾಸ್ತಿ ಮಾಡೋಣ. ಖಂಡಿತ."

"ನಮ್ಮ ಟೀಮಿಗೇನು ಹೆಸರಿಡೋಣ?"

"ಎಂ.ಸಿ.ಸಿ. ಅಂತ ಇಡೋಣ" ಎಂದ ರಾಜಂ.

"ಆದರೆ ಹಾಬ್ಸ್ ಟೀಂಗೂ ಅದೇ ಹೆಸರು ಅಲ್ವಾ? ಅವರ ಹೆಸರನ್ನು ನಾವೂ ಇಟ್ಟುಕೊಂಡರೆ, ಅವರು ನಮ್ಮನ್ನು ಕೋರ್ಟಿಗೆಳೆದು ಕೇಸು ಹಾಕಿ ಬಿಡ್ತಾರೋ ಏನೋ!"
"ಸರಿ. ನಮಗೇನಾದರೂ ತೊಂದರೆಗಿಂದರೆ ಬಂದರೆ ಜಡ್ಜಿ ಮುಂದೆ ಹೇಳ್ತೀನಿ, ಎಂ.ಸಿ.ಸಿ. ಅಂದರೆ 'ಮಾಲ್ಗುಡಿ ಕ್ರಿಕೆಟ್ ಕ್ಲಬ್' ಅಂತ."

ಸ್ವಾಮಿನಾಥನಿಗೆ ಒಪ್ಪಿಗೆ ಆಗಲಿಲ್ಲ. ಎಂ.ಸಿ.ಸಿ. ಅನ್ನೋ ಹೆಸರು ದರಿದ್ರವಾಗೇನೂ ಇರಲಿಲ್ಲ. ಆದರೂನೂ ಆ ಹೆಸರು ಸ್ವಲ್ಪ ಸಪ್ಪೆ ಎನಿಸಿತು.

"ಬೇರೆ ಯಾವುದಾದರೂ ಹೆಸರಿಡೋಣ ಕಾಣೋ, ರಾಜಂ."

"ಏನಿಡೋಣ-ನೀನೇ ಹೇಳು."

"ಫ್ರೆಂಡ್ಸ್ ಇಲೆವೆನ್ ಅನ್ನೋದು ಚೆನ್ನಾಗಿರೊತ್ತಪ್ಪ."

"ಫ್ರೆಂಡ್ಸ್ ಇಲೆವೆನ್ ಅಂತಲೇ?"

"ಅಥವಾ, 'ಜಂಪಿಂಗ್ ಸ್ಟಾರ್ಸ್' ಅಂತ ಇಡೋಣವೊ?" ಸ್ವಾಮಿ ಕೇಳಿದ.

"ಲೋ, ಪರವಾ ಇಲ್ಲ ಕಣೋ ಆ ಹೆಸರು."

"ನಮ್ಮ ಟೀಮಿಗೆ 'ಜಂಪಿಂಗ್ ಸ್ಟಾರ್ಸ್' ಅಂತ ಹೆಸರಿಟ್ಟರೆ ಬಹಳ ಮಜವಾಗಿರುತ್ತೆ ಕಾಣೋ...........ಅದರ ಸಮಾನ ಇಲ್ಲ......"

ರಾಜಂ ಮನಸ್ಸಿನ ಮುಂದೆ ವೃತ್ತಪತ್ರಿಕೆಯ ವರದಿಯೊಂದರ ಚಿತ್ರ ಕೂಡಲೆ ಸುಳಿಯಿತು. "ಜಂಪಿಂಗ್ ಸ್ಟಾರ್ಸ್ ಟೀಮಿನವರು ಬೋರ್ಡ್ ಹೈಸ್ಕೂಲ್ ಟೀಮಿಗೆ ಮಣ್ಣು

ಮುಕ್ಕಿಸಿದರು"...... ರಾಜಂನ ಎದೆ ಅರಳಿತು. "ಲೋ, ಭೇಷೋ, ಭರ್ಜರಿಯಾಗಿದೆ ಆ ಹೆಸರು" ಎಂದ. ಜೋಬಿನಿಂದ ಒಂದು ಕಾಗದ ಒಂದು ಪೆನ್‌ಸಿಲ್ ಹೊರಗೆಳೆದು, "ಲೋ ಸ್ವಾಮಿ, ನಿನ್ನ ಮನಸ್ಸಿಗೆ ಹೊಳೆಯೋ ಹೆಸರುಗಳೆಲ್ಲ ಹೇಳೋ. ದೊಡ್ಡ ಪಟ್ಟಿ ತಯಾರು ಮಾಡೋಣ. ಇದರಿಂದ ಕೊನೇಲಿ ಒಂದು ಹೆಸರನ್ನ ಆರಿಸಿಕೊಳ್ಳೋಣ. ಜಂಪಿಂಗ್ ಸ್ಟಾರ್ಸ್, ಎಂ.ಸಿ.ಸಿ. ಎಂಬುದರ ಕೆಳಗೆ ಒಂದು ಗೀರೆಳೆದಿರ್ತೀನಿ, ಅದಕ್ಕೆ ಸ್ವಲ್ಪ ಹೆಚ್ಚು ನಿಗಾ ಕೊಡೋಣಂತೆ" ಎಂದು ರಾಜಂ ಹೇಳಿದ.

ಸ್ವಾಮಿ ಒಂದು ಗಳಿಗೆ ಯೋಚಿಸಿ, "ಫ್ರೆಂಡ್ಸ್ ಇಲೆವೆನ್........ ಜಂಪಿಂಗ್ ಸ್ಟಾರ್ಸ್......... ಫ್ರೆಂಡ್ಸ್ ಯೂನಿಯನ್........." ಎಂದ.

"ಫ್ರೆಂಡ್ಸ್ ಯೂನಿಯನ್ ಅನ್ನೋದನ್ನು ಆಗಲೇ ಬರೆದುಕೊಂಡು ಬಿಟ್ಟಿದ್ದೀನಿ" ಎಂದು ರಾಜಂ ಪಟ್ಟಿಯ ಕಡೆ ತೋರಿಸಿದ. ಸ್ವಾಮಿನಾಥನ್ ಮುಂದುವರಿಸಿದ "ಎಕ್ಸೆಲ್‌ಷಿಯರ್ಸ್............"

"ಅದನ್ನೂ ಬರಕೊಂಡಿದ್ದೀನಿ."

"ಎಕ್ಸೆಲ್‌ಷಿಯರ್ ಯೂನಿಯನ್, ಛಾಂಪಿಯನ್ ಇಲೆವೆನ್" ಆಮೇಲೊಂದು ದೀರ್ಘ ವಿರಾಮ.

"ಆಗಿಹೋಯ್ತಾ? ಅಷ್ಟೇನಾ?" ರಾಜಂ ಕೇಳಿದ.

"ಮಣಿ ಇದ್ದಿದ್ದರೆ, ಬೇಕಾದಷ್ಟು ಹೆಸರು ಹೇಳ್ತಿದ್ದ........ಛಾಂಪಿಯನ್ ಇಲೆವೆನ್."

"ಈಗ ತಾನೇ ಹೇಳಿದೆಯಲ್ಲೋ."

"ವಿಕ್ಟರಿ ಯೂನಿಯನ್ ಇಲೆವೆನ್."

"ಭಲಾ, ಬಹಳ ಚೆನ್ನಾಗಿದೆ ಕಾಣೋ. ವಿಕ್ಟರಿ ಎಂದರೆ ಗೆಲ್ಲೋದೂ ಅಂತ ಅರ್ಥ. ಹೆಸರು ಕೇಳಿದರೇನೇ ಮಿಕ್ಕ ಟೀಮಿನವರೆಲ್ಲ ಹೆದರಿಕೊಂಡು ಬಿಡ್ತಾರೆ........." ಪಟ್ಟಿಯನ್ನು ಒಂದು ಅಡಿ ದೂರದಲ್ಲಿಟ್ಟುಕೊಂಡು, ಬರೆದುಕೊಂಡ ಹೆಸರನ್ನೆಲ್ಲ ರಾಜಂ ವಿಶೇಷ ತೃಪ್ತಿಯಿಂದ ಓದಿದ ಒಂದು ಸಲ. ಹಿಂದಿನ ರಾತ್ರಿ ಹೆಸರು ಹುಡುಕಲು ತಾನು ಬಹಳ ಪ್ರಯಾಸಪಟ್ಟಿದ್ದ. ಫ್ರೆಂಡ್ಸ್ ಯೂನಿಯನ್, ಎಕ್ಸೆಲ್‌ಷಿಯರ್ಸ್ ಇವೆರಡೇ ಬರುತ್ತ ಇತ್ತೇ ಹೊರತು ಬೇರೆ ಒಂದೂ ತೋರುತ್ತಲೇ ಇರಲಿಲ್ಲ. ಕೊನೆಗೆ ಬೇಜಾರಾಗಿ ಹೋಯಿತು. ಆದರೆ ಈ ಸ್ವಾಮಿ ಸರಸರಾಂತ ಎಷ್ಟು ಹೆಸರು ಒಂದೇ ಉಸಿರಿನಲ್ಲಿ ಒದರಿಬಿಟ್ಟ? "ನಾಳೆ ಸಾಯಂಕಾಲ ನಮ್ಮ ಮನೇಗೆ ಬರ್ತೀಯೇನೋ? ಮಣೀಗೂ ಹೇಳಿರ್ತೀನಿ, ಒಂದು ಒಳ್ಳೇ ಹೆಸರಿಡೋಣಂತೆ" ಎಂದ.

ಒಂದು ನಿಮಿಷವಾದ ಮೇಲೆ ಸ್ವಾಮಿ ಕೇಳಿದ : "ಇಲ್ಲಿ ನೋಡು, ಟೀಂ ಷುರೂ ಮಾಡಿದ ಮೇಲೆ ಗೌರ್ಮೆಂಟ್‌ನವರಿಗೆ ಯಾವುದಾದರೂ ಕಂದಾಯ ಗಿಂದಾಯ ಕಟ್ಟಬೇಕಾಗುತ್ತೋ ಏನೋ?"

"ಥೂ, ಈ ಹಾಳು ಗೌರ್ಮೆಂಟ್‌ನವರು ಪ್ರಪಂಚದಲ್ಲಿರೋದಕ್ಕೆಲ್ಲ ಕಂದಾಯ ಹಾಕುತ್ತಾರೆ ಕಣೋ. ನೋಡೋ, ನಮ್ಮ ತಂದೆಗೆ ಐನೂರು ರೂಪಾಯೋ ಏನೋ

ಸಂಬಳ ಬರುತ್ತೆ. ಅದರಲ್ಲಿ ಇನ್ನೂರು ಕೊಟ್ಟುಬಿಡಿ ಅಂತ ತಗಾದೆ ಮಾಡ್ತಾರಂತೆ ಸರಕಾರದವರು. ಅದೆಲ್ಲ ಸರಿ-ಟೀಮಿಗೂನೂ ಕಂದಾಯ ಕೊಡಬೇಕೇನೋ?"

"ನಾನು ಹೇಳೋದೂ-ನಾವು ಕಂದಾಯ ಕೊಡಲಿಲ್ಲಾ ಅಂತ ಇಟ್ಟುಕೋ, ಸರಕಾರದವರು ನಮ್ಮ ಟೀಮನ್ನು ಲೆಕ್ಕಕ್ಕೆ ತೊಗೊಳ್ಳದೆ ಹೋದರೆ? .......ಇದೇ ಹೆಸರಿನ ನೂರಾರು ಬೇರೆ ಟೀಮಿರಬಹುದು. ಏನೇನು ಥರಾ ಫಜೀತಿಯಾಗುತ್ತೋ ಆಮೇಲೆ?"

"ಎರಡು ಹೆಸರಿಟ್ಟುಕೊಂಡರೆ ಆಗಿಹೋಯ್ತು."

"ಹಾಗೆ ಯಾರೂ ಮಾಡೊಲ್ಲ."

"ಎಲ್ಲಾ ಮಾಡ್ತಾರೆ. ಎರಡು ಹೆಸರಿಟ್ಟುಕೊಂಡಿರೋ ಟೀಮುಗಳು ಎಷ್ಟಿಲ್ಲ? ನಾನು ಬಿಷಪ್ ವಾಲರ್ ಸ್ಕೂಲಲ್ಲಿ ಓದ್ತಾ ಇದ್ದೆನಲ್ಲ, ನಮ್ಮ ಸ್ಕೂಲಿನ ಟೀಮಿಗೆ......ಮರೆತು ಹೋಯಿತಲ್ಲ ಅದರ ಹೆಸರು? ಥೂ, ಆ, ಕ್ರಿಕೆಟ್ ಇಲೆವೆನ್ ಅಂತ ಒಂದು ಹೆಸರು, ವಾಲರ್ಸ್ ಕ್ರಿಕೆಟ್ ಇಲೆವೆನ್ ಅಂತ ಇನ್ನೊಂದು ಹೆಸರು-ಹೀಗೆ ಎರಡು ಹೆಸರಿತ್ತು. ಒಂದು ಹೆಸರು ನಿತ್ಯ ಉಪಯೋಗಿಸೋಕೆ, ಇನ್ನೊಂದು ಮ್ಯಾಚ್ ಆಡೋವಾಗ ಇಟ್ಟುಕೊಳ್ಳೋಕೆ."

"ನೋಡು, ಅದೆಲ್ಲ ನಿಮ್ಮ ವಾಲರ್ಸ್ ಟೀಮಿನಂಥ ಸಾವಕಾರರಿಗೇ ಸರಿ. ನಾವು ಎರಡು ಹೆಸರಿಟ್ಟುಕೊಂಡ್ವೀ ಅಂದುಕೋ, ಎರಡು ಕಂದಾಯ ಕೊಡಬೇಕು ಅಂದರೆ ಸರಕಾರದವರು?"

ಕ್ರಿಕೆಟ್ ಟೀಂ ಪ್ರಾರಭಿಸುವುದಕ್ಕಿಂತ ತೊಡಕಿನ ಪ್ರಶ್ನೆ ಭೂಮಿಯ ಮೇಲೆ ಮಗುದೊಂದಿಲ್ಲ ಅಂತ ರಾಜಂಗೆ ಈಗ ತಿಳಿದುಬಂತು. ಹತ್ತು ಹನ್ನೆರಡು ಜನರನ್ನು ಕೂಡಿ ಹಾಕಿಕೊಳ್ಳುವುದು, ತಮ್ಮ ಕಾಂಪೌಂಡಿನ ಪಕ್ಕದಲ್ಲಿದ್ದ ಮೈದಾನದಲ್ಲಿ ಆಡುವುದು, ಯಾರು ಬೇಕಾದರೂ ಬನ್ನಿ ಸೈ ಅಂತ ಮೀಸೆ ತಿರುವುವುದು ಇಷ್ಟಾದರಾಯಿತು ಎಂದುಕೊಂಡಿದ್ದ. ಈಗ ನೋಡಿದರೆ, ಎಡರುತೊಡರುಗಳಿಗೆ ಕೊನೆಮೊದಲೇ ಇಲ್ಲ. ಯಾರೂ ಇಟ್ಟುಕೊಳ್ಳದ ರೀತಿಯ ಹೆಸರಾಗಬೇಕು. ಅಲ್ಲಿಂದ ಹಿಡಿದು ಸರಕಾರೀ ಕಂದಾಯದವರೆಗೆ ಪ್ರತಿಯೊಂದೂ ಒಂದೊಂದು ತಲೆನೋವೇ. ಈ ಸರಕಾರದವರಿಗೆ ಎಲ್ಲಿ ತಲೆ ಹಾಕಬಹುದು, ಎಲ್ಲಿ ಹಾಕಬಾರದು-ಒಂದೂ ಗೊತ್ತಿಲ್ಲ. ಒಂದು ಗಳಿಗೆ ಹೊತ್ತು ಗಾಂಧಿಯಲ್ಲಿ ಕೂಡ ಗೌರವ ಹುಟ್ಟಿತು ರಾಜಂಗೆ. ಈ ತರಲೆಯೆಲ್ಲ ನೋಡಿ ನೋಡಿ ಸರಕಾರದ ಮೇಲೆ ತಿರುಗಿಬಿದ್ದಿರಬೇಕು ಗಾಂಧಿ.......

ಕಷ್ಟಗಳನ್ನು ಸೃಷ್ಟಿಸುವುದರಲ್ಲೂ, ಆಮೇಲೆ ನಿವಾರಣೋಪಾಯ ಕಂಡು ಹಿಡಿಯುವುದರಲ್ಲೂ ಸ್ವಾಮಿ ತುಂಬಾ ಪ್ರವೀಣ. "ಒಂದು ಪಕ್ಷ ನಾವು ಕಂದಾಯ ಕೊಡಬೇಕಾದರೂ, ಯಾರ ಕೈಗೆ ಕೊಡೋದು? ಚಕ್ರವರ್ತಿ, ಅಥವಾ ವೈಸ್‌ರಾಯ್ ಇವರಿಗೆಲ್ಲಾದರೂ ಕೊಡೋಕಾಗೊತ್ತೆಯೇ? ಇಷ್ಟಕ್ಕೂ ಸರಕಾರ, ಎಂದರೆ ಯಾರು? ಯಾರಾದರೂ ಬಂದು ತಾನೇ ಸರಕಾರ ಅಂತ ಸುಳ್ಳು ಹೇಳಿಕೊಂಡು ನಮ್ಮ ಹತ್ತಿರ ದುಡ್ಡು ದೋಚಿಕೊಂಡು ಟೋಪಿ ಹಾಕಿದರೆ? ಕಂದಾಯಾನ ಮನಿ ಆರ್ಡರ್ ಮೂಲಕ

ಗವರ್ನರ್‌ಗೆ ಕಳಿಸಬೇಕೋ ಏನೋ? ಜೈಲಿಗೆ ಹಾಕಿಬಿಟ್ಟರೆ? ಕೊಡಬೇಕಾದ ದುಡ್ಡಾದರೂ ಎಷ್ಟು......?"

## ಎರಡು

ಮೂವರೂ ರಾಜಂ ಮೇಜಿನ ಸುತ್ತಲೂ ಕುಳಿತಿದ್ದರು. ಮಣಿ ಬಿನ್ಸ್ ಕಂಪೆನಿಯ ಕ್ಯಾಟಲಾಗನ್ನು ಹಿಡಿದುಕೊಂಡಿದ್ದ. "ಜೂನಿಯರ್ ವಿಲರ್ಡ್ ಬ್ಯಾಟುಗಳು, ಏಳೂವರೆ, ಅತ್ಯುತ್ತಮ ಮರದಿಂದ ತಯಾರಿಸಿದ್ದು. ಕೇಂಬ್ರಿಡ್ಜ್‌ನ ಜೂನಿಯರ್ ಟೀಮಿನವರು ಉಪಯೋಗಿಸುವುದು" ಎಂದು ಕ್ಯಾಟಲಾಗಿಂದ ಮಣಿ ಓದಿದ.

"ಎಲ್ಲಿ, ಸ್ವಲ್ಪ ನೋಡೋಣ....." ಎಂದು ರಾಜಂ ಮುಂದಕ್ಕೆ ಬಗ್ಗಿ ಬ್ಯಾಟಿನ ಚಿತ್ರವನ್ನು ಪರೀಕ್ಷಿಸಿ, "ಪರವಾ ಇಲ್ಲ. ಚೆನ್ನಾಗಿರೊ ಹಾಗೆ ಕಾಣುತ್ತೆ. ನೋಡೋ, ಸ್ವಾಮಿ" ಎಂದು ಸ್ವಾಮಿಗೆ ಆಮಂತ್ರಣವಿತ್ತ. ಸ್ವಾಮಿನಾಥನ್ ಕೊಕ್ಕರೆಯಂತೆ ಕುತ್ತಿಗೆಯನ್ನು ಚಾಚಿ, ಬ್ಯಾಟಿನ ಚಿತ್ರವನ್ನು ನೋಡಿ, "ಚೆನ್ನಾಗಿದೆ, ಆದರೆ ಕ್ಯಾಟಲಾಗಿನಲ್ಲಿರೋ ಮಿಕ್ಕ ಬ್ಯಾಟುಗಳಿಗೂ ಇದಕ್ಕೂ ವ್ಯತ್ಯಾಸಾನೇ ಕಾಣೊಲ್ಲವಲ್ಲ" ಎಂದುಬಿಟ್ಟ. ಮಣಿಯ ಕೈ ಸ್ವಾಮಿಯ ಕುತ್ತಿಗೆಯನ್ನು ಹಿಡಿದು ಚಿತ್ರದ ಮೇಲಕ್ಕೆ ಅವನ ಮುಖವನ್ನು ಅಮುಕಿತು. "ಲೋ, ಜೂನಿಯರ್ ವಿಲರ್ಡ್ ಬ್ಯಾಟಿಗೂ ಮಿಕ್ಕ ಬ್ಯಾಟುಗಳಿಗೂ ವ್ಯತ್ಯಾಸ ಏನು ಅನ್ನೋದನ್ನು ತಿಳಿಯದೆ ನಿನ್ನಂತಹ ಮೂರ್ಖ ಕ್ರಿಕೆಟ್ ಬರುತ್ತೆ ಅಂತ ಯಾಕೆ ಜಂಬ ಕೊಚ್ಚಿಕೋಬೇಕೋ? ನಮ್ಮ ಟೀಮಿನಲ್ಲಿ ಗುಡಿಸೋದಕ್ಕೂ ಲಾಯಕ್ಕಲ್ಲ ನೀನು" ಎಂದ ಮಣಿ. ಕೈಯ ಹಿಡಿತ ಸಡಿಲವಾಯಿತು.

ರಾಜಂ ಎಂದ : "ಲೋ ಸ್ವಾಮಿ, ಆ ಕ್ಯಾಟಲಾಗ್‌ನವನು ಜೂನಿಯರ್ ವಿಲರ್ಡ್ ಅಂತ ಕರೀತಾನಲ್ಲ, ಎಂಥಾ ಬ್ಯಾಟು ಗೊತ್ತಾ ಅದು? ಜೂನಿಯರ್ ಬ್ಯಾಟುಗಳಲ್ಲೆಲ್ಲ ಅದು ರೋಲ್ಸ್‌ರಾಯ್ಸ್ ಇದ್ದ ಹಾಗಂತೆ. ರೋಲ್ಸ್‌ರಾಯ್ಸ್‌ಗೂ ಮಿಕ್ಕ ಮೋಟಾರುಗಳಿಗೂ ವ್ಯತ್ಯಾಸ ಇದೇ ಅನ್ನೋದಾದರೂ ಗೊತ್ತೋ ನಿನಗೆ?"

ಗತ್ತಿನಿಂದ ಸ್ವಾಮಿ ಹೇಳಿದ : "ರೋಲ್ಸ್‌ರಾಯ್ಸ್‌ಗೂ ಮಿಕ್ಕ ಮೋಟಾರುಗಳಿಗೂ ವ್ಯತ್ಯಾಸ ಇಲ್ಲ ಅಂತ ನಾನು ಯಾವಾಗಲೂ ಹೇಳಲಿಲ್ಲ."

"ಏನು ವ್ಯತ್ಯಾಸ ಹೇಳಪ್ಪ, ನೋಡೋಣ" ಎಂದು ರಾಜಂ ಪಟ್ಟು ಹಿಡಿದ.

ಸ್ವಾಮಿಯನ್ನು ಇನ್ನೊಂದಷ್ಟು ಚುಡಾಯಿಸೋಣ ಎಂದು ಮಣಿ, "ಹ್ಞೂ, ಏನು ವ್ಯತ್ಯಾಸ ಅಂತ ಗೊತ್ತಿದ್ದರೆ ಯಾಕೋ ಬಾಯಿ ಬಿಡವಲ್ಲೆ?" ಎಂದ.

ಸ್ವಾಮಿ ಹೇಳತೊಡಗಿದ : "ರೋಲ್ಸ್‌ರಾಯ್ಸ್‌ಗೆ ಲಕ್ಷ ರೂಪಾಯಿ ಆಗುತ್ತೆ, ಮಿಕ್ಕ ಮೋಟಾರಿಗಾದರೆ ಹತ್ತೇ ಸಾವಿರ ರೂಪಾಯಿ. ರೋಲ್ಸ್‌ರಾಯ್ಸಿನ ಇಂಜನ್ನು ಬೆಳ್ಳಿಯಿಂದ ಮಾಡಿರ್ತಾರೆ; ಮಿಕ್ಕ ಮೋಟಾರಿನ ಮಿಷನ್ನಾದರೆ ಕಬ್ಬಿಣದಿಂದ ಮಾಡಿರ್ತಾರೆ."

"ಓ! ಓ!!" ಎಂದು ರಾಜಂ ವಿಕಟವಾಗಿ ಕೇಕೆ ಹಾಕಿ ಕುಪ್ಪಳಿಸಿದ.

"ರೋಲ್ಸ್‌ರಾಯ್ಸ್ ಎಂದೂ ತಂಟೆಯೇ ಕೊಡೊಲ್ಲ, ಮಿಕ್ಕ ಮೋಟಾರುಗಳು ಯಾವಾಗಲೂ ತಂಟೆ ಕೊಡುತ್ತವೆ. ರೋಲ್ಸ್‌ರಾಯ್ಸ್ ಮಿಷನ್ನು ನಿಲ್ಲೋದೇ ಇಲ್ಲ, ರೋಲ್ಸ್‌ರಾಯ್ಸ್ ಗಡ ಗಡಾ ಅಂತ ಸದ್ದೇ ಮಾಡೊಲ್ಲ. ಮಿಕ್ಕ ಮೋಟಾರುಗಳು ಯಾವಾಗಲೂ ಗಡಗಡಾಂತ ಗದ್ದಲ ಮಾಡುತ್ತೆ."

"ಸ್ಕೂಲಿನಲ್ಲಿ ರೋಲ್ಸ್‌ರಾಯ್ಸ್‌ನ ಮೇಲೊಂದು ಲೆಕ್ಚರ್ ಕೊಡ್ತೀಯೇನೋ ನಾಳಿದ್ದು?" ಎಂದ ಮಣಿ.

"ಅಂತೂ ರೋಲ್ಸ್‌ರಾಯ್ಸ್ ವಿಷಯ ಅಷ್ಟಾದರೂ ಗೊತ್ತಲ್ಲ ನಿನಗೆ, ಅದೇ ನನಗೆ ಸಂತೋಷ......ಅಂಥಾವನು ಜೂನಿಯರ್ ವಿಲರ್ಡ್ ಬ್ಯಾಟ್ ವಿಷಯಾನೇ ತಿಳಿದುಕೊಳ್ಳದೆ ಹಳ್ಳಿಗುಗ್ಗು ಹಾಗಿದ್ದೀಯಲ್ಲ, ನ್ಯಾಯವೇ? ನಾನು ಬಿಷಪ್ ವಾಲರ್ ಸ್ಕೂಲಿನಲ್ಲಿದ್ದಾಗ ನಮ್ಮ ಟೀಮಿನಲ್ಲಿ ಒಂದು ಡಜನ್ ಜೂನಿಯರ್ ವಿಲರ್ಡ್ ಬ್ಯಾಟುಗಳಿತ್ತು. ಓ! ಎಂಥ ಬ್ಯಾಟುಗಳೂ ಅಂತೀಯ? ಒಳಗಡೆ ನಿಜವಾದ ಸ್ಪ್ರಿಂಗು ಇರುತ್ತೆ. ಚೆಂಡು ಬಂದು ತಗಲಿದರೆ ಸಾಕು, ಬೌಂಡರಿ ಲೈನಿಗೆ ಓಡುತ್ತೆ. ಹಿಡಿಯ ಸುತ್ತಲೂ ಸಿಲ್ಕ್‌ದಾರ ಸುತ್ತಿರ್ತಾರೆ. ಇದೊಂದೂ ಗೊತ್ತಿಲ್ಲ ನಿನಗೆ. ಆದರೂ ಮಾತಾಡ್ತೀಯಲ್ಲ! ಏನ್ಹೇಳಲಿ ನಾನು? ಒಳಗಡೆ ನಿಜವಾದ ಸ್ಪ್ರಿಂಗು, ಹ್ಯಾಂಡಲ್ಲಿಗೆ ಸಿಲ್ಕ್ ದಾರ - ಅಂಥಾ ಬ್ಯಾಟ್ ಇನ್ನೊಂದು ತಂದು ತೋರಿಸು ನೋಡೋಣ" ಎಂದ ರಾಜಂ.

ಸ್ವಾಮಿ ಗಪ್‌ಚಿಪ್ ಆಗಬೇಕಾಯಿತು. "ಗುರ್ತು ಮಾಡಿಕೊಳ್ಳೋ, ಸ್ವಾಮಿ" ಎಂದ ರಾಜಂ. ಸ್ವಾಮಿ ಗುರ್ತು ಮಾಡಿಕೊಂಡ : "ವಿಲಾರ್ಡ್ ಜೂನಿಯರ್ ಬ್ಯಾಟು....... ಎಷ್ಟು ಬೇಕು ಅಂತ ಬರಕೊಳ್ಳಲಿ?" ಎಂದು ಕತ್ತೆತ್ತಿ ಕೇಳಿದ.

"ಮೂರಾದರೂ ಇರಲಿ. ಸಾಲದೇನೋ ಮಣಿ?"

"ಮೂರು ಯಾಕೋ? ದುಡ್ಡು ದಂಡ. ಎರಡು ಸಾಕು........."

"ಮ್ಯಾಚಿನ ಮಧ್ಯ ಒಂದೇನಾದರೂ ಮುರಿದು ಹೋದರೆ?"

"ಎದುರು ಕಡೆಯವರಿಗೂನೂ ನಾವೇ ಬ್ಯಾಟು ಸಪ್ಲೈ ಮಾಡ್ತೀವಿ ಅಂದ್ಕೊಂಡಿದ್ದೀಯಾ? ಅವರ ಬ್ಯಾಟು ಅವರೇ ತರಬೇಕು. ಮ್ಯಾಚಿಗೆ ಮುಂಚೆ ಹಾಗಂತ ನಾವು ತಿಳಿಸಿಬಿಡಬೇಕು, ಬಾಯಿಬಿಟ್ಟು."

"ಆದರೂನೂ, ನಾವಾಡೋವಾಗಲೇ ನಮ್ಮದೊಂದು ಬ್ಯಾಟು ಮುರಿದು ಹೋದರೆ ಆಟ ನಿಂತ್ಹೋಗೊಲ್ಲವೇನೋ?"

"ಎರಡು ಸಾಕು, ರಾಜಂ. ದುಡ್ಡು ದಂಡ ಮಾಡಬೇಕೂಅಂತಿದ್ರೆ ಇನ್ನವತ್ತು ಬೇಕಾದರೂ.........."

ರಾಜಂ ಉತ್ಸಾಹಕ್ಕೆ ಮಿತಿಯೇ ಇರಲಿಲ್ಲ. ತನ್ನ ಕುರ್ಚಿ ಬಿಟ್ಟು ಮಣಿಯ ಕುರ್ಚಿ ಹತ್ತಿರ ಬಂದು, ಅದರ ಕೈ ಮೇಲೆ ಕೂತುಕೊಂಡು, ಕ್ಯಾಟಲಾಗಿನಲ್ಲಿದ್ದ ಕ್ರಿಕೆಟ್ ಸಾಮಾನಿನ ಚಿತ್ರಗಳ ಸಾರಸರ್ವಸ್ವವನ್ನೂ ಹೀರಹತ್ತಿದ. ಈ ಉತ್ಸಾಹ ಸ್ವಾಮಿಗೂ ತಗಲಿತು. ಅವನು ಬಂದು ಮಣಿಯ ಕುರ್ಚಿಯ ಇನ್ನೊಂದು ಕೈಯ ಮೇಲೆ ಕೂತ.

ಮೂವರ ಕಣ್ಣೂ ಕ್ರಿಕೆಟ್ ಚೆಂಡು, ಬ್ಯಾಟು, ನೆಟ್ಟು, ಗ್ಲೌವ್‌ಗಳು ಇದರ ಚಿತ್ರಗಳ ಮೇಲೆಯೇ.

ಟೀಮಿಗೆ ಬೇಕಾದ ಎಲ್ಲಾ ಸಾಮಾನಿನ ಪಟ್ಟಿ ತಯಾರಿಸೋಕೆ ಒಂದು ಗಂಟೆ ಹಿಡಿಯಿತು. ಇದೇನೋ ಸರಿ. ಆದರೆ ಇದಕ್ಕಿಂತ ಕಷ್ಟದ ಕೆಲಸ ಬಾಕಿ ಇತ್ತಲ್ಲ. ಆ ಸಾಮಾನೆಲ್ಲ ಕಳಿಸಿ, ಎಂದು ಬಿನ್ಸ್ ಕಂಪೆನಿಯವರಿಗೆ ಕಾಗದ ಬರೆಯುವುದು! ಈ ಹೊಣೆಗಾರಿಕೆಯನ್ನು ಹೊತ್ತುಕೊಳ್ಳುವಂತೆ ರಾಜಂ ಮಣಿಗೆ ಹೇಳಿದ. ಮಣಿ ಒಪ್ಪಲಿಲ್ಲ. ಬೇಡಬೇಡವೆಂದರೂ ಈ ಕೆಲಸ ಸ್ವಾಮಿಗೇ ಗಂಟುಬಿತ್ತು. ಬಹಳ ಹೊತ್ತು ಪೆನ್ಸಿಲ್‌ನ ತುದಿಯನ್ನು ಅಗೆದರೂ ಕೂಡ ಒಂದು ಪದವಾದರೂ ಹೊಳೆಯಲಿಲ್ಲ. ಏನು ಬರೆಯಬೇಕು, ಹೇಗೆ ಬರೆಯಬೇಕು-ಒಂದೂ ತೋರಲಿಲ್ಲ. ಕಾಗುಣಿತ ಕೂಡ ಮರೆತು ಹೋಯಿತು. ಪ್ರಯತ್ನ ಪಟ್ಟಷ್ಟೂ ಇನ್ನೂ ಕಷ್ಟವಾಯಿತು. ಕೊನೆಗೆ ರಾಜಂ ಈ ಕಾರ್ಯವನ್ನು ತಾನೇ ವಹಿಸಿಕೊಳ್ಳಬೇಕಾಗಿ ಬಂತು. ಅರ್ಧ ಗಂಟೆಯಾದ ಮೇಲೆ ಇಂಗ್ಲೀಷಿನಲ್ಲಿ ಈ ಪತ್ರವನ್ನು ತಯಾರಿಸಿ ಮೇಜಿನ ಮೇಲಿಟ್ಟ :

"ಎಂ. ಸಿ. ಸಿ. (ಮತ್ತು ವಿಕ್ಟರಿ ಯೂನಿಯನ್ ಇಲೆವೆನ್),

ಮಾಲ್ಗುಡಿ, ಅವರಿಂದ.

ಬಿನ್ಸ್ ಕಂಪೆನಿ, ಆಟದ ವ್ಯಾಪಾರಿಗಳು, ಮೌಂಟ್ ರೋಡ್

ಮದರಾಸು, ಅವರಿಗೆ-

ಮಿತ್ರರೆ,

ನಮ್ಮ ಟೀಮಿಗೆ ಎರಡು ಜೂನಿಯರ್ ವಿಲರ್ಡ್ ಬ್ಯಾಟುಗಳು, ಆರು ಬಾಲ್‌ಗಳು, ವಿಕೆಟ್ಟುಗಳು ಇವನ್ನೆಲ್ಲ ಬೇಗ ಕಳಿಸಿ. ಬಹಳ ಅರ್ಜೆಂಟು. ದುಡ್ಡನ್ನು ಆಮೇಲೆ ಕಳಿಸುತ್ತೇವೆ. ಹೆದರಬೇಡಿ. ದಯವಿಟ್ಟು ಅರ್ಜೆಂಟಾಗಿರಿ.

ಇತಿ, ನಿಮ್ಮ ವಿಧೇಯ,

ಕ್ಯಾಪ್ಟನ್ ರಾಜಂ (ಕ್ಯಾಪ್ಟನ್)"

ಈ ಪತ್ರಕ್ಕೆ ಸ್ವಾಮಿನಾಥನ ಆಶೀರ್ವಾದ ದೊರೆಯಿತು. ಆದರೆ ಮಣಿಗೆ ಕೆಲವು ಸಂಶಯ ಬಂದವು. ಗುರುತು ಪರಿಚಯ ಒಂದೂ ಇಲ್ಲದ ದೂರದವರನ್ನು 'ಮಿತ್ರರೆ' ಎಂದು ಕರೆಯುವುದು ಸರಿಯೆ ಎಂದು. ರಾಜಂ ಕೇಳಿದ : "ಬಿನ್ಸ್ ಕಂಪೆನಿಯವರನ್ನು 'ಮಿತ್ರರೆ' ಅಂತ ಅಂತೀಯಲ್ಲ? 'ಸ್ವಾಮಿ' ಅನ್ನಬೇಕು."

"ನಾನು 'ಸ್ವಾಮಿ' ಅಂತ ಬರೆಯೊಲ್ಲ. ಗುಮಾಸ್ತರು ಮಾತ್ರವೇ 'ಸ್ವಾಮಿ' ಅಂತ ಬರೆಯೋದು. ನಾನೇನು ಬಿನ್ಸ್ ಕಂಪೆನಿಯ ಗುಮಾಸ್ತನಲ್ಲ. ಅವರೇನೂ ನನಗೆ ಸಂಬಳ ಕೊಟ್ಟಿಟ್ಟಿಲ್ಲ, ಅವರನ್ನ ನಾನು 'ಸ್ವಾಮಿ' ಅಂತ ಕರೆಯೋಕೆ" ಎಂದು ರಾಜಂ ಖಂಡಿತವಾಗಿ ತಿಳಿಸಿಬಿಟ್ಟ..

ಹೇಗಿತ್ತೋ ಹಾಗೆಯೇ ಹೋಯಿತು-ಆ ಕಾಗದ.

ಆ ಪ್ರಯಾಸದ ಕೆಲಸ ಮುಗಿದ ಮೇಲೆ ಎಲ್ಲರೂ ಸ್ವಲ್ಪ ಸುಧಾರಿಸಿಕೊಂಡರು.

ಆ ವೇಳೆಗೆ ಪೋಸ್ಟ್‌ಮ್ಯಾನ್ ಬಂದ. ರಾಜಂಗೆ ಒಂದು ಕಾಗದ ಬಂದಿತ್ತು. ರಾಜಂ ಕಾಗದ ಓದಿಕೊಂಡು, "ಈ ಕಾಗದ ಯಾರಿಂದ ಬಂದಿರಬಹುದು ಹೇಳಿ, ನೋಡೋಣ" ಎಂದು ಕೇಳಿದ.

"ಬಿನ್ಸ್ ಕಂಪೆನಿಯವರಿಂದ."

"ಅಯ್ಯೋ ಗುಗ್ಗು! ನಮ್ಮ ಹೆಡ್ಮಾಸ್ಟರಿಂದ ಇರಬೇಕು."

"ಯಾರೋ ಒಬ್ಬರಿಂದ."

"ಜೆ.ಬಿ. ಹಾಬ್ಸ್‌ನಿಂದ."

"ಅವರು ಯಾರಿಂದಲೂ ಅಲ್ಲ. ಶಂಕರನಿಂದ" ಎಂದು ರಾಜಂ ಖುಷಿಯಿಂದ ಹೇಳಿದ.

"ಶಂಕರ್! ಆ ಕಳ್ಳನ ಹೆಸರನ್ನೇ ಮರೆತು ಬಿಟ್ಟಿದ್ದೆವಲ್ಲೋ ನಾವು!" ಸ್ವಾಮಿ ಮಣಿ ಇಬ್ಬರೂ ರಾಜಂ ಕೈಯಿಂದ ಕಾರ್ಡನ್ನು ಕಿತ್ತುಕೊಂಡು ಓದಿದರು. ಶಂಕರ ಇಂಗ್ಲಿಷಿನಲ್ಲಿ ಬರೆದಿದ್ದ :

"ಪ್ರಿಯ ಸ್ನೇಹಿತನೆ,

ನಮ್ಮ ತಂದೆ ಇಲ್ಲಿಗೆ ಬಂದಿರುವುದರಿಂದ ನಾನು ಇಲ್ಲಿ ಓದುತ್ತಿದ್ದೇನೆ. ನಾನು ಇಲ್ಲಿದ್ದೇನೆ. ನನ್ನ ತಾಯಿಯೂ ಇಲ್ಲೇ ಇದ್ದಾರೆ. ನಾವೆಲ್ಲರು ಇಲ್ಲೇ ಇದ್ದೇವೆ. ನಾವು ಇಲ್ಲಿಯೇ ಇರುತ್ತೇವೆ. ನಾನು ಆರೋಗ್ಯವಾಗಿದ್ದೇನೆ. ನೀನು ಆರೋಗ್ಯವಾಗಿದ್ದೀಯೆಂದು ನಾನು ನಂಬಿದ್ದೇನೆ. ಇಲ್ಲಿ ತುಂಬ ಶಕೆಯಾಗಿದೆ. ನನಗೆ ಮೂರು ದಿನ ಜ್ವರ ಬಂದಿತ್ತು. ಆದುದರಿಂದ ಔಷಧಿಯನ್ನು ಕುಡಿದೆನು. ನಾನು ಚೆನ್ನಾಗಿ ಓದಿ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತೇನೆ. ಸ್ವಾಮಿಯೂ ಮಣಿಯೂ ಆರೋಗ್ಯವಾಗಿದ್ದಾರೆಯೇ? ಇಲ್ಲಿ ತುಂಬ ಶಕೆಯಾಗಿದೆ. ಇನ್ನು ಹೆಚ್ಚಿನ ವಿಷಯಗಳಿಲ್ಲ.

ಇಂತಿ ನಮಸ್ಕಾರಗಳು.

ನಿನ್ನ ಅತ್ಯಂತ ಪ್ರಿಯ ಸ್ನೇಹಿತ,
ಶಂಕರ್"

ನನ್ನನ್ನು ಮರೆತುಬಿಡಬೇಡ- "ಶಂ"

ಪತ್ರ ಓದಿ ಅವರ ಮನಸ್ಸು ಬಹಳ ಮೆತುವಾಯಿತು. ಕೂಡಲೆ ಉತ್ತರ ಬರೆಯಬೇಕೆಂದು ತೀರ್ಮಾನಿಸಿದರು. ಒಂದು ಗಂಟೆಯೊಳಗಾಗಿ ಮೂರು ಪತ್ರಗಳು ಸಿದ್ಧವಾದವು. ಮಣಿ ಶಂಕರನ ಪತ್ರವನ್ನೇ ಪದಶಃ ಕಾಪಿ ಹೊಡೆದು ಬಿಟ್ಟ. ಸ್ವಾಮಿ ರಾಜಂ ಇಬ್ಬರ ಕಾಗದಗಳೂ ಒಂದೇ ರೀತಿಯಿದ್ದವು. ದೇವರ ದಯೆದಿಂದ ಇಬ್ಬರೂ ಚೆನ್ನಾಗಿದ್ದೇವೆಂಬುದಾಗಿ ತಿಳಿಸಿದರು. ಶಂಕರನು ಆರೋಗ್ಯವಾಗಿರಬಹುದೆಂದೂ ಅವನು ಪರಿಕ್ಷೆಯಲ್ಲಿ ಉತ್ತೀರ್ಣನಾಗುವನೆಂದೂ ಆಶಿಸಿದರು. ಅನಂತರ ತಮ್ಮ ಕ್ರಿಕೆಟ್ ಟೀಮಿನ ವಿಷಯವಾಗಿ ಬೇಕಾದಷ್ಟು ಸಂಗತಿಗಳನ್ನು ತಿಳಿಸಿ ಶಂಕರನೂ ಸದಸ್ಯನಾಗಬೇಕೆಂದು ಕೋರಿದರು. ಅಷ್ಟೇ ಅಲ್ಲದೆ, ಶಂಕರನ ಟೀಮಿನವರು ತಮ್ಮ ಟೀಮಿನ ಮೇಲೆ ಒಂದು

ಮ್ಯಾಚ್ ಆಡಬೇಕೆಂದು ಸೂಚಿಸಿದರು.

ಪತ್ರಗಳನ್ನು ಒಂದು ಲಕ್ಕೋಟೆಯಲ್ಲಿಟ್ಟು ತಲೆಚೀಟಿ ಹಚ್ಚಿದರು. ಗೋಂದು ಹಾಕಿ ಲಕ್ಕೋಟೆಯನ್ನು ಅಂಟಿಸಿದರು. ಇಷ್ಟೆಲ್ಲ ಮಾಡಿದ ಮೇಲೆ ಶಂಕರನ ವಿಳಾಸ ಬರೆಯಬೇಕಾದುದು ಆಗತ್ಯವೆಂದು ಅವರಿಗೆ ಅರಿವಾಯಿತು. ಶಂಕರ ಬರೆದಿದ್ದ ಕಾರ್ಡಿನ ಎಲ್ಲಾ ಮೂಲೆಗಳನ್ನೂ ಹುಡುಕಿ ನೋಡುತ್ತಾರೆ : ಎಲ್ಲೂ ಇಲ್ಲ ಅವನ ವಿಳಾಸ. ಎಲ್ಲೂ ಒಂದು ಮಾತಾದರೂ ಇಲ್ಲ. ಅವನಿರುವ ಊರಿನ ಹೆಸರು ಕೂಡ ಇಲ್ಲ. ಪೋಸ್ಟಾಫೀಸಿನ ಮುದ್ರೆಯಿಂದಲಾದರೂ ತಿಳಿದುಕೊಳ್ಳೋಣವೆಂದು ಮುಖದ ಹತ್ತಿರ ಹಿಡಿದು ನೋಡಿದರು. ಆದರೆ ತಲೆ ಚೀಟಿಯ ಮೇಲಿದ್ದ ಕರಿಯ ಡೊಂಕು ಪಟ್ಟೆ ತೀರ ಗಜಿಬಿಜಿಯಾಗಿತ್ತು. ಏನೂ ತಿಳಿಯುತ್ತಿರಲಿಲ್ಲ.

## ಮೂರು

'ಕ್ಯಾಪ್ಟನ್, ಎಂ.ಸಿ.ಸಿ., ಮಾಲ್ಗುಡಿ' ಎಂಬ ವಿಳಾಸಕ್ಕೆ ಬಿನ್ಸ್ ಕಂಪೆನಿಯಿಂದ ಒಂದು ಪತ್ರ ಬಂತು. ರಾಜಂ, ಮಣಿ, ಸ್ವಾಮಿ ಇವರುಗಳಿಗೆ ತಮ್ಮ ದೊಡ್ಡಸ್ತಿಕೆ ಆಗ ತಿಳಿಯಿತು. ಎಂ.ಸಿ.ಸಿ.ಯೂ ಅದರ ವ್ಯವಸ್ಥಾಪಕರೂ ಬಹಳ ತೂಕದ ಜನರೆಂಬುದಕ್ಕೆ ಇದ್ದಕ್ಕಿಂತ ನಿದರ್ಶನ ಬೇಕೆ? ಆ ಸುಂದರವಾದ ಕವರನ್ನು ಬೆರಳ ತುದಿಯಿಂದ ಸವರುವುದೇ ಆನಂದ; ಕೈಯಲ್ಲಿ ಅದನ್ನು ಹಿಡಿದುಕೊಳ್ಳುವುದೇ ಒಂದು ಗೌರವ. ಎಂ.ಸಿ.ಸಿ.ಗೆ ಮನ್ನಣೆ ಕೊಟ್ಟವರಲ್ಲಿ ಬಿನ್ಸ್ ಕಂಪೆನಿಯವರೇ ಮೊದಲಿಗರು. ಆದ್ದರಿಂದ ತಮ್ಮ ಟೀಮಿಗೆ ಬೇಕಾದ ಸಾಮಾನನ್ನೆಲ್ಲ ಅವರಿಂದಲೇ ಕೊಂಡುಕೊಳ್ಳುವುದು ಎಂದು ರಾಜಂ ಶಪಥ ಮಾಡಿಬಿಟ್ಟ. ರಾಜಂಗೂ ಅವನ ಸಂಗಾತಿಗಳಿಗೂ ಆ ಪತ್ರದಿಂದ ಇಷ್ಟೊಂದು ಆನಂದ ಉಂಟಾದುದಕ್ಕೆ ಮೂರು ಮುಖ್ಯ ಕಾರಣಗಳಿದ್ದವು : (1) ಚಕ್ರವರ್ತಿ ಸಾರ್ವಭೌಮರ ಸರಕಾರದವರೂ ಕೂಡ ತಮ್ಮ ಟೀಮನ್ನು ಗೌರವಿಸುತ್ತಾರೆಂಬುದು ಅವರಿಗೆ ತಿಳಿಯಿತು. ಎಂ.ಸಿ.ಸಿ.ಯ ಕ್ಯಾಪ್ಟನ್ ವಿಳಾಸಕ್ಕೆ ಬರೆದ ಪತ್ರವನ್ನು ತಡೆಯಿಲ್ಲದೆ ಕ್ಲುಪ್ತವಾಗಿ ಪೋಸ್ಟ್‌ನವನು ತಂದು ಕೊಟ್ಟುದೇ ಅದಕ್ಕೆ ನಿದರ್ಶನ. (2) ಬಿನ್ಸ್ ಕಂಪೆನಿಯಂಥ ಭಾರಿ ಕಂಪೆನಿಯವರು, ಅದೂ ಮದರಾಸಿನಂತಹ ಮಹಾನಗರಿಯಲ್ಲಿದ್ದವರು, ತಮ್ಮ ಟೀಮಿಗೆ ಮನ್ನಣೆಯಿತ್ತಿದ್ದಾರೆಂಬುದು ವ್ಯಕ್ತವಾದ ಹಾಗಾಯಿತು. ಆ ಕಂಪೆನಿಯವರು ಕಾರ್ಡಿನಲ್ಲಿ ಉತ್ತರ ಬರೆಯದೆ ಕವರಿನಲ್ಲಿ ಉತ್ತರ ಬರೆದಿರುವುದು, ಅದೂ ಟೈಪ್ ಮಾಡಿದ ಕಾಗದ ಕಳಿಸಿರುವುದು, ಅಷ್ಟೇ ಸಾಲದೆ? (3) ಈ ಪತ್ರವೇ ಅಲ್ಲದೆ, ಇದರ ಜೊತೆಗೆ ನಾಲ್ಕಾಣೆ ಸ್ಟಾಂಪು ಹಚ್ಚಿ ದೊಡ್ಡ ಕ್ಯಾಟಲಾಗ್ ಬೇರೆ ಕಳಿಸಿದ್ದರು. ಇದಕ್ಕಿಂತ ಬೇರೆ ಕಾಣಿಕೆ ಬೇಕೆ?

ಇನ್ನು ಆ ಕಾಗದದ ವಿಷಯ. ಎಂ.ಸಿ.ಸಿ. ಕ್ಯಾಪ್ಟನ್ನರ ಕಾಗದ ಬಂತೆಂದೂ, ಅದಕ್ಕಾಗಿ ಅನೇಕ ನಮಸ್ಕಾರಗಳೆಂದೂ, ಒಟ್ಟು ಬೆಲೆಯ 25%ನ್ನು ಆರ್ಡರಿನ ಜತೆಯಲ್ಲಿ

ಕೂಡಲೆ ಕಳುಹಿಸಿಕೊಟ್ಟರೆ ತುಂಬ ಕೃತಾರ್ಥರಾಗಿರುತ್ತಾರೆಂದೂ, ಮಿಕ್ಕ ಹಣವನ್ನು ವಿ.ಪಿ.ಪಿ. ಅಥವಾ ರೈಲ್ವೆ ರಸೀತಿ ಬಂದಾಗ ಪಾವತಿ ಮಾಡಬಹುದು ಎಂಬುದಾಗಿಯೂ ಬಿನ್ಸ್ ಕಂಪೆನಿಯವರು ತಿಳಿಸಿದ್ದರು.

ಈ ಕಾಗದದ ಅರ್ಥವೇನೆಂದು ತಿಳಿದುಕೊಳ್ಳಲು ಮೂರು ತಲೆಗಳು ಒಟ್ಟುಗೂಡಿದರೂ ಸಾಧ್ಯವಾಗಲಿಲ್ಲ. ಬಿನ್ಸ್ ಕಂಪೆನಿಯವರು ಸಾಮಾನು ಕಳುಹಿಸುತ್ತಾರೋ ಇಲ್ಲವೋ ಎನ್ನುವುದೇ ಅವರಿಗೆ ತಿಳಿಯದೆ ಹೋಯಿತು. ಅದೇ ಫಜೀತಿ. 'ಕೃತಾರ್ಥ' ಎಂದರೆ ಏನು ಎಂದು ಯಾರಾದರೂ ಹೇಳಿದರೆ, ಆ ಕಾಗದದ ಅರ್ಥವೇನೆಂಬುದನ್ನು ತಾನು ಹೇಳಬಲ್ಲೆ ಎಂಬುದಾಗಿ ಮಣಿ ತಿಳಿಸಿದ. ಒಂದು ನಿಘಂಟು ತಂದು ಹುಡುಕಾಡಿದರು. ಆದರೆ ಅದರಲ್ಲಿ ಕೊಟ್ಟಿದ್ದ ಅರ್ಥದಿಂದ ಅವನಿಗೆ ಯಾವ ಸಹಾಯವೂ ಆಗಲಿಲ್ಲ. "ಆ ಪದಕ್ಕೆ ನಿಜವಾಗಿ ಯಾವ ಅರ್ಥವೂ ಇಲ್ಲವೇ ಇಲ್ಲ; ಸುಮ್ಮನೆ ಬರೆದಿದ್ದಾರೆ, ಅಷ್ಟೇ" ಎಂದು ಮಣಿಯ ಅಭಿಪ್ರಾಯ. ರಾಜಂ ಹೇಳಿದ : "ಒಂದೇನೋ ಸ್ಪಷ್ಟವಾಗಿ ಅರ್ಥವಾಗುತ್ತದೆ. ನಮ್ಮ ಕಾಗದ ತಲ್ಪಿದ್ದಕ್ಕಾಗಿ ಬಿನ್ಸ್ ಕಂಪೆನಿಯವರು ನಮಗೆ ನಮಸ್ಕಾರ ತಿಳಿಸುತ್ತಾರೆ. ಆದ್ದರಿಂದ ಸಾಮಾನು ಕಳಿಸೊಲ್ಲ ಎಂದು ಹೇಳಿಲ್ಲ ಎಂದು ಅರ್ಥ." ಸ್ವಾಮಿ ಈ ಮಾತನ್ನು ಒಪ್ಪಿದ : "ಹೌದು, ನೀ ಹೇಳಿದ್ದು ಸರಿ. ನಮಗೆ ಸಾಮಾನು ಕಳಿಸೋಕೆ ಇಷ್ಟವಿಲ್ಲದೆ ಹೋಗಿದ್ದರೆ ನಮಗೆ ನಮಸ್ಕಾರ ಮಾಡುತ್ತಾ ಇದ್ದರೋ? ಬೈತಾ ಇದ್ದರು, ಅಥವಾ ರೇಗ್ತಾ ಇದ್ದರು." ನಮಸ್ಕಾರ ಎಂಬ ಪದ ಇದೆಯೋ ಇಲ್ಲವೋ ಎಂಬುದನ್ನು ಖಾತರಿ ಮಾಡಿಕೊಳ್ಳುವುದಕ್ಕೆ ಕಾಗದವನ್ನು ಇನ್ನೊಮ್ಮೆ ಎಲ್ಲರೂ ಓದಿದರು.

'ಕೃತಾರ್ಥ' ಎಂಬುದನ್ನು ಸರಿಯಾಗಿ ಉಚ್ಚರಿಸುವುದಕ್ಕೆ ಮಣಿಗೆ ಆಗುತ್ತಿರಲಿಲ್ಲ. "ಆ ಬೆಪ್ಪರು ಆ ಮಾತೇಕೆ ಬರೆದಿದ್ದಾರೆ? ಅದಕ್ಕೆ ಅರ್ಥವೂ ಇಲ್ಲ ಗಿರ್ಥವೂ ಇಲ್ಲ. ನಮ್ಮನ್ನು ಗೇಲಿ ಮಾಡೋಕ್ಕೆಂದೇ ಹಾಗೆ ಬರೆದಿದ್ದಾರೆ ಅವರು" ಎಂದು ತೀರ್ಮಾನಿಸಿದ.

"ಅಷ್ಟೇ ಅಲ್ಲ ಕಾಣೋ. 25% ಅಂತ ಏನೇನೋ ಬರೆದಿದ್ದಾರೆ. ಅದೇನೂಂತ ಯಾವ ದಯ್ಯಕ್ಕೆ ಗೊತ್ತಾಗಬೇಕೋ?" ಎಂದ ರಾಜಂ.

ಸ್ವಾಮಿನಾಥನಿಗೆ ನಂಬಿಕೆ ಆಗಲಿಲ್ಲ. "ಲೋ ರಾಜಂ, ಪರೀಕ್ಷೇಲಿ ನಿನಗೆ ನೂರಕ್ಕರವತ್ತು ಬಂದಿತ್ತು. ನಿನಗೂ ಅರ್ಥವಾಗಲಿಲ್ಲವೆ? ನನಗೆ ಆಶ್ಚರ್ಯ ಅಪ್ಪ" ಎಂದ ಅವನು. "ಲೋ, ನಿನ್ನ ತಲೇಲಿ ಏನಾದರೂ ಬುದ್ಧಿ ಇದೆಯೇನೋ? ಅದಕ್ಕೂ ಇದಕ್ಕೂ ಏನು ಸಂಬಂಧವೋ? ಬಿ.ಎ. ಪ್ಯಾಸು ಮಾಡಿರೋವನಿಗೂ ಈ ಕಾಗದ ಅರ್ಥವಾಗೊಲ್ಲ."

ಕಡೆಗೆ ಈ ಕಾಗದವನ್ನು ಎಲ್ಲೋ ಕೈತಪ್ಪಿ ಬಿನ್ಸ್ ಕಂಪೆನಿಯವರು ತಮಗೆ ಕಳಿಸಿದ್ದಾರೆಂದು ಮೂವರೂ ತೀರ್ಮಾನಿಸಿದರು. 'ಕೃತಾರ್ಥ', 'ಪಾವತಿ', '25%' ಈ ತರಹ ಮಾತೊಂದಕ್ಕೂ ತಾವು ಬರೆದಿದ್ದ ಕಾಗದದಲ್ಲಿ ಆಸ್ಪದವೇ ಇರಲಿಲ್ಲ. ಬಿನ್ಸ್ ಕಂಪೆನಿಯಂಥಾ ದೊಡ್ಡ ಮನುಷ್ಯರು ಬೇರೆಯವರನ್ನು ಗೇಲಿಮಾಡೋ ಪಾಪಕ್ಕೆ ಹೋಗೋವರಲ್ಲ. "ಆದರೆ ಆ ಕಾಗದದ ಮೊದಲಲ್ಲಿ ಎಂ.ಸಿ.ಸಿ. ಕ್ಯಾಪ್ಟನ್‌ಗೆ

ಎಂದಿದೆಯಲ್ಲ" ಎಂದು ಸ್ವಾಮಿ ತೋರಿಸಿದ. ಅದೂ ತಪ್ಪಿನಿಂದಲೇ ಬಿದ್ದಿದೆಯೆಂದು ಉತ್ತರ ಬಂತು.

ದೊಡ್ಡದೊಂದು ಕವರ್ ತೆಗೆದುಕೊಂಡರು. ಅದರಲ್ಲಿ ಈ ಕವರನ್ನೂ ಇನ್ನೊಂದು ಕಾಗದವನ್ನೂ ಇಟ್ಟರು. ಆ ಕಾಗದದಲ್ಲಿ ಹೀಗೆ ಬರೆದಿದ್ದರು :

"ಬೇರೆಯವರ ಕಾಗದವನ್ನು ನೀವು ಕೈತಪ್ಪಿ ನಮಗೆ ಕಳಿಸಿ ಬಿಟ್ಟಿದ್ದೀರಿ. ಆ ಬೇರೆಯವರ ಕಾಗದವನ್ನು ವಾಪಸು ಕಳಿಸಿದ್ದೀವಿ. ಸಾಮಾನನ್ನು ದಯವಿಟ್ಟು ಬೇಗನೆ ಕಳಿಸಿ."

## ನಾಲ್ಕು

ಎಂ.ಸಿ.ಸಿ.ಯವರು ಬಹಳ ಆಶಾವಾದಿಗಳು. ತಮ್ಮ ಎರಡನೆಯ ಪತ್ರಕ್ಕೆ ಯಾವ ಉತ್ತರವೂ ಬಾರದಿದ್ದರೂ, ಸಾಮಾನು ಮಾತ್ರ ಬಂದುಬಿಡುತ್ತದೆಂದು ಎದುರು ನೋಡಿದ್ದೂ ನೋಡಿದ್ದೇ. ಹತ್ತು ದಿನ ಕಳೆದುಹೋಯಿತು. ಇನ್ನು ಕಾಯುವುದು ಸರಿಯಲ್ಲ; ನಿಜವಾದ ಬ್ಯಾಟು ಬಾಲು ಬರುವವರೆಗೆ ಯಾವುದರಲ್ಲೋ ಒಂದರಲ್ಲಿ ಹೇಗೋ ಹಾಗೆ ಆಡುತ್ತಾ ಇರುವುದೇ ಸರಿ ಎಂದು ನಿಷ್ಕರ್ಷೆ ಮಾಡಿದರು. ಜಾಕಾಯಿಮರದ ಪೆಟ್ಟಿಗೆಯೊಂದರ ತಳದ ಹಲಗೆಯಿಂದ ಮೂರು ಬ್ಯಾಟುಗಳಾದವು. ರಾಜಂ ತಮ್ಮ ತಂದೆಯ ಟೆನ್ನಿಸ್ ಕ್ಲಬ್ಬಿನಿಂದ ಮೂರು ಚೆಂಡು ಸಂಪಾದಿಸಿದ. ಬಟಾಣಿ ಹೇಳಿದ : "ನಮ್ಮ ಮನೆಯಲ್ಲಿ ನಿಜವಾದ ವಿಕೆಟ್ಟುಗಳು ಎಲ್ಲೋ ಬಿದ್ದಿದ್ದ ಹಾಗೆ ಜ್ಞಾಪಕ, ತಂದುಕೊಡ್ತೀನಿ" ಅಂತ. ರಾಜಂ ಮನೆಯ ಕಾಂಪೌಂಡಿನ ಮಗ್ಗುಲಲ್ಲಿ ಅಚ್ಚು ಕಟ್ಟಾದ ಒಂದು ಖಾಲಿ ಬಯಲಿತ್ತು. ಅದೇ ಅವರ ಆಟದ ಮೈದಾನ. ಎಲ್ಲ ಸಿದ್ಧವಾಗಿತ್ತು. ಬಿನ್ಸ್ ಕಂಪೆನಿಯವರು ಎಂ.ಸಿ.ಸಿ.ಗೆಂದು ಸ್ಪೆಷಲ್ಲಾಗಿ ಸಾಮಾನು ತಯಾರಿಸಿ ಕಳುಹಿಸಲು ಒಂದು ತಿಂಗಳು ಹಿಡಿದರೂನೂ ಪರವಾ ಇಲ್ಲ, ಪ್ರಾಕ್ಟೀಸು ನಿಲ್ಲಸಬೇಕಾಗಿಲ್ಲ. ನಿಜವಾದ ಬ್ಯಾಟು ಬಾಲು ಬರುವ ವೇಳೆಗೆ ಮ್ಯಾಚ್ ಕೂಡ ಆಡುವ ಮಟ್ಟಿಗೆ ಕುದುರಿಕೊಂಡಿರಬಹುದು.

ಎಂ.ಸಿ.ಸಿ.ಗೆ ಸದಸ್ಯರಾಗಲು ಅರ್ಹರೆಂದು ತನಗೆ ತೋರಿಬಂದ ತನ್ನ ತರಗತಿಯ ಕೆಲವರನ್ನು ರಾಜಂ ಆರಿಸಿಕೊಂಡ.

ಆರಂಭೋತ್ಸವದ ದಿನ ಐದು ಗಂಟೆಯ ವೇಳೆಗೆ ಎಂ.ಸಿ.ಸಿ.ಯವರೆಲ್ಲ ಸೇರಿದ್ದರು. ಬಟಾಣಿಯೊಬ್ಬ ಇನ್ನೂ ಬಂದಿರಲಿಲ್ಲ. ರಾಜಂ ಅವನ ದಾರಿಯನ್ನೇ ಕಾಯುತ್ತಿದ್ದ. ವಿಕೆಟ್ಟುಗಳನ್ನು ತರುತ್ತೇನೆ ಎಂದು ಬಟಾಣಿ ಭರವಸೆ ಕೊಟ್ಟಿದ್ದ. ಗೊತ್ತಾಗಿದ್ದ ವೇಳೆ ಮೀರಿ ಅರ್ಧ ಗಂಟೆಯಾಗಿ ಹೋಯಿತು. ಇನ್ನೂ ಬಟಾಣಿಯ ಸುಳಿವೇ ಇಲ್ಲ.

ಕಟ್ಟ ಕಡೆಗೆ ಅವನ ಕುಳ್ಳ ಸ್ವರೂಪ ಬಲುದೂರದಲ್ಲಿ ಕಾಣಿಸಿಕೊಂಡಿತು. ರಾಜಂ ಎದೆ ಬಡಿದುಕೊಂಡಿತು. ಬಟಾಣಿ ಏನಾದರೂ ತರುತ್ತಿದ್ದಾನೋ ನೋಡುವುದಕ್ಕೆಂದು

ಕಣ್ಣ ಮೇಲೆ ಕಣ್ಣಿಟ್ಟು ನೋಡಿದ. ಆದರೆ ಬಟಾಣಿ ಪಶ್ಚಿಮ ದಿಕ್ಕಿನಿಂದ ಬರುತ್ತಿದ್ದ; ಅವನ ಮೈ ಹಿಂದೆ ಸರಿಯಾಗಿ ಸೂರ್ಯ ಕಾಣಿಸುತ್ತಿದ್ದ. ಬಯಲಲ್ಲಿ ಸೇರಿದ್ದ ಹನ್ನೆರಡು ಜನರೂ ಕಣ್ಣಿಗೆ ಕೈ ಓರೆಮಾಡಿಕೊಂಡು ನೋಡಿದರು. ಏನೋ ಹೊತ್ತುಕೊಂಡು ಬರುತ್ತಿದ್ದಾನೆಂದು ಕೆಲವರೆಂದರು; "ಇಲ್ಲ, ಕೈ ಬೀಸಿಕೊಂಡು ಬರುತಿದ್ದಾನೆ" ಎಂದು ಕೆಲವರೆಂದರು.

ಕಡೆಗೂ ಬಂದ. "ವಿಕೆಟ್ಟು ಯಾಕೋ ತರಲಿಲ್ಲ? ನಿನ್ನ ಹತ್ತಿರ ಇಲ್ಲಾಂತ ಮುಂಚೇನೇ ಹೇಳಬಾರದಾಗಿತ್ತಾ?" ಎಂದು ರಾಜಂ ತರಾಟೆಗೆ ತೆಗೆದುಕೊಂಡ.

"ಇಲ್ಲ, ಕಾಣೋ, ಖಂಡಿತವಾಗಿಯೂ ಇದೆ ನನ್ನ ಹತ್ತಿರ, ನಾಳೆ ತೊಗೊಂಬರ್‍ತೀನೋ, ಆದೆಲ್ಲಿದೆ ಅಂತ ನಮ್ಮ ತಂದೆಗೆ ಗೊತ್ತಿರುತ್ತೆ" ಎಂದು ಬಟಾಣಿ ಹೇಳಿದ.

"ಅದು ಹೋಗಲಿ, ನಮ್ಮನ್ನು ಇದಕ್ಕಾಗಿ ಇಷ್ಟು ಹೊತ್ತು ಕಾಯಿಸಬೇಕಾ? ಮೊದಲಾದರೂ ಬಂದು ಹೇಳಬಾರದಾಗಿತ್ತಾ?"

"ನೋಡೋ, ಗಂಟೆಗಟ್ಟಲೆ ಹುಡುಕಿದೆ, ಎಲ್ಲೆಲ್ಲೂ ಸಿಕ್ಕಲಿಲ್ಲ. ಹುಡುಕಲೂ ಬೇಕು, ಇಲ್ಲಿಗೆ ಬಂದು ಹೇಳಲೂ ಬೇಕು ಎಂದರೆ ಹೇಗೋ ಸಾಧ್ಯ?"

ಸೇರಿದ್ದ ಗುಂಪಿನ ಮೇಲೆ ಮಬ್ಬು ಕವಿಯಿತು. ಎರಡು ದಿನದಿಂದಲೂ ಬ್ಯಾಟ್ ಬೀಸಬೇಕು. ಚೆಂಡೆಸೆಯಬೇಕು ಎಂಬುದೇ ಅವರ ಧ್ಯಾನವಾಗಿತ್ತು. ಅದೇ ಕನಸಾಗಿತ್ತು. ಬಟಾಣಿ ಹೀಗೆ ದುಷ್ಟನ ಹಾಗೆ ಆಡದೆ ಹೋಗಿದ್ದಿದ್ದರೆ ಅವರೆಲ್ಲರ ಕನಸೂ ಕೈಗೂಡಿರುತ್ತಿತ್ತು. ಎಲ್ಲರೂ ಅವನ ಮೇಲೆ ರೇಗಿದರು. ಅವನು ಒಬ್ಬಂಟಿಗನಾದ. ಜಾಕಾಯಿ ಬ್ಯಾಟುಗಳೂ, ಟೆನ್ನಿಸ್ ಚೆಂಡುಗಳೂ ದಿಕ್ಕುದಿವಾಳಿ ಇಲ್ಲದಂತೆ ನೆಲದ ಮೇಲೆ ಬಿದ್ದಿರುವುದನ್ನು ಕಂಡು ರಾಜಂಗೆ ಅಳುವೇ ಬಂದುಬಿಟ್ಟಿತು. 'ವಿಕೆಟ್ ತಂದಿದ್ದರೆ ಎಂಥಾ ಸೊಗಸಾಗಿ ಕಳೀಬಹುದಾಗಿತ್ತು ಈ ಸಾಯಂಕಾಲಾನ?'

ಈ ಕತ್ತಲಲ್ಲಿ ಯಾರೋ ಒಂದು ಬೆಳಕಿನ ಕಿರಣ ತಂದರು. ರಾಜಂ ಮನೆಯ ಗೋಡೆಯನ್ನೇ ಹಂಗಾಮಿಯಾಗಿ ವಿಕೆಟ್ಟಿನ ಹಾಗೆ ಉಪಯೋಗಿಸಬಹುದಲ್ಲ? ಎಂದು.

ಇದ್ದಲಿನ ಚೂರು ತೆಗೆದುಕೊಂಡು ಗೋಡೆಯ ಮೇಲೆ ವಿಕೆಟ್ಟನ್ನು ಗುರ್ತುಮಾಡಿದರು. ಫೀಲ್ಡರ್‌ಗಳನ್ನೆಲ್ಲ ರಾಜಂ ನಿಲ್ಲಿಸಿದ. ತಾನೇ ಬ್ಯಾಟ್ ತೆಗೆದುಕೊಂಡ. ಸ್ವಾಮಿ ಬೌಲಿಂಗ್ ತೆಗೆದುಕೊಂಡ. ಕೆಲವು ಹೆಜ್ಜೆ ಹಿಂದಕ್ಕೆ ಹೋಗಿ, ಮತ್ತೆ ಮುಂದಕ್ಕೆ ಓಡಿಬಂದು, ಛಟಕ್ಕನೆ ನಿಂತು, ಆ ಟೆನ್ನಿಸ್ ಚೆಂಡನ್ನು ತಲೆಯ ಮೇಲುಗಡೆಯಿಂದ ಗೋಡೆಯ ಕಡೆಗೆ ಎಸೆದ. ರಾಜಂ ಬ್ಯಾಟನ್ನು ಬೀಸಿದ. ಆದರೆ ಚೆಂಡು ಸಿಕ್ಕಲಿಲ್ಲ. ತಪ್ಪಿಸಿಕೊಂಡು ಹೋಗಿ ಕರಿಯ ಗುರ್ತಿನ ನಡುವೆ ಸರಿಯಾಗಿ ಗೋಡೆಗೆ ತಗಲಿತು. ಮೊಟ್ಟ ಮೊದಲನೆಯ ಚೆಂಡಿಗೇ ರಾಜಂ ಔಟ್ ಆಗಿಹೋದ! ಎಲ್ಲರೂ ಖುಷಿಯಿಂದ ಕೂಗಿದರು. ಓಡಿಬಂದು ಸ್ವಾಮಿನಾಥನ ಸುತ್ತಲೂ ಮುಸುರಿಕೊಂಡು ಕೈ ಕುಲುಕಿದ್ದೂ ಕುಲುಕಿದ್ದೇ; ಬೆನ್ನು ತಟ್ಟಿದ್ದೂ ತಟ್ಟಿದ್ದೇ. ಒಮ್ಮತದಿಂದ ಎಲ್ಲರೂ ಅದೇ ಸ್ಥಳದಲ್ಲಿ ಸ್ವಾಮಿಗೆ 'ಟೇಟ್' ಎಂಬುದಾಗಿ ಬಿರುದುಕೊಟ್ಟರು.

# ಅಜ್ಜಿಗೇನೂ ಗೊತ್ತೇ ಇಲ್ಲ!

ಬೋರ್ಡು ಹೈಸ್ಕೂಲಿನಲ್ಲಿ ಕೆಲಸ ತುಂಬ ಜಾಸ್ತಿ. ಆಲ್ಬರ್ಟ್ ಮಿಷನ್ ಸ್ಕೂಲಲ್ಲಿ ಕೊಡುತ್ತಿದ್ದ ಹೋಂ ವರ್ಕಿಗೂ ಇಲ್ಲಿ ಕೊಡುವುದಕ್ಕೂ ಅರ್ಥಾರ್ಥ ಸಂಬಂಧವೇ ಇಲ್ಲ. ಪ್ರತಿ ಮೇಷ್ಟರ ಮನಸ್ಸಿನಲ್ಲೂ ತನ್ನ ಪಾಠದ ಹೊರತು ಬೇರೆ ಯಾವ ಪಾಠವೂ ಇರುವುದೇ ಇಲ್ಲ ಹುಡುಗರಿಗೆ ಅಂತ. ಆರು ಲೆಕ್ಕಗಳು, ಕೈಬರಹದ ಕಾಪಿ ನಾಲ್ಕು ಪುಟ, ಐವತ್ತು ಅರವತ್ತು ಕಷ್ಟವಾದ ಮಾತುಗಳಿಗೆ ಡಿಕ್ಷನರಿ ಅರ್ಥ, ಎರಡು ನಕ್ಷೆ, ಐದು ತಮಿಳು ಪದ್ಯಗಳ ಅನ್ವಯ, ಅರ್ಥ, ತಾತ್ಪರ್ಯ - ಇಷ್ಟೂ ಪ್ರತಿದಿನದ ಸರಾಸರಿ ಹೋಂ ವರ್ಕು. ತನ್ನ ಹಳೆಯ ಸ್ಕೂಲನ್ನು ಬಿಡದೆ ಅಲ್ಲೇ ಇದ್ದಿದ್ದರೆ ಬಹಳ ಚೆನ್ನಾಗಿರುತ್ತಿತ್ತಲ್ಲಾ ಎಂದು ಸ್ವಾಮಿನಾಥನಿಗೆ ಆಗಾಗ ಎನ್ನಿಸುವುದು. ಇಲ್ಲಿನ ಮೇಷ್ಟರುಗಳು ಕರುಣೆಯಿಲ್ಲದ ಕಟುಕರು. ಅಷ್ಟೇ ಸಾಲದೆಂದು, ನಿತ್ಯದ ಆರು ಪೀರೀಡುಗಳಾದ ಮೇಲೆ ಕಡ್ಡಾಯವಾದ ಡ್ರಿಲ್ ಕ್ಲಾಸು, ಸ್ಕೌಟ್ ಕ್ಲಾಸು, ಇವುಗಳು ಬೇರೆ. ಅಲ್ಲದೆ ವಾರಕ್ಕೆ ಮೂರು ದಿನ ಒತ್ತಾಯವಾಗಿ ಆಟಪಾಟಗಳನ್ನು ಕೂಡ ಆಡಬೇಕು. ಒಂದು ದಿನ ತಪ್ಪಿಸಿಕೊಂಡರೆ ಮಾರನೆಯ ದಿನ ಆರಾರು ಲಾತಗಳು. ಆ ಹೆಡ್‌ಮೇಷ್ಟರೋ! ಕಿಯಕಿಯಾ ಅನ್ನೋ ಕೀರಲು ದನಿ. ಬಡಕಲು ಮೈಯಿ. ಮೂಗಿನ ಮೇಲೆ ಕಾನಿಷ್ಕನ ಕಾಲದ ಒಂದು ಕನ್ನಡಕ. ಆಲ್ಬರ್ಟ್ ಮಿಷನ್ ಸ್ಕೂಲಿನ ಹೆಡ್‌ಮೇಷ್ಟರು ಎಷ್ಟೇ ಕೆಟ್ಟವರಾಗಿದ್ದರೂ ಕೂಡ, ಈ ಬೋರ್ಡ್ ಹೈಸ್ಕೂಲಿನಾತನೊಡನೆ ಹೋಲಿಸಿದರೆ ಆತನಲ್ಲಿ ಏನೋ ಒಂದು ಬಗೆಯ ರಾಜಠೀವಿ ಕಾಣುತ್ತಿತ್ತು.

ಸ್ವಾಮಿಗೆ ಈಗ ವಿರಾಮ ಸಿಕ್ಕುವುದೇ ಅಪರೂಪ. ಬೆಳಿಗ್ಗೆ ಬೇಗನೆ ಎದ್ದು ಹೋಂ ವರ್ಕೆಲ್ಲವನ್ನೂ ಅವಸರವಸರವಾಗಿ ಮಾಡಿ ಮುಗಿಸಿ, ಗವಗವನೆ ಅನ್ನವನ್ನು ನುಂಗಿ, ಓಡಿ ಓಡಿ ಸ್ಕೂಲು ಸೇರುವ ವೇಳೆಗಾಗಲೆ ಹೊತ್ತಾಗಿ ಬಿಟ್ಟಿರುತ್ತಿತ್ತು. ಮಾರ್ಕೆಟ್ ರಸ್ತೆಯ ತುದಿಯಲ್ಲಿದ್ದ ಜವಳಿ ಅಂಗಡಿಯ ಸಮೀಪಕ್ಕೆ ಹೋಗುವ ಹೊತ್ತಿಗೆ ಮೊದಲನೆ ಬೆಲ್ಲು ಬಾರಿಸುವುದು. ಏದುತ್ತ ಏದುತ್ತ ತರಗತಿಗೆ ನುಗ್ಗುವುದೇ ತಡ ಎರಡನೆಯ ಬೆಲ್ಲು ಬಡಿದುಕೊಳ್ಳುವುದು. ಇಲ್ಲಿನ ಗಂಟೆಯೂ ಅಷ್ಟೆ. ಆಲ್ಬರ್ಟ್ ಸ್ಕೂಲಿನ ಗಂಟೆಯಂತೆ ಇಂಪಾದ ನಾದ ಇರಲಿಲ್ಲ. ಯಾರಾದರೂ ಮೂಗಿನಲ್ಲೇ ಅತ್ತರೆ ಹೇಗೆ ಇರುತ್ತದೋ ಹಾಗೆ ಅಪಸ್ವರವಾಗಿತ್ತು. ಆದರೇನು ಮಾಡುವುದು? ಹೊಂದಿಕೊಳ್ಳಲೇಬೇಕು.

ಮಧ್ಯಾಹ್ನ ಒಂದು ಗಂಟೆಯ ವಿರಾಮದ ಹೊರತು, ಸಂಜೆ ನಾಲ್ಕೂವರೆವರೆಗೆ

ಬೆಂಚಿನ ಮೇಲೆ ಕುಳಿತೇ ಇರಬೇಕು. ಕಡೆಯ ಬೆಂಚಿನಲ್ಲಿ ಕುಳಿತುಕೊಳ್ಳುವ ಅಭ್ಯಾಸವನ್ನು ಸ್ವಾಮಿ ಈಗ ಬಿಟ್ಟುಬಿಟ್ಟಿದ್ದ. ಸುಮಾರು ಮಣಿಯ ಜತೆ ಇಲ್ಲದೆ ಹೋದುದೇ ಇದಕ್ಕೆ ಕಾರಣವಿರಬಹುದು. ಬಹಳ ವಿಧೇಯತೆಯಿಂದ ಎರಡನೆಯ ಬೆಂಚಿನಲ್ಲಿ ಕೂತಿರುತ್ತಿದ್ದ. ಬಾಲ ಬಿಚ್ಚುವಂತಿರಲಿಲ್ಲ. ನಾಲ್ಕೂವರೆಯ ಬೆಲ್ಲು ಹೊಡೆದಾಗ ಸ್ವಾಮಿನಾಥನು ಪೆನ್ಸಿಲ್ಲನ್ನು ಜೇಬಿಗೆ ಇಳಿಯಬಿಟ್ಟು, ಸೋತು ಹೋಗಿದ್ದ ಕೈಯನ್ನು ಚಾಚಿ, ಒಂದು ಸಲ ಬಲವಾಗಿ ಮೈಮುರಿಯುತ್ತಿದ್ದ. ನಾಲ್ಕೂವರೆ ಆಗಿಹೋಯಿತೆಂಬ ಸಂತೋಷ ಕೂಡ ಅವನಿಗೆ ಉಂಟಾಗುತ್ತಿರಲಿಲ್ಲ. ಆನಂದಾವೇಶದಿಂದ ಉಸಿರೆಲ್ಲ ಬಿಟ್ಟು ಕೂಗಿಕೊಳ್ಳುತ್ತ ಮನೆಗೆ ಓಡಿಹೋಗುವಂತಿರಲಿಲ್ಲ-ಡ್ರಿಲ್ ಮೈದಾನಕ್ಕೆ ಹೋಗಿ ಸಾಲಾಗಿ ನಿಂತುಕೊಳ್ಳಬೇಕು. ಆ ಡ್ರಿಲ್ ಮೇಷ್ಟರು ಮುಕ್ಕಾಲು ಗಂಟೆ ಕಾಲ ನಾಯಿಯನ್ನು ಆಡಿಸುವ ರೀತಿ ನಿಮ್ಮನ್ನು ಆಡಿಸುವನು. ನಿಮಗೆ ಇಷ್ಟವಿರಲಿ ಇಲ್ಲದಿರಲಿ, ಅಟೆನ್‌ಷನ್, ಲೆಫ್ಟ್, ರೈಟ್, ಕ್ವಿಕ್ ಮಾರ್ಚ್ ಮುಂತಾದುವನ್ನೆಲ್ಲ ನಿಮ್ಮ ಕೈಯಲ್ಲಿ ಮಾಡಿಸುವನು. ಪ್ಯಾರಲೆಲ್ ಬಾರ್ ಹತ್ತು ಎಂದು ಅಪ್ಪಣೆ ಮಾಡುವನು. ಹಿಡಿತ ತಪ್ಪಿ, ಅಲ್ಲಿಂದ ಕೆಳಕ್ಕೆ ಉರುಳಿಕೊಂಡು, ನಿಮ್ಮ ತಲೆ ಚುಪ್ಪಾಚೂರಾದರೂ ಆ ಡ್ರಿಲ್ ಮೇಷ್ಟರು ಕೇಳಬೇಕಲ್ಲ!

ಇದಿಷ್ಟೂ ಆದಮೇಲೆ ನೀವು ಮನೆಗೆ ಓಡಿಹೋಗಿ, ಪುಸ್ತಕ ಬಿಸುಟು, ಕಾಫಿಯನ್ನೆಲ್ಲ ಒಂದೇ ಗುಟುಕಿನಲ್ಲಿ ಕುಡಿದು ಓಡಿಹೋಗಬೇಕು ಕ್ರಿಕೆಟ್ ಮೈದಾನಕ್ಕೆ. ಅದಾದರೂ ಹತ್ತಿರ ಇದೆಯೇ? ಅರ್ಧ ದೂರ ನಡೆಯುತ್ತಾ ಅರ್ಧ ದೂರ ಓಡುತ್ತಾ ಹೋಗಬೇಕು. ಸಂಜೆಯ ಸೂರ್ಯನ ಕಿರಣಗಳು ಓರೆಯಾಗಿ ಬೀಳುತ್ತಿರಬೇಕು, ದೂರದೂರದಲ್ಲಿ ಒಂದೊಂದು ಹುಲ್ಲಿನ ಗರಿಕೆ ಕಾಣಿಸುವ ಬೋಳು ಮೈದಾನದಿಂದ ದೂಳು ಏಳುತ್ತಿರಬೇಕು, ಆಟದ ಹುಮ್ಮಸ್ಸಿನಿಂದ ಹುಡುಗರು ಕೂಗುತ್ತಿದ್ದ ಕೂಗುಗಳು ದೂರದಿಂದ ಕೇಳುತ್ತಿರಬೇಕು, ಬ್ಯಾಟಿಗೆ ಚೆಂಡು ತಗಲುವ 'ದಪ್, ದಪ್' ಎಂಬ ಸದ್ದು ಕಿವಿಗೆ ಬೀಳುತ್ತಿರಬೇಕು- ಕಾಂಪೌಂಡಿನ ಮೂಲೆಯ ಹತ್ತಿರ ಬರುವ ವೇಳೆಗೆ ಆಗಲೆ ದೂರದ ದಿಗಂತದಲ್ಲಿ ಕೆಂಪಗೆ ಹೊಳೆಯುತ್ತಿರುವ ಭಾರಿ ತಾಮ್ರದ ಕಾಸಿನಂತೆ ಸೂರ್ಯ ನಿಂತಿರುತ್ತಾನೆ. ಅಯ್ಯೋ, ಇನ್ನೂ ಈಗಲೆ ಮುಳುಗದೆಹೋದರೆ ಸದ್ಯ, ಎಂದು ನಿಮ್ಮ ಮನಸ್ಸಿನಲ್ಲಿ. ಆದರೆ ಮೈದಾನದಲ್ಲಿ ನೀವು ಕಾಲಿಡುವ ವೇಳೆಗೆ ಸೂರ್ಯ ಪುಳಕ್ಕನೆ ಮುಳುಗಿ ಮಾಯವಾಗಿಬಿಟ್ಟಿರುತ್ತಾನೆ. ಬೆಳಕೇನೋ ಅಲ್ಪ ಸ್ವಲ್ಪ ಇರುತ್ತದೆ. ಆದರೂ ನಿಮಿಷ ನಿಮಿಷಕ್ಕೂ ಕತ್ತಲು ಹೆಚ್ಚಾಗುತ್ತ ಹೋಗುತ್ತದೆ. ಭೂಮಿಯೊಳಗೆ ಹುದುಗಿದ್ದ ನೆರಳುಗಳು ಹೊರಗಡೆ ಸಂಚಾರಕ್ಕೆ ಹೊರಡುತ್ತವೆ. ಅಲ್ಲೊಂದು ಇಲ್ಲೊಂದು ಮ್ಯುನಿಸಿಪಲ್ ದೀಪ ಮಿನುಗುತ್ತಿರುತ್ತದೆ. ಇನ್ನೂ ಪರವಾ ಇಲ್ಲ; ಒಂದಾಟ ಹಾಗೂ ಹೀಗೂ ಆಡಬಹುದು ಅಂತ ನಿಮ್ಮ ಆಸೆ. ಆದರೆ ಟೀಮಿನವರೆಲ್ಲ ಮೈದಾನದ ಮೇಲೆ ನಿಶ್ಚಿಂತೆಯಾಗಿ ಹರಟೆ ಹೊಡೆಯುತ್ತ ಕುಳಿತು ಬಿಟ್ಟಿರುತ್ತಾರೆ. ಯಾರೋ ಒಬ್ಬ ಚಿಕ್ಕವನು ಮಾತ್ರ ನಿಧಾನವಾಗಿ ಬೋಲ್ ಮಾಡುತ್ತಿರುತ್ತಾನೆ. ಇನ್ನೊಬ್ಬ ಚಿಕ್ಕವನು ಆಯಾಸದಿಂದ ಬ್ಯಾಟ್ ಬೀಸುತ್ತಿರುತ್ತಾನೆ.

ಸಂಜೆಯೆಲ್ಲ ಭರಾಟೆಯಿಂದ ಆಡಿದ ಮೇಲೆ ದಣಿವಾಗದೆ ಇರುತ್ತದೆಯೇ?

ಈ ರೀತಿ ನಿರಾಶೆಯಾದುದು ಸಾಲದೇನೋ ಎಂಬಂತೆ ರಾಜಂನ ಕೈಲಿ ಬೈಗುಳ ಬೇರೆ ತಿನ್ನಬೇಕು. ಮನುಷ್ಯ ಮಾತ್ರದವನಿಗೆ ಎಂತೆಂತಹ ಕಷ್ಟಗಳು ಬರುತ್ತವೆಂಬುದು ಅವನಿಗೆ ಏನು ಮಾಡಿದರೂ ತಿಳಿಯುವುದಿಲ್ಲ....."ಏನೋ ಸ್ವಾಮಿ, ಈವತ್ತೂ ಲೇಟು?"

"ಥೂ, ಆ ಹಾಳು ಡ್ರಿಲ್ ಕ್ಲಾಸ್ ಕಣೋ, ರಾಜಂ."

"ನಿನ್ನ ಡ್ರಿಲ್ ಕ್ಲಾಸಿಗೂ ಸ್ಕೌಟ್ ಕ್ಲಾಸಿಗೂ ಬೆಂಕಿಯಿಕ್ಕ. ಬೇಗನೆ ಯಾಕೆ ಬರಬಾರದು ನೀನು?"

"ನಾನೇನು ಮಾಡೋ ಹಾಗಿದ್ದೇನೋ?"

"ಸರಿ, ಸರಿ, ಗೋಳಾಡಬೇಡ. ಏನು ಕೇಳಲಿ-ಹತ್ತು ನೆಪ ಇಟ್ಟುಕೊಂಡು ರೆಡಿಯಾಗಿರ್‍ತೀಯ. ಹೊಸ ಬ್ಯಾಟು, ಬಾಲು ಎಲ್ಲ ಬಂದ ಮೇಲೆ ನೆಟ್ಟಗೆ ನಾಲ್ಕು ದಿನ ಕೂಡ ಬಂದು ಆಡಿಲ್ಲವಲ್ಲೋ ನೀನು?"

ಎಲ್ಲರಿಗೂ ಆಡಿ ಬೇಜಾರಾಗಿ ಬಿಟ್ಟಿರುತ್ತದೆ. ಬಹಳ ಪುಸಲಾಯಿಸಿದರೆ ಪ್ರೈಮರಿ ಸ್ಕೂಲಿನ ಹುಡುಗನೊಬ್ಬನು ಬೋಲ್ ಮಾಡಲು ಒಪ್ಪುತ್ತಾನೆ. ಒಳ್ಳೇ ಹುಡುಗ - ರಾಜಂನ ತುಂಬ ಗೋಗರೆದುಕೊಂಡ ಕಾರಣದಿಂದ ಅವನನ್ನು ಟೀಮಿಗೆ ಸೇರಿಸಿಕೊಂಡಿರುವುದಾಗಿದೆ. ಒಂದು ನಾಲ್ಕೈದು ಓವರ್ ಆಡುವ ವೇಳೆಗೆ ನಿಮಗೆ ಬೇಸರವಾಗಿ ಬಿಡುತ್ತದೆ. "ಇನ್ನು ನೀನು ಬ್ಯಾಟ್ ಹಿಡಕೋ, ನಾನು ಬೋಲ್ ಮಾಡ್ತೀನಿ" ಎನ್ನುತ್ತೀರಿ. ಆದರೆ ನೀವು ಟೀಮಿನ ಟೇಟ್ ಆಗಿರೋದರಿಂದ ಆ ಹುಡುಗನಿಗೆ ನಿಮ್ಮ ಬೋಲಿಂಗ್ ಎಂದರೆ ಭಯ. ತಿರುಗಿ ನೀವು ಬ್ಯಾಟಿಂಗ್ ತೆಗೆದುಕೊಳ್ಳುತ್ತೀರಿ, ಆಮೇಲೆ ಮತ್ತೆ ಬೋಲಿಂಗು ಹೀಗೆಯೇ. ಸರಿ, ಕತ್ತಲೆ ಹೆಚ್ಚಾಗುತ್ತ ಹೋಗುತ್ತದೆ. ಚೆಂಡು ಕಣ್ಣಿಗೆ ಕಾಣಿಸದೆ ಹೋಗುತ್ತದೆ. ಯಾವುದಾದರೂ ಕಲ್ಲೋ ಗಿಲ್ಲೋ ಬಿದ್ದಿದ್ದರೆ ಅದನ್ನೇ ಚೆಂಡೆಂದು ಅವನು ಭ್ರಮಿಸುತ್ತಾನೆ. ಇದ್ದಕ್ಕಿದ್ದ ಹಾಗೆ "ಚೆಂಡು ಕಳೆದು ಹೋಯಿತೂ" ಅಂತ ಯಾರೋ ಕೂಗುತ್ತಾರೆ. ಮೊಣಕಾಲಿನ ಮೇಲೆ ಕೈಯೂರಿಕೊಂಡು ಹರಟೆ ಹೊಡೆಯುತ್ತಿದ್ದ ಪ್ಲೇಯರ್ಸ್ ಎಲ್ಲರೂ ದಡಬಡನೆ ಎದ್ದು ಚೆಂಡಿಗಾಗಿ ಹುಡುಕಾಡುತ್ತಾರೆ. ಚೆಂಡು ಕೊನೆಗೆ ಸಿಕ್ಕುತ್ತದೆ. "ಇನ್ನು ಯಾರೂ ಆಡಕೂಡದು" ಎಂದು ಕ್ಯಾಪ್ಟನ್ನು ಆರ್ಡರ್ ಹೊರಡಿಸುತ್ತಾನೆ. ವಿಕೆಟ್ಟು ಕೀಳುತ್ತಾರೆ. ಆಟಗಾರರೆಲ್ಲರೂ ಕರಗಿಹೋಗುತ್ತಾರೆ. ನೀವು ಮಾತ್ರ ರಾಜಂ ಮತ್ತು ಮಣಿಯ ಜತೆಯಲ್ಲೇ ನಿಲ್ಲುತ್ತೀರಿ. ಮೂವರೂ ರಾಜಂ ಮನೆಯ ಕಾಂಪೌಂಡಿನ ಮೇಲೆ ಕುಳಿತುಕೊಂಡು ಆ ದಿನದ ಆಟ ಹೇಗಿತ್ತು, ಆಟಗಾರರು ಉತ್ತಮಗೊಳ್ಳುತ್ತಿದ್ದಾರೊ ಇಲ್ಲವೋ ಎಂಬುದನ್ನೆಲ್ಲ ವಿಚಾರ ಮಾಡುತ್ತಿರುತ್ತೀರಿ. ಆ ವೇಳೆಗೆ ಕಗ್ಗತ್ತಲೆಯಾಗಿ ಹೋಗಿರುತ್ತದೆ. "ಬುದ್ಧೀ, ಮೇಷ್ಟ್ರು ಬಂದಿದ್ದಾರೆ" ಅಂತ ರಾಜಂ ಮನೆಯ ಜವಾನ ಬಂದು ಅವನನ್ನು ಕರೆದುಕೊಂಡು ಹೋಗುತ್ತಾನೆ..........

## ಎರಡು

ಒಂದು ಸಂಜೆ ಕ್ರಿಕೆಟ್ ಮೈದಾನದಿಂದ ಸ್ವಾಮಿನಾಥ ಹಿಂದಿರುಗುತ್ತಿದ್ದಾನೆ. ಅವನೂ ಮಣಿಯೂ ಆಗತಾನೇ ಪರಸ್ಪರ ಬೀಳ್ಕೊಂಡಿದ್ದಾರೆ. ಇದ್ದಕ್ಕಿದ್ದಂತೆ ಸ್ವಾಮಿಯ ಮನಸ್ಸಿನಲ್ಲಿ ಏನೋ ಚುಚ್ಚಿದ ಹಾಗಾಯಿತು. ಆ ಸಾಯಂಕಾಲ ಸ್ಕೂಲಿನಿಂದ ಮನೆಗೆ ಬಂದು, ಪುಸ್ತಕಗಳನ್ನೆಸೆದು, ಕ್ರಿಕೆಟ್ ಮೈದಾನಕ್ಕೆ ಹೊರಡಬೇಕೆನ್ನುವಾಗ ಯಾವುದೋ ಒಂದು ಸಣ್ಣ ಸಂಗತಿ ನಡೆದಿತ್ತು. ಪುಸ್ತಕವನ್ನು ಮೇಜಿನ ಮೇಲೆ ಕುಕ್ಕಿ ಅಡಿಗೆಮನೆಯ ಕಡೆ ಹೋಗುತ್ತಿದ್ದಾಗ "ಸ್ವಾಮಿ, ಸ್ವಾಮಿ, ಇಲ್ಲಿ ಸ್ವಲ್ಪ ಬಾಪ್ಪಾ, ಮಗೂ" ಎಂದು ಅಜ್ಜಿ ಕೂಗಿದಳು.

ಎಂದಿನಂತೆಯೆ ,"ಇಲ್ಲ, ಬರೊಲ್ಲ" ಎಂದು ಸ್ವಾಮಿ ಒರಟಾಗಿ ಉತ್ತರ ಹೇಳಿ, ಅಡಿಗೆಮನೆಯೊಳಗೆ ನುಗ್ಗಿ ಕಾಫಿಯನ್ನು ಹೀರತೊಡಗಿದ. ಅಜ್ಜಿ ತನ್ನನ್ನು ಇನ್ನೂ ಕೂಗುತ್ತಿದ್ದಳು. ಆ ಒಣಕಲು ಗಂಟಲಲ್ಲಿ ಏನೋ ಒಂದು ಬಗೆಯ ನಿಶ್ಶಕ್ತಿ ತೋರ್ರಿತ್ತು. ಸ್ವಾಮಿಯ ಮನಸ್ಸು ಕಲಕಿಹೋಯಿತು. 'ಅಯ್ಯೋ ಪಾಪ, ಕೂತ ಕಡೆಯಿಂದ ಎಲ್ಲರನ್ನೂ ಕೂಗುತ್ತಿದ್ದಾಳೆ. ಯಾರೂ ಕಿವಿಯ ಮೇಲೇ ಹಾಕಿಕೊಳ್ಳೊಲ್ಲವಲ್ಲ' ಎಂದುಕೊಂಡ. ಕಾಫಿ ಕುಡಿದು ಮುಗಿಸಿದ ಕೂಡಲೆ ಅಜ್ಜಿಯ ಹತ್ತಿರ ಹೋಗಿ "ಏನಜ್ಜಿ, ಕೂಗಿದೆಯಲ್ಲ?" ಎಂದ.

ಅಜ್ಜಿ ಕಣ್ಣೆತ್ತಿ ಇವನ ಕಡೆ ನೋಡಿ, "ಕೂತುಕೋಪ್ಪ" ಎಂದಳು. ಇದನ್ನು ಕೇಳಿದ ಕೂಡಲೆ ಅವನ ಕನಿಕರವೆಲ್ಲ ಮಾಯವಾಗಿ ಹೋಯಿತು. "ನೋಡು, ನೀನೇನು ಹೇಳಬೇಕೂ ಅಂತ ಇದ್ದೀಯೋ ಅದನ್ನ ಸರಸರಾಂತ ಒದರಿಬಿಡು............ ನಿನ್ನ ಕೈಯಲ್ಲಿ ಚಕ್ಕಂದ ಆಡ್ತಾ ನಿಂತುಕೊಳ್ಳೋಕೆ ನನಗೆ ಪುರಸತ್ತಿಲ್ಲ" ಎಂದ.

"ನೋಡಪ್ಪ, ಆರು ಕಾಸು ಕೊಡ್ತೀನಿ. ಮೂರು ಕಾಸು ನೀನೇ ಇಟ್ಟುಕೋ, ಇನ್ನು ಮೂರು ಕಾಸು ಕೊಟ್ಟು ಒಂದು ನಿಂಬೇಹಣ್ಣು ಕೊಂಡುಕೊಂಡು ಬಾಪ್ಪ" ಎಂದಳು. ಮೊಮ್ಮಗ ಎಂತಹವನು ಎಂಬುದು ಅವಳಿಗೆ ಗೊತ್ತು. ಆದುದರಿಂದ ತನಗೆ ಒಂದು ನಿಂಬೆಹಣ್ಣು ಬೇಕಾದರೆ ಅವನನ್ನು ಬಹಳ ಹುಷಾರಾಗಿ ಮಾತಾಡಿಸಬೇಕು. ಆ ಇಚ್ಛೆಯಿಂದಲೇ ಅವನನ್ನು ಕುಳಿತುಕೊಳ್ಳಹೇಳಿದುದು.

ಸ್ವಾಮಿನಾಥನು ಹೂ ಉಹೂ ಎಂದು ಕೂಡ ಹೇಳುವ ಗೊಡವೆಗೆ ಹೋಗಲಿಲ್ಲ. ಸುಮ್ಮನೆ ಕೈ ನೀಡಿ ಆ ಎರಡು ನಾಣ್ಯಗಳನ್ನು ತೆಗೆದುಕೊಂಡ. "ಹತ್ತು ಎಣಿಸೋದರಲ್ಲಿ ಬಂದುಬಿಡಬೇಕು, ನನ್ನ ಚಿನ್ನ" ಎಂದಳು ಅಜ್ಜಿ. ಸ್ವಾಮಿಗೆ ರೇಗಿಹೋಯಿತು. ದುಡ್ಡನ್ನು ನೆಲದ ಮೇಲೆ ಎಸೆದು, "ನಿನಗೆ ಅಷ್ಟೊಂದು ಅರ್ಜೆಂಟಾಗಿ ಬೇಕಾದರೆ ನೀನೇ ಹೋಗಿ ಕೊಂಡುಕೋ ಹೋಗ್" ಎಂದುಬಿಟ್ಟ. ಆಗಲೇ ಐದೂವರೆ ಸಮಯವಾಗಿ ಹೋಗಿತ್ತು. ಸೂರ್ಯ ಮುಳುಗುವ ಮೊದಲು ಆಟದ ಮೈದಾನದಲ್ಲಿರಬೇಕೋ ಬೇಡವೋ? ಆಟ ಮುಗಿಸಿಕೊಂಡು ಮನೆಗೆ ಹಿಂದಿರುಗಿ ಬರುವಾಗಲಾದರೂ ತೆಗೆದುಕೊಂಡು ಬಾಪ್ಪಾ ಎಂದು ಅಜ್ಜಿ ಹೇಳಿಗೀಳಿಯಾಳೇನೋ ಎಂದು ಒಂದು ಕ್ಷಣ ಕಾಯ್ದು ನೋಡಿದ. ಆದರೆ

ಅಜ್ಜಿ "ಹೊಟ್ಟೆಯಲ್ಲಿ ತಡೆಯಲಾರದಂಥ ಶೂಲೆ ಆಗ್ತಾ ಇದೆಯಪ್ಪಾ, ಬೇಗ ಓಡಿಹೋಗಿ ತೊಗೊಂಬಾಪ್ಪಾ" ಎಂದಳು. ಸ್ವಾಮಿ ಅಲ್ಲಿ ನಿಲ್ಲಲಿಲ್ಲ. ಹೊರಟು ಹೋದ.............

ಆದರೆ ಆಟದ ಸಡಗರವೆಲ್ಲ ಈಗ ಮುಗಿದು ಹೋಗಿದೆ. ಮಣಿಗೆ ಕಡೆಯ 'ಗುಡ್ ನೈಟ್' ಹೇಳಿದುದು ಕೂಡ ಆಗಿಹೋಗಿದೆ. ತನ್ನ ಅಂತರಾತ್ಮ ಎದುರಿಗೆ ಬಂದು ನಿಂತು ತನ್ನನ್ನು ಪಾಟೀಸವಾಲು ಮಾಡುತ್ತಿದೆಯೇನೋ ಎನಿಸಿತು ಅವನಿಗೆ. ಅಜ್ಜಿಯ ವಿಷಯ ನೆನಪಿಗೆ ಬಂದು ಮನಸ್ಸು ಹುಳ್ಳುಳ್ಳಾಯಿತು...... ಅದೇ ಗಳಿಗೆಯಲ್ಲಿ, ಅಜ್ಜಿ ತನ್ನ ಸಂಕಟವನ್ನು ತಡೆಯಲಾರದೆ ನರಳಾಡುತ್ತಿರಬಹುದು......ನಿಂಬೆಹಣ್ಣಿಗಾಗಿ ತನ್ನನ್ನು ಅಂಗಲಾಚಿ ಬೇಡಿಕೊಳ್ಳುತ್ತಿದ್ದಾಗ ಅವಳ ಕಣ್ಣಲ್ಲಿ ಹೇಗೆ ನೀರು ತುಂಬಿಕೊಂಡಿತ್ತೆಂಬುದನ್ನು ಜ್ಞಾಪಕ ಮಾಡಿಕೊಂಡಾಗ ಸ್ವಾಮಿಗೆ ಎದೆ ಇರಿದಂತಾಯಿತು. ಕಳ್ಳ, ನೀಚ, ದ್ರೋಹಿ,



ಅಯೋಗ್ಯ, ಕಲ್ಲುಮನಸ್ಸಿನ ಕಟುಕ ಎಂದು ತನ್ನನ್ನು ತಾನೇ ಬೈದುಕೊಂಡ.

ಹೀಗೆ ಆತ್ಮನಿಂದೆ ಮಾಡಿಕೊಳ್ಳುತ್ತ ಮನೆ ಸೇರಿ ಸದ್ದು ಮಾಡದೆ ಅಜ್ಜಿಯ ಹಾಸಿಗೆಯ ಬಳಿ ಹೋಗಿ ಅವಳ ಕಡೆಯೇ ನೋಡಿದ. ಹೀಗೆಂದೂ ಮಾಡಿದ್ದಿಲ್ಲ ಅವನು. ಪ್ರತಿ ಸಂಜೆಯೂ ಮನೆಗಿನ್ನೂ ಬರುವುದಕ್ಕಿಲ್ಲ, ಅಷ್ಟರಲ್ಲೇ ಅಡಿಗೆ ಮನೆಗೆ ಓಡಿಹೋಗಿ ಅಡಿಗೆಯವನನ್ನು ಗೋಳು ಹುಯ್ದುಕೊಳ್ಳುವುದು ಅವನ ವಾಡಿಕೆ. ಆದರೆ ಈ ದಿನ ತನ್ನ ಹಸಿವನ್ನು ಕೂಡ ಹಿಂಬದಿಗಿಟ್ಟ.

ಅಜ್ಜಿಯ ಕೋಣೆಗೆ ದೀಪವಿಲ್ಲ. ಹಾಲ್ ದೀಪದಿಂದ ಎಷ್ಟು ಬೆಳಕು ಕೋಣೆಯೊಳಕ್ಕೆ ನುಸಿಯುತ್ತದೋ ಅಷ್ಟೇ. ಈ ಅರೆಬರೆ ಕತ್ತಲಲ್ಲಿ ಅಜ್ಜಿಯ ಮುಖ ಸ್ವಾಮಿಗೆ ಸ್ಪಷ್ಟವಾಗಿ ಕಾಣಲಿಲ್ಲ. ಅಲ್ಲಾಡದೆ ಮಲಗಿದ್ದಳು ಅಜ್ಜಿ. ಬದುಕಿದ್ದಳೋ, ಇಲ್ಲದೆ ಹೊಟ್ಟೆನೋವು ತಡೆಯಲಾರದೆ ಸತ್ತೇ ಹೋಗಿಬಿಟ್ಟಳೋ ಎಂದು ಸ್ವಾಮಿಗೆ ತುಂಬ ಶಂಕೆಯಾಯಿತು. ಭಯದಿಂದ ಕಿರಚಿಕೊಳ್ಳಬೇಕು, ಆದರೆ ಮನಸ್ಸನ್ನು ಬಿಗಿಹಿಡಿದುಕೊಂಡು, "ಅಜ್ಜಿ, ನೋವು ಹೇಗಿದೆ ಅಜ್ಜಿ?" ಎಂದು ಕೇಳಿದ. ಏನೂ ಉತ್ತರ ಬರಲಾರದೆಂದು ಅವನ ನಿರೀಕ್ಷೆ. ಆದರೆ ಅಜ್ಜಿ ಕಣ್ಣು ಬಿಟ್ಟು, "ಸ್ವಾಮಿ, ಬಂದೆಯೇನಪ್ಪಾ, ನನ್ನ ಕಂದ? ಊಟ ಮಾಡಿದೆಯೇನು?" ಎಂದು ಕೇಳಿದಳು.

"ಇನ್ನೂ ಇಲ್ಲಾಜ್ಜಿ......ಹೊಟ್ಟೆ ನೋವು ಹೇಗಿದೆಯಜ್ಜಿ?"

"ಪರವಾ ಇಲ್ಲಪ್ಪ, ಪರವಾ ಇಲ್ಲ, ವಾಸಿಯಾಗಿ ಹೋಯ್ತು."

ತನ್ನ ಶಕ್ತಿಯನ್ನೆಲ್ಲ ಖರ್ಚುಮಾಡಿ, "ನಿಂಬೆಹಣ್ಣು ಸಿಕ್ಕಿತೇನಜ್ಜಿ?" ಎಂದು ಕೇಳಿಯೇ ಬಿಟ್ಟ. ತಿಳಿದುಕೊಳ್ಳಬೇಕೆಂದು ಬಹಳ ಆತುರ. ನಿಜವಾಗಿ ಆ ವಿಷಯವಾಗಿ ಅವನಿಗೆ ತುಂಬ ಆತಂಕವಾಗಿತ್ತು. ಅಜ್ಜಿ ಹೆಚ್ಚು ತಡ ಮಾಡದೆ ಉತ್ತರ ಹೇಳಿದಳು. ಆದರೆ ಸ್ವಾಮಿಗೆ ಮಾತ್ರ ಒಂದು ಯುಗವೇ ಕಳೆದ ಹಾಗಾಯಿತು. ಏನೆನ್ನುತ್ತಾಳೋ ಏನೋ? ಅಜ್ಜಿ ಏನು ಮಾಡುತ್ತಾಳೋ ಯಾರಿಗೆ ಗೊತ್ತು? ಛೀಮಾರಿ ಮಾಡಬಹುದು; ನನ್ನ ಮೊಮ್ಮಗ ಅಲ್ಲ ಹೋಗು, ಎನ್ನಬಹುದು; ಇನ್ನು ಮೇಲೆ ನನ್ನ ಕೈಯಲ್ಲಿ ಮಾತಾಡಬೇಡ ನಡಿ, ಎನ್ನಬಹುದು; ಇನ್ನು ಕೆಲವು ನಿಮಿಷದಲ್ಲೇ ನನ್ನ ಪ್ರಾಣ ಹಾರಿ ಹೋಗುತ್ತೆ ನೀನು ಆಗ ನಿಂಬೆಹಣ್ಣು ತಂದುಕೊಟ್ಟಿದ್ದಿದ್ದರೆ ಬದುಕಬಹುದಾಗಿತ್ತು ಎನ್ನಬಹುದು. ಆದರೆ ಅಜ್ಜಿ, "ನೀನು ಹೋಗದೆ ಇದ್ದುದೇ ಒಳ್ಳೆಯದಾಯಿತು. ನಿಮ್ಮ ತಾಯಿ ಒಂದು ಡಜನ್ ಹಣ್ಣು ತರಿಸಿಟ್ಟಿದ್ದಳಂತೆ. ಅಡಿಗೆ ಮನೆಯಲ್ಲೇ ಇತ್ತು" ಎಂದು ಹೇಳಿದಳು.

ಈ ಸಮಾಚಾರ ಕೇಳಿ ಸ್ವಾಮಿಯ ಭುಜದ ಮೇಲಿಂದ ಬೆಟ್ಟದ ಹೊರೆಯನ್ನು ಇಳಿಸಿದಂತಾಯಿತು. ಆನಂದದ ಸಂಭ್ರಮದಲ್ಲಿ "ಅಜ್ಜಿ, ನನ್ನ ಹೊಸ ಹೆಸರೇನು ನಿನಗೆ ಗೊತ್ತಾ? ನನ್ನ ಹೆಸರು ಟೇಟ್" ಎಂದು ಹೇಳಿದ.

"ಏನು?"

"ಟೇಟ್."

"ಟೇಟೂ ಅಂದರೇನೂ?" ಎಂದು ಅಜ್ಜಿ ಪೆದ್ದುಪೆದ್ದಾಗಿ ಕೇಳಿದಳು. ಸ್ವಾಮಿಗೆ

ತುಂಬ ದುಃಖವಾಯಿತು. ಏನು? ಟೇಟ್ ಹೆಸರೇ ಕೇಳಿಲ್ಲವೆ ಇಷ್ಟು ವಯಸ್ಸಾಗಿ? ಬೇರೆ ಯಾವಾಗಲಾದರೂ ಆಗಿದ್ದರೆ ಅಜ್ಜಿಯನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಳ್ಳುತ್ತಿದ್ದ. ಆದರೆ ಈಗ ತಾನೆ ಅಜ್ಜಿಯ ವಿಷಯವಾಗಿ ಅಷ್ಟೊಂದು ಪರಿತಾಪ ಪಟ್ಟಿದ್ದುದರಿಂದ, ಹಾಗೆ ರೇಗಾಡದೆ, ಸುಮ್ಮನೆ, "ಏನು? ಟೇಟ್ ಎಂದರೇನು ಎನ್ನುವುದೇ ನಿನಗೆ ತಿಳಿಯದೆ?" ಎಂದ.

"ಇಲ್ಲಪ್ಪಾ, ನನಗೆ ಗೊತ್ತಿಲ್ಲಾ."

"ಟೇಟ್ ಎನ್ನುವವನು ದೊಡ್ಡ ಕ್ರಿಕೆಟ್ ಆಟಗಾರ. ಪ್ರಪಂಚದಲ್ಲಿ ಎಲ್ಲರಿಗಿಂತ ಗಟ್ಟಿಗನಾದ ಬೋಲರು. ಕ್ರಿಕೆಟ್ ಎಂದರೇನು ಅನ್ನೋದಾದರೂ ಗೊತ್ತು ತಾನೆ ನಿನಗೆ?"

"ಏನಪ್ಪಾ ಕಿರಕೇಟು ಅಂದರೆ?"

ಈ ಅಜ್ಞಾನವನ್ನು ಕಂಡು ಸ್ವಾಮಿ ಅವಾಕ್ಕಾದ. "ಏನು, ಕ್ರಿಕೆಟ್ ಅಂದರೆ ನಿನಗೆ ಗೊತ್ತೇ ಇಲ್ಲವೋ? ಅಥವಾ ಬೇಕುಬೇಕೂಂತ ಹೇಳ್ತಿದ್ದೀಯೋ?"

"ಅದೇನೋ ಗೊತ್ತಿಲ್ಲಾಪ್ಪ ನನಗೆ."

"ನೋಡಜ್ಜಿ, 'ನನಗೆ ಗೊತ್ತಿಲ್ಲ, ನನಗೆ ಗೊತ್ತಿಲ್ಲ' ಎಂದು ಸುಮ್ಮನೆ ಬೊಗಳ್ತಾ ಹೋಗಬೇಡ, ಗುಲ್‌ಷನ್ ಹಾಗೆ. ನಿಮ್ಮ ಕಾಲದಲ್ಲಿ ಹುಡುಗರು ಸಾಯಂಕಾಲ ಏನು ಮಾಡ್ತಾ ಇದ್ದರೋ? ಇಪ್ಪತ್ತುನಾಲ್ಕು ಗಂಟೆಯ ಕಾಲವೂ ಮೂಗು ಹಿಡಿದುಕೊಂಡು ಜಪ ಮಾಡ್ತಾ ಇದ್ದರೇನು?" ಸ್ವಾಮಿ ಒಂದು ಗಳಿಗೆ ಆಲೋಚಿಸಿ ನೋಡಿದ. ಅಜ್ಜಿಯನ್ನು ಈ ಅಜ್ಞಾನಾಂಬುಧಿಯಿಂದ ಕಾಪಾಡುವುದು ತನ್ನ ಪರಮ ಪವಿತ್ರ ಕರ್ತವ್ಯವೆಂದು ಅವನಿಗೆ ತೋರಿತು. ಆದುದರಿಂದ ಅವನು, ಕ್ರಿಕೆಟ್ ಆಟದ ಧ್ಯೇಯಗಳು, ತತ್ವಗಳು ಮತ್ತು ಆ ಆಟದ ಸಂದೇಶ ಇವುಗಳನ್ನು ಕುರಿತು ಅಜ್ಜಿಗೆ ದೊಡ್ಡದಾಗಿ ಉಪದೇಶ ಮಾಡಿದ. ಅಲ್ಲದೆ, ಕ್ರಿಕೆಟ್ ಜಗತ್ತಿನ ಮಹಾವಿಭೂತಿಗಳ ಪರಿಚಯ ಮಾಡಿಸಿಕೊಟ್ಟ. ಒಂದೊಂದು ವಾಕ್ಯವಾಡಿದ ಮೇಲೂ 'ಗೊತ್ತಾಯಿತೆ' ಎಂದು ಕೇಳುತ್ತಿದ್ದ. ಅವನು ಹೇಳುವುದರಲ್ಲಿ ಶೇಕಡಾ ಎರಡೂಕಾಲು ಪಾಲು ಕೂಡ ಅಜ್ಜಿಯ ತಲೆಗೆ ಹತ್ತದೆ ಹೋದರೂ ಸಹ ಆಕೆ ಪ್ರತಿಸಲವೂ ಹೂಗುಟ್ಟುತ್ತಿದ್ದಳು. ಕೊನೆಯಲ್ಲಿ ಸ್ವಾಮಿಯು, ತಮ್ಮ ಎಂ.ಸಿ.ಸಿ. ಟೀಮಿನ ಚರಿತ್ರೆಯನ್ನೂ ಅದರ ಮಹತ್ವವನ್ನೂ ವರ್ಣಿಸಿದ. "ರಾಜಂ ಇಲ್ಲದೆ ಹೋಗಿದ್ದರೆ, ಅಜ್ಜಿ, ನಾವು ಎಲ್ಲಿರಬೇಕಾಗಿತ್ತೋ ಏನೋ! ನಮ್ಮ ಟೀಮಿಗಾಗಿ ಅವನು ನೂರಾರು ರೂಪಾಯನ್ನು ನೀರು ಚೆಲ್ಲಿದ ಹಾಗೆ ಚೆಲ್ಲಿದ್ದಾನೆ. ಬ್ಯಾಟು ಬಾಲು ಕೊಂಡುಕೊಳ್ಳೋದೇನು ಬಿಟ್ಟೇನೆ? ಅವನ ಪೆಟ್ಟಿಗೆ ತುಂಬ ದುಡ್ಡು ತುಂಬಿ ಕೊಂಡಿದ್ದಾನಜ್ಜೀ. ನಮ್ಮ ಟೀಮಿನ ವಿಷಯ ಗೌರ್ಮೇಂಟ್‌ನವರಿಗೂ ಗೊತ್ತು. ಬೇಕಾದರೆ, ಎಂ.ಸಿ.ಸಿ. ಕ್ಯಾಪ್ಟನ್, ಮಾಲ್ಗುಡಿ ಎಂದು ಒಂದು ಕಾಗದ ಬರಿ, ನೇರವಾಗಿ ನಮಗೆ ತಲಪುತ್ತೆ. ನೋಡ್ತಾ ಇರು, ಮಾಲ್ಗುಡಿಯಲ್ಲಿ ಎಲ್ಲರನ್ನೂ ಸೋಲಿಸಿ ಟೋರ್ನ್ಮೆಂಟ್‌ನಲ್ಲಿ ಕಪ್‌ನ ನಾವೇ ಗಿಟ್ಟಿಸ್ತೀವಿ. ಇನ್ನೊಂದು ಕೆಲವು ದಿನ ಆಗಲಿ. ಕ್ರಿಕೆಟ್ ಅಂದರೇನು ಅನ್ನೋದನ್ನ ಆ ಮದರಾಸ್‌ನವರಿಗೂ ಹೇಳಿಕೊಡ್ತೀವಿ." ಕೊನೆಯದಾಗಿ ಎಚ್ಚರಿಕೆಯ

ಮಾತೊಂದನ್ನು ಸೇರಿಸಿದ : "ಬೀದೀಲಿ ಹೋಗೋವರೆಲ್ಲ ನಮ್ಮ ಟೀಮಿಗೆ ಸೇರೋಹಾಗಿಲ್ಲ, ಅದನ್ನ ತಿಳಿದುಕೋ."

ಮಗುವನ್ನು ಎತ್ತಿಕೊಂಡು ಅಪ್ಪ ಅಜ್ಜಿಯ ಕೋಣೆಗೆ ಬಂದರು. "ಯಾವುದರ ಮೇಲಯ್ಯ ನೀನು ಲೆಕ್ಚರ್ ಕೊಡ್ತಾ ಇರೋದು?" ಎಂದು ಸ್ವಾಮಿಯನ್ನು ಕೇಳಿದರು.

ಅಪ್ಪ ಬಂದುದನ್ನು ಸ್ವಾಮಿ ನೋಡಿರಲಿಲ್ಲ. ಆದುದರಿಂದ ಅಪ್ಪ ಮಾತನಾಡಿದ ಕೂಡಲೆ ಅವನು ಬೆಚ್ಚಿಬಿದ್ದ. "ಏನೂ ಇಲ್ಲಪ್ಪ. ಅ......ಅ.....ಏನೂ ಇಲ್ಲ."

"ಇರಲಿ, ಪರವಾ ಇಲ್ಲ, ಹೇಳು. ನಾವೂ ಕೇಳೋಣವಂತೆ."

"ಏನೂ ಇಲ್ಲ.......ಅಜ್ಜಿಗೆ ಕ್ರಿಕೆಟ್ ಎಂದರೇನೂ ಅಂತ ತಿಳಕೋಬೇಕೂಂತ ಆಸೆಯಾಯ್ತಂತೆ. ನಾ ಹೇಳ್ತಾ ಇದ್ದೆ."

"ಓಹ್ಹೋ ಹಾಗೇನು? ಅಮ್ಮ ಯಾವಾಗ ಆಟಗಾತಿ ಆದಳು? ಕ್ರಿಕೆಟ್ ಪಾಂಡಿತ್ಯ ತುಂಬಿದನೇ ನಮ್ಮ ಸ್ವಾಮಿ ನಿನ್ನ ನೆತ್ತೀಗೆ?"

ಅಜ್ಜಿ ಹೇಳಿದಳು : "ಸುಮ್ಮನೆ ಹುಡುಗನ್ನ ಗೋಳುಹುಯ್ಯುಕೋ ಬೇಡವೋ. ಅವನಿಗೆ ನಾನೂ ಅಂದ್ರೆ ಪ್ರಾಣ. ಪಾಪ! ಏನೇನೋ ಹೇಳ್ತಾ ಇದ್ದಾನೆ ಅಷ್ಟು ಹೊತ್ತಿನಿಂದಲೂ. ಇನ್ನೇನು-ನೀನು ಎಂದಾದರೂ ಏನಾದರೂ ಹೇಳಿದ್ದು ಅಷ್ಟರಲ್ಲೇ ಇದೆ......ನೀವೆಲ್ಲ ಈಗ ದೊಡ್ಡ ಮನುಷ್ಯರಾಗಿ ಬಿಟ್ಟಿದ್ದೀರಪ್ಪ......"

ಪುಟ್ಟ ಮಗುವಿನ ಕಡೆ ತೋರಿಸಿ, ಅಪ್ಪ ಹೇಳಿದರು : "ಇನ್ನೊಂದು ಕೆಲವು ದಿನ ತಡಿ. ಇವನು ನಿನಗೆ ಪ್ರಪಂಚದಲ್ಲಿರೋ ವೇದಾಂತ ರಾಜಕೀಯ ಎಲ್ಲಾನೂ ಹೇಳಿಕೊಡ್ತಾನೆ." ಮಗುವಿನ ಕೆನ್ನೆಯನ್ನು ಅಪ್ಪ ಮೆಲ್ಲಗೆ ಜಿಗುಟಿದರು. ಮಗು ತನ್ನ ಒಂಟಿ ಹಲ್ಲನ್ನು ತೋರಿಸಿಕೊಂಡು 'ಗಿಗಿಗಿಗಿ' ಎಂದು ನಕ್ಕಿತು. "ನೋಡಿದೆಯಾಮ್ಮಾ, ಕಿವಿಗೊಟ್ಟು ಕೇಳು. ಆಗಲೇ ಲೆಕ್ಚರ್ ಹೊಡೀತಿದ್ದಾನೆ" ಎಂದರು ಅಪ್ಪ. ಮಗುವನ್ನು ಎತ್ತಿಕೊಳ್ಳುವುದಕ್ಕೆಂದು ಅಜ್ಜಿ ಕೈ ಚಾಚಿದಳು. ಆದರೆ ಅಪ್ಪ ಮಗುವನ್ನು ತಮ್ಮ ಎದೆಗೆ ಅವುಚಿಕೊಂಡು, "ಇಲ್ಲ, ಇಲ್ಲ. ನಾನಿವನ್ನ ಬಿಡೊಲ್ಲ. ಆಫೀಸಿನಿಂದ ಮನೆಗೆ ಬೇಗ ಬಂದಿರೋದೇಕೆ ಅಂದುಕೊಂಡಿದ್ದೀಯಾ? ನಿನ್ನ ಕೈಗೆ ಕೊಟ್ಟು ಬಿಡಲೇ ಇವನ್ನ?.......ಬಾರೋ ಸ್ವಾಮಿ, ಊಟ ಮಾಡೋಣಂತೆ........ಅದು ಹೋಗಲಿ........ನಿಮ್ಮ ತಾಯಿ ಎಲ್ಲಿ?" ಎಂದರು.

## ಮೂರು

ಸ್ವಾಮಿಯ ನಡವಳಿಕೆ ಕ್ಯಾಪ್ಟನ್‌ಗೆ ಸರಿಬೀಳಲಿಲ್ಲ. "ಸ್ವಾಮಿ, ನಿನಗೆ ವಷಟ್ಕಾರ ಬೇಕಾಗಿದೆ ಅಂತ ಕಾಣುತ್ತೆ. ಆಟದ ಮೇಲೆ ನಿನಗೆ ಮನಸ್ಸೇ ಇಲ್ಲ. ಪ್ರಾಕ್ಟೀಸಿಗೇ ಬರುತ್ತಿಲ್ಲ ನೀನು" ಎಂದು ಸ್ವಾಮಿಗೆ ಎಚ್ಚರಿಕೆಯಿತ್ತ.

"ಏನು ಮಾಡೋದೋ, ಹಾಳು ಬೋರ್ಡು ಸ್ಕೂಲು."

"ಹೋಗಿ ಅದಕ್ಕೆ ಸೇರೂ ಅಂತ ಹೇಳಿದವರು ಯಾರು? ಅವರೇನೂ ನಿನ್ನ ಹತ್ತಿರ ಬಂದು ದಯಮಾಡಿಸಬೇಕು ಅಂತ ಅಕ್ಷತೆ ಕೊಡಲಿಲ್ಲ. ಅದು ಹೋಗಲಿ, ನಾ ಹೋಳೋದನ್ನ ಕೇಳು. ಬ್ರಾಡ್‌ಮನ್, ಟೇಟ್, ಹಾಬ್ಸ್ ಇವರೂ ಕೂಡ ದಿನವೂ ಮೂರು ನಾಕು ಗಂಟೆ ಪ್ರಾಕ್ಟೀಸು ಮಾಡಿಕೋತಾರಂತೆ. ಅವರಿಗಿಂತ ದೊಡ್ಡ ಮನುಷ್ಯನೋ ನೀನು?"

"ಕ್ಯಾಪ್ಟನ್, ನನ್ನ ಮಾತು ಸ್ವಲ್ಪ ಕೇಳೋ. ಐದು ಗಂಟೆಯೊಳಗೆ ಫೀಲ್ಡಿಗೆ ಬರಬೇಕೂ ಅಂತ ಎಷ್ಟೆಷ್ಟೆಲ್ಲ ಪ್ರಯತ್ನ ಮಾಡ್ತೀನಿ. ಆದರೆ ಏನು ಹೇಳಲಿ? ನಮ್ಮ ಸ್ಕೂಲು ಟೈಂಟೇಬಲ್ಲು ತುಂಬಾ ಅಧ್ವಾನ.........."

ಏನಾದರೂ ಮಾಡಲೇಬೇಕಾಯಿತು. ಕ್ಯಾಪ್ಟನ್ನು ಸ್ವಾಮಿಯನ್ನು ಕುರಿತು, "ನೋಡು, ನಿಮ್ಮ ಹೆಡ್‌ಮೇಷ್ಟರನ್ನು ನೋಡಿ, ಮ್ಯಾಚ್ ಮುಗಿಯೋವರೆಗೂ ಡ್ರಿಲ್ ಕ್ಲಾಸಿಗೆ ರಜಾ ಕೊಡಬೇಕು ಅಂತ ಕೇಳು" ಎಂದು ಸೂಚಿಸಿದ. ಹೇಳುವಷ್ಟು ಸುಲಭವಾಗಿರಲಿಲ್ಲ, ಆ ಕೆಲಸ. ಹಾಗೆಂದು ಸ್ವಾಮಿ ತಿಳಿಸಿದ. ಮುದಿ ಗೂಬೆಯಂಥ ಆ ಹೆಡ್‌ಮೇಷ್ಟರ ಮುಖ, ಆತನ ಸಣ್ಣ ಕೊರಳು, ಕನ್ನಡಕ - ಎಲ್ಲವೂ ಅವನ ಮನಸ್ಸಿನಲ್ಲಿ ಪ್ರತ್ಯಕ್ಷವಾದವು........

"ಆ ಪಿಶಾಚಿಯನ್ನು ನೋಡುವುದಕ್ಕೆ ನನಗೆ ಭಯಾಪ್ಪ-ಆಮೇಲೆ ಸೆಕೆಂಡ್ ಫಾರಂನಿಂದ ಪ್ಯಾಸೇ ಮಾಡಿಸದೆ ಅಲ್ಲೇ ನಿಲ್ಲಿಸಿಬಿಡ್ತಾನೆ."

"ಏನು? ನಿಮ್ಮ ಹೆಡ್‌ಮೇಷ್ಟರೂ ಅಂದರೆ ನಿನಗೆ ಅಷ್ಟೊಂದು ಭಯವೆ! ಒಂದು ಪಕ್ಷ ನಾನು ಬಂದು ನೋಡಿದೇ ಅಂತ ಇಟ್ಟುಕೊ."

"ಬೇಡಪ್ಪಾ, ನಿಜವಾಗಿ ಬೇಡ. ಅವನೆಷ್ಟು ನೀಚ ಅನ್ನೋದು ನಿನಗೆ ಗೊತ್ತಿಲ್ಲ. ನಿನ್ನ ಬೈದುಬಿಡ್ತಾನೆ. ಅಲ್ಲದೆ, ನೀನು ಹೋದಮೇಲೆ ಖಂಡಿತವಾಗಿ ನನ್ನನ್ನ ಕೊಂದುಹಾಕಿಬಿಡ್ತಾನೆ. ನನಗೆ ಗೊತ್ತು."

"ಒಳ್ಳೇ ಪುರಾಣಾನೇ ತೆಗೆದೆಯಲ್ಲ; ಹಾಗಾದರೆ ನಾವೇನು ಮಾಡಬೇಕು ಅಂತೀಯ? ಟೀಂ ಷುರು ಮಾಡಿ ಎರಡು ತಿಂಗಳಾಗ್ತಾ ಬಂತು. ನೀನು ಹತ್ತು ದಿನ ಕೂಡ ಬಂದಿಲ್ಲ."

ಪೌಳಿಗೋಡೆಯ ಮೇಲೆ ಮಲಗಿದ್ದ ಮಣಿ ಈ ಸಂಭಾಷಣೆಯಲ್ಲಿ ತಲೆ ಹಾಕಿದ : "ನಿಮ್ಮ ಹೆಡ್‌ಮೇಷ್ಟರು ಏನು ಮಾಡಬಲ್ಲನೋ ನಾನೂ ಒಂದು ಕೈ ನೋಡೇಬಿಡ್ತೀನಿ. ಅಥವಾ ಹೌದು ಅನ್ನಬೇಕು ಅವನು, ಅಥವಾ ಇಲ್ಲ ಅನ್ನಬೇಕು. ನಿನ್ನನ್ನೇನಾದರೂ ಮುಟ್ಟಿಗಿಟ್ಟಿದನೋ ನಾನು ಅವನನ್ನ ಭೂಗತ ಮಾಡಿಬಿಡ್ತೀನಿ. ಬಹಳ ದಿನದಿಂದ ನನ್ನ ಗದೇಗೆ ಯಾವ ಕೆಲಸಾನೂ ಸಿಕ್ಕಿಲ್ಲ."

ರಾಜಂನ ತಡೆಯುವ ಹಾಗೇ ಇರಲಿಲ್ಲ. ಮಾರನೆಯ ದಿನ ಬಂದು ಹೆಡ್‌ಮೇಷ್ಟರನ್ನು ನೋಡಿಯೇ ತೀರುತ್ತೇನೆಂದು ಪಟ್ಟು ಹಿಡಿದುಬಿಟ್ಟ ಅವನು. ತನ್ನ ಕ್ಲಾಸಿಗೆ ಒಂದೆರಡು ಪೀರೀಡು ಚಕ್ಕರ್ ಹೊಡೆದರೂ ಪರವಾ ಇಲ್ಲ, ತಾನೂ ಬರುತ್ತೇನೆ ಎಂದು ಮಣಿ ಹೇಳಿದ. ನಿನ್ನ ಕೆಲಸ ನೀನು ನೋಡಿಕೋ ಎಂದು ರಾಜಂ ಅವನಿಗೆ ಬುದ್ಧಿ ಹೇಳಿದ.

ಮಾರನೆಯ ದಿನ ಬೆಳಿಗ್ಗೆ ಒಂಬತ್ತೂವರೆಯಾಗಿದೆ. ಸ್ವಾಮಿನಾಥ ಐದು ನಿಮಿಷದ ಹೊತ್ತು ಕಣ್ಣುಗಳನ್ನು ಬಲವಾಗಿ ಉಜ್ಜಿಕೊಂಡು ತಲೆನೋವೂ ಎಂದು ಮುಲುಗುತ್ತ ಕುಳಿತುಕೊಂಡ. ಅಪ್ಪ ಬಂದು ನೆತ್ತಿಯನ್ನು ಮುಟ್ಟಿ ನೋಡಿ, "ಹೋಗಿ ಒಂದಷ್ಟು ತಣ್ಣೀರು ಎರಚಿಕೋ ನೆತ್ತೀಗೆ, ಎಲ್ಲಾ ಸರಿ ಹೋಗುತ್ತೆ" ಎಂದರು.

"ಆಗಲೀ ಅಪ್ಪಾ" ಎಂದು ಹೇಳಿ ಸ್ವಾಮಿ ಮನೆಯೊಳಕ್ಕೆ ಹೋದ. ಅಪ್ಪನ ರೂಮಿನ ಹೊರಗಡೆ ಒಂದು ನಿಮಿಷ ನಿಂತು ಯೋಚಿಸಿದ. ತಣ್ಣೀರು ಎರಚಿಕೊಂಡರೆ ತಲೆನೋವು ಹೋಗುವುದಾದರೆ ತಾನು ಅದನ್ನು ಮಾಡುವುದಿಲ್ಲ ಎಂದು ತೀರ್ಮಾನಿಸಿದ. ಜ್ವರ ಬರಲಿ ಎನ್ನುವುದೇ ಅವನ ಬಯಕೆಯಾಗಿತ್ತು. ಹೆಡ್‌ಮೇಷ್ಟರನ್ನು ನೋಡುವುದಕ್ಕೆ ರಾಜಂ ಆವತ್ತು ಬರುವವನಾಗಿದ್ದ. ಆದ್ದರಿಂದ ತಾನು ಸ್ಕೂಲಿಗೆ ಹೋಗಬಾರದು. ಮತ್ತೆ ಒಳಗೆ ಹೋಗಿ, "ಅಪ್ಪಾ, ತಣ್ಣೀರು ಎರಚಿಕೋ ಅಂದಿರಾ?" ಎಂದು ಕೇಳಿದ.

"ಹೂ."

"ತಣ್ಣೀರೆರಚಿಕೊಂಡರೆ ನಿಮೋನಿಯಾ ಬಂದುಬಿಡೊಲ್ಲವೆ? ನನಗೆ ಸ್ವಲ್ಪ ಜ್ವರಾನೂ ಇರೋ ಹಾಗಿದೆ."

ಅಪ್ಪ ಅವನ ನಾಡಿ ಹಿಡಿದು ನೋಡಿ, "ನೋಡು, ಸ್ಕೂಲಿಗೆ ಓಡಿ ಹೋಗು, ಎಲ್ಲಾ ವಾಸಿಯಾಗಿಬಿಡುತ್ತೆ" ಎಂದರು. ಕಲ್ಲನ್ನು ಹಿಂಡಿ ಹಾಲನ್ನಾದರೂ ತೆಗೆಯಬಹುದು; ಅಪ್ಪನ ಬಾಯಿಂದ ಸ್ಕೂಲಿಗೆ ಹೋಗದೆ ಉಳಿದುಕೊಳ್ಳಲು ಅಪ್ಪಣೆ ಹೊರಡಿಸುವುದು ಆಗದ ಮಾತು.

ಸ್ವಾಮಿ ನೆಟ್ಟಗೆ ಅಜ್ಜಿಯ ಹತ್ತಿರ ಹೋದ. ಅಜ್ಜಿಯ ಕಿವಿಯಲ್ಲಿ, "ಅಜ್ಜಿ, ನಾನು ಸತ್ತು ಹೋದರೆ ನನ್ನ ಹೆಣವನ್ನೇ ಸ್ಕೂಲಿಗೆ ಕಳಿಸ್ತಾರೇಂತ ಕಾಣುತ್ತೆ ಅಪ್ಪ" ಎಂದು ದೂರು ಹೇಳಿದ. "ಬಿಡ್ತು ಬಿಡ್ತು ಅನ್ನು. ಬೆಳಿಗ್ಗೆ ಎದ್ದು ಎಂಥ ಮಾತೋ ನೀನಾಡೋದು?" ಎಂದು ಅಜ್ಜಿ ತಾರಮ್ಮಯ್ಯ ಆಡಿದಳು.

"ಅಲ್ಲಾ ಮತ್ತೆ, ನೋಡಜ್ಜೀ. ಜ್ವರ ಸುಡತಾ ಇದೆ. ಆದರೂನೂ ನಾನು ಸ್ಕೂಲಿಗೆ ರಜಾ ತೊಗೋ ಕೂಡದಂತೆ."

"ಬೇಡಪ್ಪ, ಹೋಗಬೇಡ" ಎಂದಳು ಅಜ್ಜಿ. ಅಮ್ಮನನ್ನು ಕರೆದು, "ಮಗೂಗೆ ಜ್ವರ ಬಂದಿದೆ. ಅವನು ಈವತ್ತು ಸ್ಕೂಲಿಗೆ ಹೋಗೋದು ಬೇಡಾ" ಎಂದಳು.

"ಜ್ವರವೇ?" ಅಮ್ಮನಿಗೆ ಬಹಳ ಚಿಂತೆಯಾಯಿತು. ಸ್ವಾಮಿಯ ಮೈ ಮುಟ್ಟಿ ನೋಡಿ, "ಅಯ್ಯೋ, ಅಯ್ಯೋ, ಸುಡುತ್ತಾ ಇದೆ" ಎಂದಳು. ಸ್ವಾಮಿನಾಥ ತುಂಬ ದೈನ್ಯವಾಗಿ, "ಹಾಲಿದ್ದರೆ ಒಂದಿಷ್ಟು ಕೊಡಮ್ಮ, ಸ್ಕೂಲಿಗೆ ಹೊತ್ತಾಗ್ತಾ ಇದೆ" ಎಂದ. ಈ ಸಲಹೆಯನ್ನು ಅಮ್ಮ ತಳ್ಳಿ ಹಾಕಿದಳು. ಸ್ವಾಮಿನಾಥ ಕ್ಷೀಣ ಸ್ವರದಲ್ಲಿ "ಬೇಡಮ್ಮ, ಅಪ್ಪ ಬೈತಾರೆ. ಹೋಗ್ತೀನಿ" ಎಂದ. ಅಮ್ಮ ಒಂದು ಹಾಸಿಗೆ ತಂದುಕೊಟ್ಟು ದಸಬುಸನೆ ಅಪ್ಪನ ರೂಮಿಗೆ ಓಡಿದಳು. ಬಾಗಿಲು ತೆಗೆದು, "ಸ್ವಾಮಿಗೆ ಜ್ವರ ಬಂದುಬಿಟ್ಟಿದೆ. ಅವನು ಇವತ್ತು ಸ್ಕೂಲಿಗೆ ಹೋಗುವುದು ಬೇಡ" ಎಂದು ಹೇಳಿದಳು.

"ಅವನ ಟೆಂಪರೇಚರ್ ತೊಗೊಂಡೆಯೇನು?"

"ಇನ್ನೂ ಇಲ್ಲ. ಒಂದು ದಿನ ಸ್ಕೂಲಿಗೆ ಹೋಗದೆ ಹೋದರೆ ಏನು ಮಹಾ ಕೊಳ್ಳೆ ಹೋಗುತ್ತೋ!"

"ಏನೇ ಆಗಲಿ, ಅವನ ಟೆಂಪರೇಚರ್ ನೋಡು." ತನ್ನ ಮಾತಿನಲ್ಲಿ ಅಡಗಿದ್ದ ವ್ಯಂಗ್ಯ ಎಲ್ಲಿ ಹೆಂಡತಿಗೆ ತಿಳಿಯುತ್ತದೋ ಎಂದು, ಅದನ್ನು ಮರಸುವುದಕ್ಕೋಸ್ಕರ, "ಇನ್ನೇನೂ ಇಲ್ಲ, ಡಾಕ್ಟರು ಗೀಕ್ಟರನ್ನೇನಾದರೂ ಕರಕೊಂಡು ಬರಬೇಕೋ ಎಂದು ತಿಳಿದುಕೊಳ್ಳುವುದಕ್ಕೆ" ಎಂದು ಸೇರಿಸಿದರು.

ಸ್ವಾಮಿಯ ಬಾಯೊಳಗೊಂದು ಥರ್ಮಾಮೀಟರ್ ಇಟ್ಟು ಅರ್ಧ ನಿಮಿಷದ ಮೇಲೆ ತೆಗೆದು ನೋಡಿದರೆ ನಾರ್ಮಲ್ಲೇ ಇತ್ತು. ಅಮ್ಮ ಅದನ್ನು ನೋಡಿ ಸ್ವಾಮಿಯ ಬಾಯೊಳಗೆ ಇನ್ನೊಮ್ಮೆ ತುರುಕಿದಳು. ಮತ್ತೆ ನಾರ್ಮಲ್ ತೋರಿಸಿತು. ಅಪ್ಪನ ಹತ್ತಿರ ತೆಗೆದುಕೊಂಡು ಹೋದಳು. "ನಾರ್ಮಲ್" ಎಂದರು ಅಪ್ಪ. 'ನನಗೆ ಗೊತ್ತಿಲ್ಲವೆ?' ಎಂದು ಸೇರಿಸಬೇಕೂಂತ ಅವರಿಗೆ. ಆದರೆ ತಡೆದುಕೊಂಡರು. ಅಮ್ಮ ಬಿಟ್ಟಾಳೆಯೇ? "ಈ ಥರ್ಮಾಮೀಟರ್ ಕೆಟ್ಟುಹೋಗಿರಬೇಕು. ಸ್ವಾಮಿಗೆ ಜ್ವರ ಇದೆ. ನನ್ನ ಕೈಗಿಂತ ಥರ್ಮಾಮೀಟರ್ ಬೇಕೇ? ನೂರೊಂದು ಡಿಗ್ರಿ ಜ್ವರ ಇದೆ ಈಗ. ಬೇಕಾದರೆ ಪ್ರಮಾಣ ಮಾಡ್ತೀನಿ."

"ಇರಬಹುದು" ಎಂದರು ಅಪ್ಪ.

ಅಂತೂ ಇಂತೂ, ಸ್ಕೂಲಿನಲ್ಲಿರಬೇಕಾದ ಹೊತ್ತಿಗೆ ಸ್ವಾಮಿನಾಥ ಹಾಯಾಗಿ ಕಣ್ಣು ಮುಚ್ಚಿಕೊಂಡು ಹಾಸಿಗೆಯ ಮೇಲೆ ಮಲಗಿದ್ದ. ಹೆಜ್ಜೆಯ ಸದ್ದಾಯಿತು. ಸ್ವಾಮಿ ಕಣ್ಣು ತೆರೆದು ನೋಡಿದ. ಅಪ್ಪ ಹಾಸಿಗೆ ಹತ್ತಿರ ನಿಂತು, ತಗ್ಗು ದನಿಯಲ್ಲಿ "ಬಲು ಅದೃಷ್ಟ ಕಣೋ ನಿನ್ನದು. ಸ್ಕೂಲಿಗೆ ಹೋಗೊಲ್ಲ ಅಂದರೆ ಸಾಕು, ನಿನ್ನ ಪರವಾಗಿ ಲಾಯರ್‌ಗಿರಿ ವಹಿಸೋದಕ್ಕೆ ಮನೇಲಿ ಎಷ್ಟು ಜನ ಸಿದ್ಧವಾಗಿರ್‍ತಾರೆ? ಅಬ್ಬ!" ಎಂದರು. ಹೀಗೆ ನಿಷ್ಕಾರಣವಾಗಿ ತನ್ನ ಮೇಲೆ ದಾಳಿ ಮಾಡುವುದು ಸ್ವಾಮಿಯ ಮನಸ್ಸಿಗೆ ಒಪ್ಪಲಿಲ್ಲ. ಕಣ್ಣು ಮುಚ್ಚಿಕೊಂಡು ಮೆಲ್ಲಗೆ ನರಳುತ್ತ ಗೋಡೆಯ ಕಡೆಗೆ ತಿರುಗಿಕೊಂಡ.

ಮಧ್ಯಾಹ್ನದ ವೇಳೆಗೆ ಸ್ವಾಮಿಗೆ ಹಾಸಿಗೆಯೆಂದರೆ ಬೇಜಾರು ಹಿಡಿಯಿತು. ಸಾಯಂಕಾಲ ಕೂಡ ಹಾಸಿಗೆಯಲ್ಲೇ ಹೇಗೆ ಮಲಗಿರುವುದಪ್ಪಾ ಎಂದು ಅವನಿಗೆ ದಿಗಿಲಾಯಿತು. ಅಷ್ಟೇ ಅಲ್ಲ, ರಾಜಂ ಬೆಳಿಗ್ಗೆಯೇ ಸ್ಕೂಲಿಗೆ ಬಂದು ಹೊರಟು ಹೋಗಿರುತ್ತಾನ.

ಅಮ್ಮನ ಹತ್ತಿರ ಹೋಗಿ, "ಸ್ಕೂಲಿಗೆ ಹೋಗುತ್ತೇನಮ್ಮ" ಎಂದು ತಿಳಿಸಿದ. ಅಮ್ಮ ಕೂಡಲೆ ಪ್ರತಿಭಟಿಸಿದಳು. ನಾಡಿ, ಹಣೆ, ಕತ್ತು ಎಲ್ಲ ಮುಟ್ಟಿ ನೋಡಿ, "ಬೆಳಿಗ್ಗೆಗಿಂತ ವಾಸಿ, ಆದರೂ ಸ್ಕೂಲಿಗೆ ಹೋಗೋ ಸ್ಥಿತೀಲಿಲ್ಲ" ಎಂದಳು. "ಎಲ್ಲಾ ಸರಿಯಾಗಿದ್ದೀನಮ್ಮ, ನೀನು ಕೂಗಾಡಬೇಡ". ಎಂದು ಹೇಳಿ ಸ್ಕೂಲಿಗೆ ಹೊರಟ ಸ್ವಾಮಿ.

ಸ್ಕೂಲಿಗೆ ಹೋಗುವ ದಾರಿಯಲ್ಲಿ ರಾಜಂ ಮಣಿ ಸಿಕ್ಕಿದರು. ಮಣಿಯ ಕಂಕುಳ

ಕೆಳಗೆ ಅವನ ಗದೆ ಇತ್ತು. ಅವರಿಬ್ಬರೂ ಸೇರಿ ಏನೋ ಭಾರಿ ಅನಾಹುತ ನಡೆಸಿಬಿಟ್ಟಿರಬಹುದೆಂದು ಸ್ವಾಮಿಗೆ ಭಯವಾಯಿತು.

"ಭೇಷ್. ಬಹಳ ಗಟ್ಟಿಗ ಕಾಣೋ ನೀನು! ಎಲ್ಲಿಗೆ ಹೋಗಿದ್ದೆಯೋ ಬೆಳಿಗ್ಗೆ?" ಎಂದು ರಾಜಂ ಕೇಳಿದ.

"ಹೆಡ್‌ಮೇಷ್ಟರನ್ನು ನೋಡಿದ್ದೆಯೇನೋ ರಾಜಂ?"

"ಇನ್ನೂ ಇಲ್ಲ. ನೀನು ಬಂದಿರಲಿಲ್ಲಾ ಅಂತ ಗೊತ್ತಾಯ್ತು. ಆದರಿಂದ ಅವರನ್ನು ನೋಡಲಿಲ್ಲ. ಅವರನ್ನು ಕಂಡು ಮಾತನಾಡುವಾಗ ನೀನಿರಬೇಕೋ ಬೇಡವೋ? ನಿನ್ನ ಕೆಲಸ ತಾನೇ ಇಷ್ಟಕ್ಕೂ!"

ಸ್ವಾಮಿಯ ಫಜೀತಿ ಬೇಡ. ದಿಕ್ಕೇ ತೋಚಲಿಲ್ಲ ಅವನಿಗೆ. ಚೇತರಿಸಿಕೊಂಡ ಮೇಲೆ "ಮಣಿ ಅಲ್ಲಿ ನಿಂತುಕೊಂಡು ಏನು ಮಾಡುತ್ತಿದ್ದಾನೆ?" ಎಂದು ಕೇಳಿದ.

"ನನಗೆ ಗೊತ್ತಿಲ್ಲಾಪ್ಪ. ನಾನು ಬರೋ ವೇಳೆಗೆ ನಿಮ್ಮ ಸ್ಕೂಲು ಬಾಗಿಲ ಹತ್ತಿರ ಗದೆ ಹಿಡಿದುಕೊಂಡು ರೆಡಿಯಾಗಿದ್ದ. ಕ್ಲಾಸಿಗೆ ಚಕ್ಕರ್ ಹೊಡೆದು ಬಿಟ್ಟಿದ್ದಾನೆ."

"ಮಣಿ, ನಿನಗೆ ಕ್ಲಾಸಿಲ್ಲವೇನೋ?"

"ಇದೆ, ನಾನು ಹೋಗಲಿಲ್ಲ, ಅಷ್ಟೆ."

"ನಿನ್ನ ಗದೆ ಯಾಕೆ ತಂದಿದ್ದೀಯ?"

"ಸುಮ್ಮನೆ."

ರಾಜಂ ಕೇಳಿದ : "ನಿನ್ನೇನೇ ನಿನಗೆ ಹೇಳಿರಲಿಲ್ಲವೇನೋ, ಕ್ಲಾಸಿಗೆ ಹೋಗಿ ನಿನ್ನ ಕೆಲಸ ನೀನು ನೋಡಿಕೋ ಅಂತ?"

"ಅದೊಂದೂ ನನಗೆ ಜ್ಞಾಪಕ ಇಲ್ಲ. ನಾನೂ ಬರ್ತೀನಿ ನಿನ್ನ ಜೊತೇಲಿ ಅಂತ ಅಂದಾಗ ನಿನ್ನ ಕೆಲಸ ನೀನು ನೋಡಿಕೊಂಡು ಬಿದ್ದಿರು ಅಂತ ನೀನು ಹೇಳಿದೆ, ನಾನೇನು ನಿನ್ನ ಜೊತೇಲಿ ಬಂದಿಲ್ಲವಲ್ಲ ಈಗ? ಸುಮ್ಮನೆ ಈ ಕಡೆ ಬಂದೆ. ನೀನೂ ಬಂದಿದ್ದೀಯ. ಇದು ಪಬ್ಲಿಕ್ ರಸ್ತೆ, ತಿಳಕೋ." ಮಣಿಯ ಕುಚೋದ್ಯ ಅವರಿಗೆ ಬೇಕಾಗಿರಲಿಲ್ಲ. ಇಬ್ಬರ ಮನಸ್ಸೂ ಯಾವುದೋ ಗಾಢಾಲೋಚನೆಯಲ್ಲಿ ಮುಳುಗಿತ್ತು.

"ಯೋಚನೆ ಮಾಡಬೇಡ್ರೋ, ನಿಮಗೆ ತೊಂದರೆಯಾದರೆ ನಾನಿದ್ದೀನಿ" ಎಂದ ಮಣಿ.

"ನೀನು ಅವನ ರೂಮಿಗೆ ಕಾಲಿಟ್ಟಿದ್ದೇ ಆದರೆ ಅವನು ಪೊಲೀಸಿನವರಿಗೆ ಹೇಳಿ ಕಳಿಸ್ತಾನೆ, ಖಂಡಿತ" ಎಂದ ಸ್ವಾಮಿನಾಥನ್.

ಸ್ಕೂಲಿನ ಗೇಟ್ ಹತ್ತಿರ ಬಂದರು. ಮಣಿಯು ಸ್ಕೂಲಿನೊಳಕ್ಕೆ ಕಾಲಿಡಕೂಡದು; ಹೊರಟು ಹೋಗಬೇಕು, ಇಲ್ಲದೆ ಹೋದರೆ ರಸ್ತೆಯಲ್ಲೇ ನಿಂತಿರಬೇಕು, ಎಂದು ಅಪ್ಪಣೆ ಮಾಡಿ ರಾಜಂ ಒಳಗೆ ಹೋದ. ಸ್ವಾಮಿನಾಥನೂ ಹೋಗಲೇಬೇಕಾಯಿತು ಹೆಡ್‌ಮೇಷ್ಟರ ರೂಮಿಗೆ.

ಹೆಡ್‌ಮೇಷ್ಟರು ಮೊಣಕೈಯನ್ನು ಮೇಜಿನ ಮೇಲೆ ಊರಿಕೊಂಡು, ಅಂಗೈಯಲ್ಲಿ

ತಲೆಯನ್ನು ಹಿಡಿದುಕೊಂಡು ಸಣ್ಣಗೆ ನಿದ್ದೆ ಹೊಡೆಯುತ್ತಿದ್ದರು. ಸಣ್ಣ ಕೋಣೆ. ಒಂದೇ ಕಿಟಕಿ, ಅದನ್ನು ತೆರೆದರೆ ಆಚೆ ಕಡೆಯ ಅಂಗಡಿಗೆ ಸೇರಿದ ಹಳೆಯ ಗೋಡೆ ಕಾಣಿಸುತ್ತದೆ. ಕೋಣೆಯ ತುಂಬ ಮ್ಯಾಪುಗಳು, ಗ್ಲೋಬುಗಳು, ಜಾಮೆಟ್ರಿ ಸಲಕರಣೆಗಳು ಅಸ್ತವ್ಯಸ್ತವಾಗಿ ಬಿದ್ದಿವೆ. ಹೆಡ್‌ಮೇಷ್ಟರ ಬಿಳಿಯ ಬೆತ್ತ ಎರಡು ಶಾಯಿ ಕುಡಿಕೆಗಳ ನಡುವೆ ತಲೆಯಿಟ್ಟುಕೊಂಡು ಮಲಗಿದೆ. ಚಾವಣಿಯಲ್ಲಿದ್ದ ಗಾಜಿನ ಹೆಂಚಿನಿಂದ ಸೂರ್ಯನ ಕಿರಣವೊಂದು ಹಾದು ಬಂದು ನೇರವಾಗಿ ಹೆಡ್‌ಮೇಷ್ಟರ ಮೂಗಿನ ಮೇಲೂ ಮೇಜಿನ ಮೇಲೂ ಬೀಳುತ್ತಿದೆ. ಹೆಡ್‌ಮೇಷ್ಟರು ಕೇಳಿಯೂ ಕೇಳಿಸದಂತೆ ಹಿತವಾಗಿ ಮಿತವಾಗಿ ಗೊರಕೆ ಹೊಡೆಯುತ್ತಿದ್ದಾರೆ. ಆತ ಈ ಸ್ಥಿತಿಯಲ್ಲಿರಬಹುದೆಂದು ಎಣಿಸಿರಲಿಲ್ಲ.

"ಏನು ಮಾಡೋಣೋ?" ಎಂದು ಸ್ವಾಮಿನಾಥ ಕಾಶಿಗೆ ಕೇಳಿಸುವಂಥ ಪಿಸು ಮಾತಿನಲ್ಲಿ ಕೇಳಿದ.

"ಸ್ವಲ್ಪ ಇರು" ಎಂದು ರಾಜಂ ಆಜ್ಞೆ ಮಾಡಿದ.

ಹತ್ತು ನಿಮಿಷ ಕಾದು ನೋಡಿದರು. ಆಮೇಲೆ ಕಾಲಿನಿಂದ ಸಣ್ಣ ಪುಟ್ಟ ಸದ್ದುಗಳನ್ನು ಮಾಡತೊಡಗಿದರು. ಹೆಡ್‌ಮೇಷ್ಟರು, ಅಂಗೈ ಮಧ್ಯದಿಂದ ತಲೆಯನ್ನು ಎತ್ತದೆ, ಇದ್ದಲ್ಲಿಯೇ ಕಣ್ಣು ಬಿಟ್ಟು ಸುಮ್ಮನೆ ಇವರ ಕಡೆಯೇ ನೋಡಿದರು. ಗುರುತು ಹಿಡಿದಂತೆ ಕೂಡ ತೋರಿಸಿಕೊಳ್ಳಲಿಲ್ಲ. ಆಮೇಲೆ ಕಣ್ಣನ್ನು ಉಜ್ಜಿಕೊಂಡು ಹುಬ್ಬನ್ನು ಮೂರು ಸಲ ಎತ್ತಿ, ಬಲವಾಗಿ ಆಕಳಿಸಿ, ನಿದ್ರೆ ತುಂಬಿದಂಥ ದನಿಯಲ್ಲಿ, "ನಿಮಗೆ ಕ್ಲಾಸಿಲ್ಲವೇನ್ರೋ?" ಎಂದು ಕೇಳಿದರು. ಕನ್ನಡಕಕ್ಕಾಗಿ ತಡಕಾಡಿದರು. ಸಿಕ್ಕಿತು. ಮೂಗಿಗೇರಿಸಿದರು. ಚಿತ್ರವೀಗ ಪೂರ್ಣವಾಯಿತು : ಮುದಿ ಕಾಗೆಯ ಮುಖ, ಕೊಳಕು ಕನ್ನಡಕ. ಹತ್ತು ಸ್ವಾಮಿನಾಥರು ಬರಲಿ, ನೂರು ಸ್ವಾಮಿನಾಥರು ಬರಲಿ; ಎಲ್ಲರಿಗೂ ದಿಗಿಲು ಹುಟ್ಟಬೇಕು. ತಿರುಗಿ ಕೇಳಿದರು. "ಯಾವ ಕ್ಲಾಸೋ ನೀವು? ಮೇಷ್ಟರು ಬಂದಿಲ್ಲವೇನ್ರೋ?"

"ನಾನು ನಿಮ್ಮ ಸ್ಕೂಲಲ್ಲ" ಎಂದು ರಾಜಂ ಜಬರ್ದಸ್ತಿನಿಂದ ಹೇಳಿದ.

"ಓಹೋ, ಹಾಗಾದರೆ ದೇವಲೋಕದಿಂದ ಇಳಿದು ಬಂದೆಯೋ?"

"ನಾನು ಎಂ.ಸಿ.ಸಿ. ಕ್ಯಾಪ್ಟನ್ನು. ಮುಖ್ಯವಾದ ಕೆಲಸದ ಮೇಲೆ ನಿಮ್ಮನ್ನು ನೋಡೋದಕ್ಕೆ ಬಂದಿದ್ದೀನಿ" ಎಂದು ರಾಜಂ ತಿಳಿಸಿದ.

"ಏನದು ಅಂಥಾ ತಲೆ ಹೋಗೋ ವ್ಯವಹಾರ?"

"ಇಗೋ, ಇವನ ಹೆಸರು ಡಬ್ಲ್ಯು. ಎಸ್. ಸ್ವಾಮಿನಾಥನ್ ಅಂತ. ನಿಮ್ಮ ಸ್ಕೂಲಿನ ಸೆಕೆಂಡ್ 'ಸಿ' ನಲ್ಲಿ ಓದುತ್ತಿದ್ದಾನೆ......."

"ನಮಸ್ಕಾರ, ಬಹಳ ಸಂತೋಷ" ಎಂದರು ಹೆಡ್‌ಮೇಷ್ಟರು, ಸ್ವಾಮಿನಾಥನ ಕಡೆಗೆ ತಿರುಗಿ. ಈಗ ಗೊತ್ತಾಯಿತು ಬೋರ್ಡ್ ಹೈಸ್ಕೂಲಿನ ಗುಟ್ಟೇನು ಎಂಬುದು ಎಂದುಕೊಂಡ ರಾಜಂ.

"ನಾನು ಎಂ.ಸಿ.ಸಿ. ಕ್ಯಾಪ್ಟನ್ನು....... .."

"ಇನ್ನೂ ಸಂತೋಷ."

"ಇವನು ನನ್ನ ಟೀಮಿನಲ್ಲಿದ್ದಾನೆ. ಬಹಳ ಒಳ್ಳೆ ಬೋಲರು.............."

"ನೀನು ಒಳ್ಳೇ ಬೋಲರೋ?" ಎಂದು ಹೆಡ್‌ಮೇಷ್ಟರು ಸ್ವಾಮಿನಾಥನ ಕಡೆ ತಿರುಗಿ ಕೇಳಿದರು.

"ಬಂದ ಸಂಗತಿ ಹೇಳ್ತೀನಿ" ಎಂದ ರಾಜಂ.

"ಸದ್ಯ, ಹೇಳಪ್ಪಾ, ನನಗೆ ಬೇಕಾದ್ದೂ ಅದೇ" ಎಂದು ಹೆಡ್‌ಮೇಷ್ಟರು ನುಡಿದರು.

ರಾಜಂ ವಿವರಿಸಿದ : "ಇನ್ನೇನೂ ಇಲ್ಲ. ಈ ಸ್ವಾಮಿ ಬಹಳ ಒಳ್ಳೆಯ ಬೋಲರು. ಅವನಿಗೆ ಒಂದಷ್ಟು ಪ್ರಾಕ್ಟೀಸ್ ಬೇಕು. ಆದರೆ ನಿತ್ಯಾನೂ ನಾಲ್ಕೂವರೆ ಆದ ಮೇಲೂನೂ ಅವನು ಸ್ಕೂಲಿನಲ್ಲೇ ಇರಬೇಕಾಗಿರೋದರಿಂದ ಫೀಲ್ಡಿಗೆ ಜಾಗ್ರತೆ ಬರೋದಕ್ಕಾಗೊಲ್ಲ.........."

"ಅದಕ್ಕೆ ನಾನೇನು ಮಾಡಬೇಕೂಂತ.............?"

"ಇನ್ನೇನಿಲ್ಲ ಸಾರ್, ನಾಲ್ಕೂವರೆಗೆ ಸರಿಯಾಗಿ ಅವನ್ನ ಮನೇಗೆ ಹೋಗೋದಕ್ಕೆ ಬಿಟ್ಟುಬಿಡಬೇಕು. ಅಷ್ಟೇ."

ಹೆಡ್‌ಮೇಷ್ಟರು ಕುರ್ಚಿಯ ಬೆನ್ನಿಗೆ ಒರಗಿಕೊಂಡು ಮಾತಾಡದೆ ಕುಳಿತರು.

ರಾಜಂ ಮತ್ತೆ ಕೇಳಿದ : "ಏನು ಹೇಳ್ತೀರಿ ಸಾರ್, ಮಾಡಿಕೊಡ್ತೀರೋ ಇಲ್ಲವೋ?"

"ಈ ಸ್ಕೂಲಿಗೆ ನೀನೋ ಹೆಡ್‌ಮೇಷ್ಟರು - ನಾನೋ?"

"ನೀವೇ ಹೆಡ್‌ಮೇಷ್ಟರು. ಯಾರಿಲ್ಲಾಂತಾರೆ?" ನಮ್ಮ ಆಲ್ಬರ್ಟ್ ಮಿಷನ್ ಸ್ಕೂಲಲ್ಲಿ ನಾಲ್ಕೂವರೆ ಬೆಲ್ ಹೊಡೆದ ಮೇಲೆ ಒಂದು ನಿಮಿಷವೂ ನಿಲ್ಲಿಸಿಕೊಳ್ಳೊಲ್ಲ. ಆಟ ಆಡೋದಾದರೆ ಡ್ರಿಲ್‌ಗೆ ಕೂಡ ಮಾಫಿ ಕೊಡ್ತಾರೆ."

"ಆ ಹೊಲಸು ಸ್ಕೂಲಿನ ಹೊಗಳಿಕೆ ಕೇಳೋದಕ್ಕಲ್ಲ ನಾನಿಲ್ಲಿ ಕೂತಿರೋದು. ಹೊರಡು ಆಚೆ."

ಮಣಿ ಹೊರಗಡೆ ಕಾದಿದ್ದನಲ್ಲ; ತನ್ನ ಸ್ನೇಹಿತರು ಎಷ್ಟು ಹೊತ್ತಾದರೂ ಬಾರದುದನ್ನು ನೋಡಿ, ಏನಾಗಿ ಹೋಗಿದೆಯೋ ಅವರಿಗೆ ಎಂಬ ಫಿಕೀರಿನಿಂದ, ಹೆಡ್‌ಮೇಷ್ಟರ ರೂಮಿನೊಳಕ್ಕೆ ಬಂದ ಈ ವೇಳೆಗೆ ಸರಿಯಾಗಿ.

ಹೆಡ್‌ಮೇಷ್ಟರು ಮಣಿಯ ಕಡೆ ನೋಡಿ ಸಿಂಡರಿಸಿಕೊಂಡು, "ಯಾರು ಅವನು, ಏನು ಬೇಕು ಅವನಿಗೆ?" ಎಂದರು.

"ಏನೂ ಇಲ್ಲ" ಎಂದು ಮಣಿ ಒಂದು ಮೂಲೆಯಲ್ಲಿ ನಿಂತುಕೊಂಡ.

"........ಮಾಡೋಕೆ ಏನು ಕೆಲಸಾನೂ ಇಲ್ಲದೆ ಬೀದೀಲಿ ಹೋಗೋ ಪುಂಡುಪೋಕರಿಗಳೆಲ್ಲ ನನ್ನ ರೂಮಿನೊಳಕ್ಕೆ ಬರೋದಕ್ಕೆ ಇದೇನು ರೂಮೋ, ಸಂತೆ ಕೆಟ್ಟು ಹೋಯಿತೋ?"

"ನಾನು ಪೊಲೀಸ್ ಸೂಪರಂಟೆರ ಮಗ, ಗೊತ್ತೋ?" ಎಂದು ರಾಜಂ ಕೇಳಿದ.

"ಓಹೋ, ಹಾಗೋ! ನಿಮ್ಮ ತಂದೆ ಹತ್ತಿರ ಹೋಗಿ, ಆವತ್ತು ರೌಡಿಗಳ ಪಟಾಲಂ ಬಂದು ಕಿಟಕಿಯೆಲ್ಲ ಮುರಿದು ಹಾಕಿದರಲ್ಲ, ಅವತ್ತೇನು ಮಾಡ್ತಾ ಇದ್ದರೋ ತಿಳಿದುಕೊಂಡು ಬಾ........ಆ ಧಾಂಡಿಗ ಕೈಲಿಟ್ಟುಕೊಂಡಿದ್ದಾನಲ್ಲ-ಏನು ಅದು?"

"ನನ್ನ ಗದೆ" ಎಂದು ಮಣಿ ಉತ್ತರ ಕೊಟ್ಟ.

ರಾಜಂ ಹೇಳಿದ : "ಅದು ನನ್ನ ಗದೆ; ಅದರಿಂದ ಬೇಕೂಫರ ಬುರುಡೆ ಒಡೀತಾನೆ. ಬನ್ರೋ ಸ್ವಾಮಿ, ಮಣಿ. ಬನ್ರೋ ಹೋಗೋಣ. ಇವನ ಕೈಲಿ ಮಾತೇಕೆ-ಈ ಗೂಷ್ಠ ಕೈಲಿ!"

# ಮ್ಯಾಚಿಗೆ ಮುಂಚೆ

ಎಂ.ಸಿ.ಸಿ.ಯವರ ಸವಾಲನ್ನು ಒಪ್ಪಿ ಯಂಗ್ ಮೆನ್ಸ್ ಯೂನಿಯನ್ (ವೈ.ಎಂ.ಯು.) ದವರು ಫ್ರೆಂಡ್ಲಿ ಮ್ಯಾಚ್ ಆಡುವುದಕ್ಕೆ ಸಮ್ಮತಿಸಿದರು. ಈ ಮೈತ್ರಿಯುತ ಕಾಳಗಕ್ಕೆ ಸಿದ್ಧಮಾಡಿಕೊಳ್ಳುವುದಕ್ಕಾಗಿ ಊರಿನ ರೀಡಿಂಗ್ ರೂಮಿನ ಹಿಂದಿನ ಬಯಲಲ್ಲಿ ಭರ್ಜರಿಯಾದ ತಯಾರಿ ತೆಗೆದುಕೊಳ್ಳುತ್ತಿದ್ದರು. ಆ ಬಯಲಿನ ಮಾಲೀಕ ಬೈದರೆ, ಕುಲಂ ರಸ್ತೆಯ ನಟ್ಟ ನಡುವೆಯೇ ಅವರು ತಮ್ಮ ಆಟವನ್ನು ಮುಂದುವರಿಸುತ್ತಿದ್ದರು. ಅವರ ಪಂದ್ಯ ಹೆಸರಿನಲ್ಲಿ ಮಾತ್ರ ಮೈತ್ರಿಯುತವಾಗಿತ್ತು. ಎಂ.ಸಿ.ಸಿ.ಯವರು ಕಳಿಸಿದ ಸವಾಲು ಪತ್ರದಲ್ಲಿ ಗುಡುಗು ಸಿಡಿಲುಗಳು ಅಡಗಿದ್ದವು.

ಎಂಥೆಂಥ ಭಯಂಕರ ಷರತ್ತುಗಳು! ಮೊದಲನೆಯದಾಗಿ, ಆಟಗಾರರೆಲ್ಲರೂ ಹನ್ನೊಂದು ಗಂಟೆಗೆ ಸರಿಯಾಗಿ ಮೈದಾನದಲ್ಲಿ ಹಾಜರಾಗಿರಬೇಕು. ಎರಡನೆಯದಾಗಿ, ವೈ.ಎಂ.ಯು. ಅವರು ತಮ್ಮ ಬ್ಯಾಟುಗಳನ್ನು ತಾವೇ ಒದಗಿಸಿಕೊಳ್ಳಬೇಕು; ಎಂ.ಸಿ.ಸಿ.ಯವರು ವಿಕೆಟ್ಟುಗಳನ್ನು ಮಾತ್ರ ಕೊಡುವರು. ಮೂರನೆಯದು ಷರತ್ತಿನ ಹಾಗಿರಲಿಲ್ಲ. ಬಲವಾದ ಸೂಚನೆಯಂತಿತ್ತು. ಏನೆಂದರೆ, ವೈ.ಎಂ.ಯು ಅವರು ಒಂದೆರಡು ಚೆಂಡುಗಳನ್ನು ತಂದಿಟ್ಟುಕೊಂಡಿದ್ದರೆ ವಾಸಿ ಎಂದು. ಅದಕ್ಕೆ ಕಾರಣ ಇಷ್ಟೆ: ನಿಮ್ಮ ಆಟಗಾರರು ನಮ್ಮ ಚೆಂಡುಗಳನ್ನು ಮುಟ್ಟದೆ ನಿಮ್ಮ ಚೆಂಡುಗಳನ್ನೇ ಹೊಡೆದು ಮುರಿದು ಹಾಕಲಿ. ನಿಮಗೆ ತಿಂಡಿ ಬೇಕಾದರೆ ನೀವೇ ಒದಗಿಸಿಕೊಳ್ಳಬೇಕೆಂಬುದು ನಾಲ್ಕನೆಯ ಷರತ್ತು. ಕೊನೆಯ ಷರತ್ತು ತುಂಬ ತೊಡಕಿನಿಂದ ಕೂಡಿತ್ತು. ಅದರ ಮೇಲೆ ಬೇಕಾದಷ್ಟು ಚರ್ಚೆ ನಡೆಯಿತು. "ಬ್ಯಾಟು, ಬಾಲು, ವಿಕೆಟ್ಟು ಇವುಗಳನ್ನು ಮುರಿದರೆ, ಅಥವಾ ಮಿಕ್ಕಾವ ನಷ್ಟವಾದರೂ ಸಂಭವಿಸಿದರೆ ನೀವು ಅದಕ್ಕೆಲ್ಲ ಹಣ ತೆರಬೇಕು" ಎಂಬುದೇ ಆ ಷರತ್ತು.

ಇದರಿಂದ ವೈ.ಎಂ.ಯು. ಕ್ಯಾಪ್ಟನ್‌ಗೆ ಸ್ವಲ್ಪ ಕೋಪ ಬಂತು. ಎರಡನೆಯ ಮತ್ತು ಮೂರನೆಯ ಷರತ್ತುಗಳಿದ್ದ ಮೇಲೆ ಈ ಕೊನೆಯ ಷರತ್ತು ಅನಗತ್ಯವೆಂದು ಅವನ ಅಭಿಪ್ರಾಯ. ಅವೆರಡರ ಅನುಸಾರವಾಗಿ ತನ್ನ ಕಡೆಯವರು ಯಾವುದಾದರೂ ಚೆಂಡು ಬ್ಯಾಟುಗಳನ್ನು ಮುರಿದರೆ ನಷ್ಟವಾಗುವುದು ತಮ್ಮ ಸಾಮಾನೇ ಹೊರತು ಎಂ.ಸಿ.ಸಿ.ಯದಲ್ಲವಲ್ಲ; ಆದರೂ ಆ ಹಣ ತೆರಬೇಕು ಎಂದು ಕೇಳಲು ಅವರಿಗೇನು ಹಕ್ಕುಂಟು? ಆದರೆ ವಿಕೆಟ್ಟುಗಳು ಎಂ.ಸಿ.ಸಿ.ಯದೇ ತಾನೇ, ಎಂದು ರಾಜಂ ಉತ್ತರವಿತ್ತ. ಅಷ್ಟೇ ಅಲ್ಲ.

ವೈ.ಎಂ.ಯು. ಅವರು ಎರಡು ಮತ್ತು ಮೂರನೆಯ ಷರತ್ತುಗಳಿಗೇನಾದರೂ ತಪ್ಪಿದರೆ ಅವರಿಗೆ ಬುದ್ಧಿ ಕಲಿಸಬೇಕೋ ಬೇಡವೋ? ಇದನ್ನು ಕೇಳಿ ವೈ.ಎಂ.ಯು. ಕ್ಯಾಪ್ಟನ್ನಿನ ಕೋಪ ಮಿತಿಮೀರಿತು. "ನಿಮ್ಮ ಎಂ.ಸಿ.ಸಿ.ಯವರು ಅಷ್ಟೊಂದು ಗತಿಗೆಟ್ಟ ಪರದೇಶಿಗಳು ಎಂದು ನನಗೆ ಗೊತ್ತಿರಲಿಲ್ಲ. ನಮ್ಮ ಫೀಲ್ಡಿಗೇ ಬಂದು ಆಡಿ, ನಮ್ಮ ಸಾಮಾನೆಲ್ಲ ಹೊತ್ತುಕೊಂಡು ತಿರಗಾಡೋ ಕಷ್ಟ ತಪ್ಪೊತ್ತೆ ನಮಗೆ" ಎಂದು ಅಬ್ಬರಿಸಿದ. ಅವನು ಹೊರಟು ಹೋದ ಇಪ್ಪತ್ತು ನಿಮಿಷಗಳಿಗೆ ಸರಿಯಾಗಿ ಅವನ ಮಾತಿಗೆ ಸರಿಯಾದ ಉತ್ತರ ರಾಜಂಗೆ ಹೊಳೆಯಿತು. ಆದರೇನು ಮಾಡುವುದು? ಆ ವೈ.ಎಂ.ಯು. ಕ್ಯಾಪ್ಟನ್ ಹೊರಟುಹೋಗಿದ್ದ. "ರೀಡಿಂಗ್ ರೂಮಿನ ಹಿಂದಿನ ಮೈದಾನದ ಮಾಲೀಕ ಬೇಡವೆಂದು ಬಿಟ್ಟರೆ ಕುಲಂ ರಸ್ತೆಯ ನಟ್ಟ ನಡುವೆ ಬಂದು ನಿಮ್ಮ ಜೊತೇಲಿ ಮ್ಯಾಚ್ ಆಡೋದೇ ನಾವು?" ಈ ಉತ್ತರ ಮೊದಲೇ ಹೊಳೆಯಲಿಲ್ಲವಲ್ಲಾ ಎಂದು ಅವನು ಕೈ ಕೈ ಕಚ್ಚಿಕೊಂಡ. ಕಡೆಯ ಷರತ್ತಿನಲ್ಲಿ "ಮಿಕ್ಕಾವ ನಷ್ಟವಾದರೂ" ಎಂದಿದೆಯಲ್ಲ, ಹಾಗಂದರೇನು ಎಂದು ವೈ.ಎಂ.ಯು. ಕ್ಯಾಪ್ಟನ್ನು ಹೊರಡುವ ಮುಂಚೆ ಕೇಳಿದ. ರಾಜಂ ಉತ್ತರವಿಲ್ಲದೆ ಒಂದು ಕ್ಷಣ ಸುತ್ತಮುತ್ತ ನೋಡಿ ಎಂ.ಸಿ.ಸಿ. ಮೈದಾನದ ಪಕ್ಕದಲ್ಲಿದ್ದ ಮನೆಯೊಂದರ ಹೆಂಚುಗಳನ್ನೂ ಕಿಟಕಿಯ ಗಾಜುಗಳನ್ನೂ ತೋರಿಸಿದ.

ಎರಡು ವಾರಗಳ ಆಚಿನ ಭಾನುವಾರದ ದಿನ ಮ್ಯಾಚು ನಡೆಯತಕ್ಕುದೆಂದು ತೀರ್ಮಾನ ಮಾಡಲಾಯಿತು.

ರಾಜಂಗೆ ಮನಶ್ಶಾಂತಿಯೇ ಇರಲಿಲ್ಲ. ತಮ್ಮ ಟೀಮಿನವರು ವೈ.ಎಂ.ಯು.ವನ್ನು ತದಕಿ ಹಾಕಿಬಿಡಬಹುದೆಂಬ ಭರವಸೆಯಿತ್ತು ಅವನಿಗೆ. ತಾನೇನೂ ಸಾಮಾನ್ಯನಲ್ಲ. ಮಣಿ, ತುಂಬಾ ರನ್ನು ಮಾಡದೇ ಹೋದರೂ ಸುಲಭವಾಗಿ ಔಟ್ ಆಗುವವನಲ್ಲ. ಯಾವ ಚೆಂಡು ಬರಲಿ, ಕೊನೆಗೆ ತಡೆದಾದರೂ ತಡೆಯುತ್ತಾನೆ. ಅದರಲ್ಲಿ ಸಂದೇಹವಿಲ್ಲ. ಅವನ ಬ್ಯಾಟಿಂಗು ಸಹ ಅಂಥ ತರಲೆಯಲ್ಲ. ಅವನ ಸ್ಟೈಲೇ ಸ್ಟೈಲು. ವಿಕೆಟ್ ಹತ್ತಿರ ಬರಬಹುದು ಎಂದು ಕಾಣುವ ಯಾವ ಚೆಂಡನ್ನೇ ಆಗಲಿ ತಡೆಯುತ್ತಾನೆ. ಎಂಥ ಬೋಲರೇ ಆಗಲಿ ಸುಸ್ತಾಗಿ ಸೋತುಬಿಡಬೇಕು. ಮಿಕ್ಕ ಆಟಗಾರರ ವಿಷಯವಾಗಿ ಯೋಚನೆಯೇ ಬೇಕಾಗಿರಲಿಲ್ಲ. ಆದರೆ ಒಬ್ಬ ಆಟಗಾರ ಇದ್ದ, ಅವರ ಟೀಮಿನಲ್ಲಿ. ಹೀಗೆ ಅಂತ ಹೇಳುವ ಹಾಗಿಲ್ಲ. ಅವನ ಮೇಲೆ ಬಹಳ ದೊಡ್ಡ ಜವಾಬ್ದಾರಿ ಬಿದ್ದಿತ್ತು. ಅವನೇ ತಮ್ಮ ಟೀಮಿನ ಟೇಟ್. ಎದುರು ಕಡೆಯ ಹನ್ನೊಂದು ಜನರನ್ನೂ ಔಟ್ ಮಾಡುವ ಗುರುತರ ಜವಾಬ್ದಾರಿ ಅವನದು. ರಾಜಂಗೆ ಹಗಲೂ ಇರುಳೂ ಅವನ ಚಿಂತೆಯೇ. ಮ್ಯಾಚಿಗೆ ಕೇವಲ ಹದಿನೈದು ದಿನ ಇದೆ. ಆದರೂ ಸ್ವಾಮಿ ಪ್ರಾಕ್ಟೀಸಿಗೆ ಲಕ್ಷ್ಯವನ್ನೇ ಕೊಟ್ಟಂತೆ ಕಾಣಲಿಲ್ಲ. ಭೂಮಿಯನ್ನು ಕತ್ತಲು ಸಂಪೂರ್ಣವಾಗಿ ಆವರಿಸುವ ವರೆಗೂ ಫೀಲ್ಡಿಗ ಬಾರದ ತನ್ನ ಹಿಂದಿನ ಪದ್ಧತಿಯನ್ನು ಅವನು ಬಿಟ್ಟಿರಲಿಲ್ಲ. "ಸ್ವಾಮಿ, ಸ್ವಾಮಿ, ದಿನಾಲೂ ಒಂದು ಗಂಟೆಯಾದರೂ ಪ್ರಾಕ್ಟೀಸು ಮಾಡಿಕೊಳ್ಳೋ"

ಎಂದು ರಾಜಂ ಅವನನ್ನು ಬೇತುಕೊಂಡ.

"ಅದಕ್ಕೇನೋ, ಆದರೆ ಡ್ರಿಲ್ ಕ್ಲಾಸ್ ಇರೊತ್ತಲ್ಲೊ.........."

"ನಿಮ್ಮ ಹೆಡ್‌ಮೇಷ್ಟರಿಗೆ ಹೇಳಿ ನೋಡೋ.........."

"ಬಹಳ ಒಳ್ಳೇ ಮಾತು ಹೇಳಿದೆ, ಸಾಕು. ನಾವು ಆವತ್ತು ಹೋಗಿದ್ದೆವಲ್ಲ ಅವನ ಹತ್ತಿರ, ಇನ್ನೂ ಮರೆತಿಲ್ಲ ಅವನು. ಆ ಶನಿಯ ವಿಷಯ ಈಗೇಕೆ!"

"ನೀನೇನಾದರೂ ಮಾಡಿಕೋ. ನೀನು ಮಾತ್ರ ಒಳ್ಳೆಯ ಪ್ರಾಕ್ಟೀಸು ತೊಗೊಂಡರೆ ಸರಿ. ಮಿಕ್ಕದ್ದೇನಾದರೆ ನನಗೇನು? ಎದುರು ಕಡೆಯವರಲ್ಲಿ ಒಬ್ಬೊಬ್ಬರನ್ನೂ ಐದೈದು ನಿಮಿಷದೊಳಗೆ ನೀನು ಔಟ್ ಮಾಡದ ಹೋದರೆ ನಿನ್ನ ಮುಖವನ್ನೇ ನೋಡಲ್ಲ ನಾನು. ಸ್ಕೋರೆಷ್ಟಾದರೂ ಆಗಲಿ, ಅವರ ಕಡೆಯವರದು. ಅದನ್ನ ನಾನೂ ಮಣಿಯೂ ನೋಡಿಕೊಳ್ತೀವಿ........"

## ಎರಡು

ಮ್ಯಾಚಿಗೆ ಇನ್ನೊಂದೇ ವಾರ ಉಳಿದಿತ್ತು. ಸಾಯಂಕಾಲಗಳು ಎಂದಿಗಿಂತ ಅಮೂಲ್ಯವೆಂದು ಸ್ವಾಮಿನಾಥನಿಗೆ ಮಂದಟ್ಟಾಯಿತು. ಸಾಯಂಕಾಲದ ಕೊನೆಯ ಬೆಲ್ಲು ಹೊಡೆದ ತಕ್ಷಣವೇ ಎಲ್ಲರೂ ಡ್ರಿಲ್ ಮೈದಾನದಲ್ಲಿ ಸಾಲಾಗಿ ಹೋಗಿ ನಿಂತುಕೊಂಡರು. ಸ್ವಾಮಿಯೂ ನಿಂತುಕೊಂಡ. ಆದರೆ ಎಲ್ಲರಂತೆ ಅವನು ಕೋಟು ಟೋಪಿಗಳನ್ನು ಬಿಚ್ಚಲಿಲ್ಲ. ಅವರ ಡ್ರಿಲ್ ಮೇಷ್ಟರು ಎದೆಯನ್ನು ಡುಬ್ಬಿಕೊಂಡು, ಫೊಟೋ ತೆಗೆಸಿಕೊಳ್ಳಲು ಕ್ಯಾಮೆರಾ ಮುಂದೆ ನಿಂತವರಂತೆ ಸೆಟೆದು ನಿಂತಿದ್ದರು. ಚಚ್ಚೌಕಾದ ಮೈಯಿ. ಭಾರಿ ಮೀಸೆ. ಅದರ ಕೊನೆಯನ್ನು ಚೂಪಾಗಿ ತಿರುವಿಕೊಂಡಿದ್ದಾರೆ. ತಲೆಯ ಸುತ್ತ ಮಿಲಿಟರಿ ರೀತಿಯಲ್ಲಿ ಕಟ್ಟಿದಂಥ ರೇಷ್ಮೆ ಪೇಟ. ಹುಡುಗರ ಸಾಲನ್ನು ಆತ ಓರೆಗಣ್ಣಿನಿಂದ ಒಂದು ಸಲ ನೋಡಿದರು. ಆ ನೋಟದಲ್ಲಿ ತಿರಸ್ಕಾರ ತುಂಬಿತ್ತು. ಮಾನೀಟರ್ ಬಂದು ಮಣುಕು ಹಿಡಿದ ರಿಜಿಸ್ಟರ್ ತೆಗೆದು ಎಲ್ಲರ ಅಟೆಂಡೆನ್ಸ್ ತೆಗೆದುಕೊಳ್ಳಲು ಆರಂಭಿಸಿದ. ಎಷ್ಟು ಹೊತ್ತಾದರೂ ಮುಗಿಯುವಂತೆಯೇ ಕಾಣಲಿಲ್ಲ. ಕೊನೆಗೂ ಮುಗಿಯಿತು. ಡ್ರಿಲ್ ಮೇಷ್ಟರು ತಮ್ಮ ಸ್ಥಳ ಬಿಟ್ಟು, ಹುಡುಗರ ಸಾಲಿನ ಸಮೀಪಕ್ಕೆ ಬಂದು, ಪ್ರತಿಯೊಬ್ಬನನ್ನೂ ತೀಕ್ಷ್ಣವಾಗಿ ಪರೀಕ್ಷೆ ಮಾಡುತ್ತಾ ಒಂದು ಕಡೆಯಿಂದ ಇನ್ನೊಂದು ಕಡೆಯವರೆಗೂ ಹೋದರು. ಸ್ವಾಮಿನಾಥ ಕುಳ್ಳ; ಆದ್ದರಿಂದ ಅವನು ಸಾಲಿನ ಇನ್ನೊಂದು ತುದಿಯಲ್ಲಿದ್ದ. ಡ್ರಿಲ್ ಮೇಷ್ಟರು ಅವನ ಮುಂದೆ ನಿಂತು ಮೇಲಿನಿಂದ ಕೆಳಗಿನವರೆಗೆ ನೋಡಿ, "ನಿನಗೆ ಲೀವ್ ಸಿಕ್ಕೊಲ್ಲ. ತೆಗೀ ನಿನ್ನ ಕೋಟು ಟೋಪೀನ" ಎಂದು ಹೇಳಿ ಮುಂದಕ್ಕೆ ಹೊರಟರು. ಆದರೆ ಸ್ವಾಮಿನಾಥ ಬಿಡಬೇಕಲ್ಲ! ಆದದ್ದಾಗಲಿ ಎಂದು ಅವರ ಬೆನ್ನು ಹತ್ತಿ "ಸಾರ್, ನನಗೆ ತುಂಬ ಖಾಯಿಲೆ

ಆಗಿಹೋಗಿದೆ ಸಾರ್, ಈವತ್ತು ರಜ ಕೊಡಿ ಸಾರ್. ಡ್ರಿಲ್ ಮಾಡಿದರೆ ಸತ್ತುಹೋಗ್ತೀನಿ ಸಾರ್......." ಎಂದು ಹೇಳತೊಡಗಿದ. ಮುಂದೆ ಡ್ರಿಲ್ ಮೇಷ್ಟರು, ಹಿಂದೆ ಇವನು.

ಕೊನೆಯ ಹುಡುಗರವರೆಗೆ ಬಂದರು ಡ್ರಿಲ್ ಮೇಷ್ಟರು. ಆದರೂ ಸ್ವಾಮಿನಾಥ ಅವರ ಹಿಂದೆಯೇ ಇದ್ದ. ಇದನ್ನು ನೋಡಿ ಅವರು ಹಿಂದಕ್ಕೆ ತಿರುಗಿ, "ಏನೋ ನಿನಗೆ ಕೇಡು?" ಎಂದರು.

"ಸಾರ್, ನನ್ನ ಕಷ್ಟ ನಿಮಗೆ ತಿಳಿಯೊಲ್ಲ, ಸಾರ್. ನನ್ನ ಖಾಯಿಲೆ ಏನು ಅಂತ ಕೂಡ ನೀವು ಕೇಳೊಲ್ಲವಲ್ಲ, ಸಾರ್!"

"ಊ, ನಿನಗೇನು ಖಾಯಿಲೆ ಬಂದಿದೆ?"

ತಲೆನೋವು ಎಂದು ಹೇಳೋಣವೇ ಎನಿಸಿತು ಸ್ವಾಮಿಗೆ. ಆದರೆ ಡ್ರಿಲ್ ಮೇಷ್ಟರ ರೀತಿಯನ್ನು ನೋಡಿದರೆ ಎಂಥ ಭಾರಿ ತಲೆನೋವು ಬಂದರೂ ಬಿಡುವ ಹಾಗೆ ಕಾಣಲಿಲ್ಲ. ಇದ್ದಕ್ಕಿದ್ದಂತೆ ಅವನಿಗೆ ಸ್ಫೂರ್ತಿ ಬಂತು. "ನಿನ್ನೆ ರಾತ್ರಿಯೆಲ್ಲ ನನಗೆ ಸನ್ನಿ ಬಂದಿತ್ತು, ಸಾರ್" ಎಂದು ಹೇಳಿದ. ಈ ಸಮಾಚಾರವನ್ನು ಕೇಳಿ ಡ್ರಿಲ್ ಮೇಷ್ಟರಿಗೆ ದಂಗು ಬಡಿದಹಾಗಾಯಿತು. "ಏನು! ನಿನಗೆ ಸನ್ನಿ ಬಂದಿತ್ತೆ? ಏನೋ, ಹುಚ್ಚನ ಹಾಗೆ ಮಾತಾಡ್ತೀಯಲ್ಲೋ" ಎಂದರು.

"ಇಲ್ಲ, ಸಾರ್. ಒಂದು ಚೂರೂ ನಿದ್ದೆ ಬರಲಿಲ್ಲ ಸಾರ್, ನಿನ್ನೆ ರಾತ್ರಿ. ಸನ್ನಿ ಬಂದಿತ್ತು ನನಗೆ. ನಮ್ಮ ಡಾಕ್ಟರ್ ಹೇಳಿದರು : ಇನ್ನೊಂದು ವಾರ ಡ್ರಿಲ್ ಮಾಡಬೇಡ, ಮಾಡಿದರೆ ಸತ್ತು ಹೋಗ್ತೀಯ, ಎಂದರು ಅವರು."

"ತೊಲಗಿ ಹೋಗೋ, ಕತ್ತೆ. ನಿನ್ನ ಮಾತೊಂದನ್ನೂ ನಂಬೊಲ್ಲ ನಾನು. ಆದರೂ ಜಿಗಣೆ ಹಿಡಿದ ಹಾಗೆ ಹಿಡಿದುಬಿಟ್ಟಿದ್ದೀಯ ನೀನು, ನಡಿ. ಹಾಳಾಗಿ ಹೋಗು."

ಡ್ರಿಲ್ ಮೈದಾನವನ್ನು ಬಿಟ್ಟು ಹೊರಟಂದಿನಿಂದ ಕ್ರಿಕೆಟ್ ಮೈದಾನವನ್ನು ತಲಪುವವರೆಗಿನ ಅರ್ಧಗಂಟೆ ಕಾಲ, ಸ್ವಾಮಿಯದೇನು ಅಬ್ಬರ, ಏನು ಅವಸರ! ಇಷ್ಟು ಬೇಗ ಆಟಕ್ಕೆ ಬಂದುದನ್ನು ಕಂಡು ಎಲ್ಲರಿಗೂ ಸಂತೋಷವಾಯಿತು, ರಾಜಂ ಕುಣಿಯತೊಡಗಿದ.

ಒಟ್ಟಿನ ಮೇಲೆ ಎಲ್ಲವೂ ಸಮರ್ಪಕವಾಗಿತ್ತು. ಆದರೆ ಡ್ರಿಲ್ ಮೇಷ್ಟರು ಎಲ್ಲಾದರೂ ನೋಡಿಬಿಟ್ಟಾರೇನೋ ಎಂಬ ಭಯ ಆ ಸಾಯಂಕಾಲವೆಲ್ಲ ಅವನನ್ನು ಬಾಧಿಸುತ್ತಿತ್ತು. ಆದ್ದರಿಂದ ಸಾಯಂಕಾಲ ಆಟ ಮುಗಿದ ಮೇಲೂ, ಪೂರ್ತಿ ಕತ್ತಲಾಗುವವರೆಗೂ ರಾಜಂ ಮನೆಯಲ್ಲೇ ಕಾದಿದ್ದು ಆಮೇಲೆ ಮನೆಗೆ ಹೊರಟ. ಪೇಟೆಬೀದಿಯಲ್ಲಿ ಹೋದಾಗ ಅಂಗಡಿಗಳ ಬೆಳಕಿನಲ್ಲಿ ಕಾಣಿಸಿಕೊಳ್ಳದೆ ಹುಷಾರಾಗಿ ನೆರಳಿನಲ್ಲೇ ನುಸಿದುಕೊಂಡು ಮನೆ ಸೇರಿದ.

ಮಾರನೆಯ ದಿನ ಬೆಳಿಗ್ಗೆ ತನ್ನ ಗ್ರಾಮರ್ ಪುಸ್ತಕ ತೆರೆದಿಟ್ಟುಕೊಂಡು ತನ್ನ ಡೆಸ್ಕ್ ಮುಂದೆ ಕೂತಿದ್ದ. ವಾರವೆಲ್ಲ ಡ್ರಿಲ್ ಕ್ಲಾಸಿನಿಂದ ಮನ್ನಾ ಪಡೆಯುವುದಕ್ಕೆ ಏನು ಉಪಾಯ ಮಾಡೋಣ ಎಂದು ಯೋಚಿಸುತ್ತಿದ್ದ. ಬೆಳಿಗ್ಗೆ ಏಳೂವರೆಯಾಗಿತ್ತು. ಸ್ಕೂಲಿಗೆ ಹೊರಡಲು

ಇನ್ನೂ ಎರಡೂವರೆ ಗಂಟೆಗಳ ಕಾಲ ಹೊತ್ತಿತ್ತು.

ಮನೆಯಲ್ಲಿ ಎಲ್ಲರೂ ಏನು ಮಾಡುತ್ತಿದ್ದಾರೆಂದು ಸ್ವಲ್ಪ ತಂಗಿ ನೋಡಿದ. ಅಮ್ಮ ಮಗುವಿನ ರೂಮಿನಲ್ಲಿದ್ದಳು. ತಾಳ ಹಾಕಿದಂತೆ ಮಗುವಿನ ತೊಟ್ಟಿಲು ಡಕ್ ಡಕ್ ಎಂದು ಸದ್ದು ಮಾಡುತ್ತಿತ್ತು. ಅಪ್ಪನ ಗಂಟಲು ಮುಂದಿನ ಕೋಣೆಯಲ್ಲಿ ಕೇಳಿಸಿತು. ಕಕ್ಷಿಗಾರರ ಕೈಯಲ್ಲಿ ಮಾತನಾಡುತ್ತಿದ್ದರು. ಇದೇ ಸಮಯ ಎಂದು, ಸ್ವಾಮಿ ಸದ್ದಿಲ್ಲದೆ ಹೊರಬಿದ್ದ.

ಪೇಟೆಬೀದಿಯಲ್ಲಿ ಒಂದು ಮಳಿಗೆಯ ಮುಂದೆ 'ಡಾಕ್ಟರ್ ಟಿ. ಕೇಶವನ್ ಎಲ್.ಎಂ. ಎಂಡ್ ಎಸ್., ಶ್ರೀ ಕೃಷ್ಣ ಡಿಸ್ಪೆನ್ಸರಿ' ಎಂದು ಬೋರ್ಡು ಹಾಕಿತ್ತು. ಸ್ವಾಮಿ ಅದರ ಮುಂದೆ ನಿಂತ. ಒಂದು ಉದ್ದನೆಯ ಮೇಜಿನ ಮುಂದೆ ಕುಳಿತು ಡಾಕ್ಟರು ರಸ್ತೆಯ ಕಡೆಯೇ ನೋಡುತ್ತಿದ್ದರು. ಬೇರೆ ಯಾರೂ ಇರಲಿಲ್ಲ. ಆದುದರಿಂದ ಸ್ವಾಮಿ ಧೈರ್ಯ ಮಾಡಿ, ಮೆಟ್ಟಿಲು ಹತ್ತಿ ಡಾಕ್ಟರ ಹತ್ತಿರ ಹೋದ.

"ಏನೋ ಸ್ವಾಮಿ, ಏನು ಸಮಾಚಾರ?"

"ಏನೂ ಇಲ್ಲ ಸಾರ್, ಸ್ವಲ್ಪ ಕೆಲಸ ಇತ್ತು."

"ಮನೇಲಿ ಎಲ್ಲರೂ ಕ್ಷೇಮ ತಾನೇ?"

"ಎಲ್ಲರೂ ಆರೋಗ್ಯವಾಗಿದ್ದಾರೆ.............ಡಾಕ್ಟರೇ, ನನಗೆ ಕೂಡಲೆ ಒಂದು ಡಾಕ್ಟರ್ ಸರ್ಟಿಫಿಕೇಟ್ ಬೇಕು.........."

"ಯಾಕೋ? ಏನಾಗಿದೆಯೋ?"

"ನಿಜ ಹೇಳಿಬಿಡ್ತೀನಿ, ಡಾಕ್ಟರ್. ಮುಂದಿನ ವಾರ ಯಂಗ್ ಮೆನ್ಸ್ ಯೂನಿಯನ್ ಮೇಲೆ ನಾವೊಂದು ಮ್ಯಾಚ್ ಆಡಬೇಕು. ನನಗೆ ಸ್ವಲ್ಪ ಪ್ರಾಕ್ಟೀಸು ಬೇಕು. ಆದರೆ ನಮ್ಮ ಸ್ಕೂಲಿನಲ್ಲಿ ಪ್ರತಿ ನಿತ್ಯಾನೂ ಸಾಯಂಕಾಲ ನಾಲ್ಕೂವರೆ ಆದಮೇಲೂನೂ ಡ್ರಿಲ್ ಕ್ಲಾಸು, ಸ್ಕೌಟ್ ಕ್ಲಾಸು, ಹಾಳು ಮೂಳು, ಹೀಗೆ ಏನೇನೋ ಇರೊತ್ತೆ. ನಾಲ್ಕೂವರೆ ಆದ ಕೂಡಲೆ ನನ್ನನ್ನು ಬಿಟ್ಬಿ ಬಿಡಬೇಕು ಅಂತ ನೀವೊಂದು ಸರ್ಟಿಫಿಕೇಟ್ ಕೊಟ್ಟರೆ ನಮ್ಮ ಎಂ.ಸಿ.ಸಿ.ಯವರು ಗೆಲ್ತೀವಿ ನೋಡಿ, ಡಾಕ್ಟರ್.........."

"ಅದು ಹಾಗಿರಲಿ, ನಿನಗೇನಾದರೂ ಜ್ವರಗಿರ ಬಂದಿತ್ತೇನು, ನಿನ್ನೆ ಮೊನ್ನೇಲಿ?"

ಸ್ವಾಮಿನಾಥ ಎರಡು ಸೆಕೆಂಡ್ ಆಲೋಚಿಸಿ, "ಹೌದು ಡಾಕ್ಟರ್, ಈಚೀಚೆಗೆ ನನಗೇಕೊ ಸ್ವಲ್ಪ ಸನ್ನಿ ಮುಚ್ಚಿಕೊಂಡಿದೆ" ಎಂದ.

ಡಾಕ್ಟರ್‌ಗೆ ತುಂಬ ಚಿಂತೆಯಾಯಿತು. "ಏನೆಂದೆ?" ಎಂದು ಕೇಳಿದರು.

ಡಾಕ್ಟರರ ಮನಸ್ಸಿನ ಮೇಲೆ ತನ್ನ ಮಾತಿನಿಂದ ಎಂತಹ ಪರಿಣಾಮವಾಯಿತೆಂದು ಕಂಡು ಸ್ವಾಮಿಗೆ ತುಂಬ ಸಂತೋಷವಾಯಿತು. ಬಹಳ ಭಯಂಕರವಾದ ಸನ್ನಿ ಬರುತ್ತಾ ಇದೆಯೆಂದು ಮತ್ತೊಂದು ಸಲ ಹೇಳಿದ.

"ಏನೆಂದೆ! ಸನ್ನಿಯೇ? ಸನ್ನಿ ಎಂದರೆ ಏನು, ಹೇಳು?"

ಈ ರೀತಿಯ ಪಾಟೀಸವಾಲಿಗೆ ಇದು ಸರಿಯಾದ ಸಮಯವಲ್ಲವೆಂದು ಸ್ವಾಮಿಗೆ ಎನ್ನಿಸಿತು. ಆದರೆ ಡಾಕ್ಟರರ ಅನುಗ್ರಹ ಬೇಕಾಗಿತ್ತು ಅವನಿಗೆ. ಅದಿಲ್ಲದೆ ಕೆಲಸವೇ

ಕೈಗೂಡುವಂತಿರಲಿಲ್ಲ. "ಅದೇನೂ ಅಂತ ಸರಿಯಾಗಿ ಹೇಳಲಾರೆ. ಅಂತೂ ಬಂದಿದೆ. ಅದೊಂದು ಥರಾ ಹೊಟ್ಟೆನೋವಲ್ಲವೆ, ಡಾಕ್ಟರ್?" ಎಂದು ಕೇಳಿದ.

ಡಾಕ್ಟರ್ ಗಟ್ಟಿಯಾಗಿ ನಗಲಾರಂಭಿಸಿದರು. ನಕ್ಕು ನಕ್ಕು ಬಲವಾದ ಕೆಮ್ಮು ಬಂದು ಉಸಿರು ಸಿಕ್ಕಿಕೊಂಡು ಸುಮ್ಮನಾಗಬೇಕಾಯಿತು. ಅದಾದ ಮೇಲೆ ಅವರು ಸ್ವಾಮಿಯನ್ನು ಹತ್ತಿರ ಕರೆದು, ಅವನ ಕಣ್ಣಿನ ಕೆಳರೆಪ್ಪೆಯನ್ನು ಎಳೆದು ನೋಡಿ, ಅವನ ನಾಲಗೆಯನ್ನು ತೆಗೆಸಿ ನೋಡಿ, ಅವನ ಎದೆಯನ್ನು ಬೆರಳಿಂದ ತಟ್ಟಿ "ಗುಂಡುಕಲ್ಲಿದ್ದ ಹಾಗಿದ್ದೀಯಣ್ಣ, ನಿನ್ನ ಸನ್ನಿ ವಾಸಿಯಾಗಬೇಕಾದರೆ ಚೆನ್ನಾಗಿ ಡ್ರಿಲ್ ಮಾಡಬೇಕು. ಗೊತ್ತಾಯ್ತೇ?" ಎಂದರು. ಸಾಯಂಕಾಲದ ಹೊತ್ತು ಡ್ರಿಲ್ ಕ್ಲಾಸಿಗೆ ಹೋಗದಿರುವುದು ಎಷ್ಟೊಂದು ಮುಖ್ಯವೆಂದು ಸ್ವಾಮಿ ಮತ್ತೆ ಡಾಕ್ಟರಿಗೆ ವಿವರಿಸಿದ. ಡಾಕ್ಟರು, "ಅದೆಲ್ಲ ಸರಿಯಣ್ಣ, ನಿನಗೆ ಅಂಥ ಸರ್ಟಿಫಿಕೇಟ್ ಕೊಟ್ಟೇ ಅಂದರೆ ನನ್ನ ಮೇಲೆ ಕೇಸ್ ಹಾಕಿಬಿಡ್ತಾರೆ, ಗೊತ್ತೋ?" ಎಂದುಬಿಟ್ಟರು.

"ನೀವು ಬರಕೊಟ್ಟಿದ್ದು ಸುಳ್ಳು ಅಂತ ಯಾರು ಬಂದು ಕಂಡು ಹಿಡೀತಾರೆ, ಡಾಕ್ಟರೇ? ನಮ್ಮ ಎಂ.ಸಿ.ಸಿ. ಗೆಲ್ಲಕೂಡದು ಎಂದು ನಿಮಗೆ ಇಷ್ಟವೇನೋ?"

"ನಿಮಗೆ ಜಯವಾಗಲಿ. ಆದರೆ ನಾನು ಸರ್ಟಿಫಿಕೇಟ್ ಮಾತ್ರ ಕೊಡಲಾರೆ. ಹೋಗಲಿ, ಇನ್ನೊಂದು ಮಾಡ್ತೀನಿ. ನಿಮ್ಮ ಹೆಡ್‌ಮೇಷ್ಟರನ್ನು ಕಂಡು ನಿನ್ನನ್ನು ನಾಲ್ಕೂವರೆ ಆದ ಕೂಡಲೆ ಬಿಟ್ಟುಬಿಡಿ, ಅಂತ ಹೇಳ್ತೀನಿ."

"ಅಷ್ಟಾದರೆ ಸಾಕು, ಡಾಕ್ಟರ್. ನೀವು ತುಂಬ ಒಳ್ಳೇವರು."

* * *

ಆ ದಿನ ಸಾಯಂಕಾಲ ನಾಲ್ಕೂವರೆ ಆದೊಡನೆ ಸ್ಕೌಟ್ ಕ್ಲಾಸಿನ ವಿಷಯ ತಲೆಗೇ ಹಚ್ಚಿಕೊಳ್ಳದೆ, ಅಂಗಳದ ಕಡೆ ತಿರುಗಿ ಕೂಡ ನೋಡದೆ, ಸ್ವಾಮಿ ನೆಟ್ಟಗೆ ಮನೆಗೆ ಹೋದ. ಅಲ್ಲಿಂದ ಕ್ರಿಕೆಟ್ ಫೀಲ್ಡಿಗೆ ಓಡಿದ. ಮಾರನೆಯ ದಿನ ಡ್ರಿಲ್ ಕ್ಲಾಸಿತ್ತು. ಅದರ ವಿಷಯ ಕೂಡ ಅವನು ಯೋಚನೆ ಮಾಡಲಿಲ್ಲ. ಬೇಕಾದಷ್ಟು ತಯಾರಿ ಸಿಕ್ಕುತ್ತಾ ಇತ್ತು ಅವನಿಗೆ. "ಸ್ವಾಮಿ, ಅದ್ಭುತವಾಗಿ ಬೋಲ್ ಮಾಡ್ತಾ ಇದ್ದೀಯ ಕಾಣೋ! ಸ್ವಲ್ಪ ಪ್ರಾಕ್ಟೀಸ್ ಬೇಕಾಗಿತ್ತು ನಿನಗೆ, ಅಷ್ಟೇ. ಈಗ ಅದೂ ಸಿಕ್ಕಿತು. ಅದು ಸರಿ. ಸಾಯಂಕಾಲ ಡ್ರಿಲ್ ಕ್ಲಾಸ್ ವಿಷಯ ಏನು ಮಾಡಿದೆಯೋ?" ಎಂದು ರಾಜಂ ಕೇಳಿದ.

"ಸ್ವಲ್ಪ ಮಿದುಳು ಖರ್ಚುಮಾಡಿ ಒಂದು ಕಮಾಲ್ ಮಾಡಿದೆ ನೋಡು. ಎಲ್ಲಾ ಸರಿಹೋಯ್ತು. ನಮ್ಮ ಡಾಕ್ಟರು, ಹೆಡ್ ಮೇಷ್ಟರನ್ನು ನೋಡಿ, ಸ್ವಾಮೀನ ನಾಲ್ಕೂವರೆಗೆ ಬಿಟ್ಟುಬಿಡಿ, ಡ್ರಿಲ್‌ಗಿಲ್ ಮಾಡಿದರೆ ಅವನಿಗೆ ಸಖತ್ ಖಾಯಿಲೆ ಬಂದುಬಿಟ್ಟು ಬದುಕೋದೇ ಕಷ್ಟವಾಗುತ್ತೆ, ಎಂದು ಹೇಳೋ ಹಾಗೆ ಮಾಡಿದ್ದೀನಿ. ಏನಂತೀಯ?"

ಮಣಿ ಸ್ವಾಮಿಯ ಪಕ್ಕೆಯನ್ನು ತಿವಿದು, "ಲೋ ಕೊರಮ, ನಿನ್ನಂಥ ಉಪಾಯಗಾರನ್ನ ನಾನು ನೋಡಿಯೇ ಇಲ್ಲ, ಕಾಣೋ" ಎಂದ. ರಾಜಂ ಕೂಡ ಹಾಗೇ ಅಂದ.

ಇದ್ದಕ್ಕಿದ್ದಂತೆ ರಾಜಂಗೆ ಒಂದು ಶಂಕೆಯುಂಟಾಯಿತು. "ನಾವು ಮ್ಯಾಚ್ ಗೆಲ್ತೀವೋ ಇಲ್ಲವೋ ಕಾಣೆ.......ನಾವು ಸೋತುಗೀತು ಹೋದರೆ ನಾನು ನೇಣುಹಾಕಿಕೊಂಡು ಬಿಡ್ತೀನಿ" ಎಂದ.

ಮಣಿಗೆ ರೇಗಿತು. "ಲೋ ರಾಜಂ, ಏನೋ, ನೀನು ಯಾವಾಗಲೂ ಹೆಣ್ಣಾಪುಸಕಲಿ ಕಳ್ಳೆಕಾಯಿ ಹಾಗೆ, ಸೋತು ಹೋಗ್ತೀವಿ, ಸೋತುಹೋಗ್ತೀವಿ ಅಂತ ಅಳ್ತೀಯ! ಆ ವೈ.ಎಂ.ಯು. ಕಮಂಗಿಗಳು ನಮ್ಮ ಹೊಡೆತ ತಡೀಬಲ್ಲರೇನೋ?" ಎಂದ.

"ನಾವು ಗೆದ್ದುಬಿಟ್ಟರೆ ಪೇಪರ್‌ಗಳಿಗೆಲ್ಲ ಬರೆದು ಕಳಿಸ್ತೀನಿ" ಎಂದು ರಾಜಂ ಹೇಳಿದ.

"ನಮ್ಮ ಫೊಟೋಗಳನ್ನೂ ಪ್ರಿಂಟ್ ಮಾಡ್ತಾರೇನೋ?" ಎಂದು ಟೇಟ್ ಕೇಳಿದ.

"ಮತ್ತೇ! ಮಾಡದೇ ಇರ್‍ತಾರಾ?"

## ಮೂರು

ಶುಕ್ರವಾರ. ಹೆಡ್‌ಮೇಷ್ಟರು ಬೆತ್ತವನ್ನು ಝಳಪಿಸಿಕೊಂಡು ಕ್ಲಾಸಿಗೆ ಬಂದಾಗ ಭೂಗೋಳದ ಪಾಠ ನಡೆಯುತ್ತಿತ್ತು. ಭೂಗೋಳದ ಮೇಷ್ಟರಾದ ರಾಮರಾಯರು, ಹೆಡ್‌ಮೇಷ್ಟರು ಬಂದೊಡನೆ ಭಕ್ತಿಯಿಂದ ಎದ್ದು ನಿಂತರು. ತಮ್ಮ ಮುದಿಮುಖದ ಪೂರ್ಣ ದರ್ಶನಭಾಗ್ಯ ಕ್ಲಾಸಿನವರಿಗೆಲ್ಲ ದೊರೆಯುವಂತೆ ಹೆಡ್‌ಮೇಷ್ಟರು ಹುಡುಗರ ಕಡೆ ತಿರುಗಿದರು. ಅವರ ಗುಡ್ಡೆಗಣ್ಣುಗಳು ಸ್ವಾಮಿನಾಥನ ಕಡೆಯೇ ದಿಟ್ಟಿಸಿ ನೋಡಿದವು.

"ಎದ್ದು ನಿಲ್ಲು."

ಸ್ವಾಮಿನಾಥ ಎದ್ದು ನಿಂತ.

"ಬಾ, ಇತ್ತಕಡೆ."

ಸ್ವಾಮಿನಾಥ ಬಹಳ ವಿಧೇಯತೆಯಿಂದ ಇತ್ತ ಕಡೆ ಬಂದ.

"ನಿನ್ನ ನಾಚಿಕೆಗೆಟ್ಟ ಮುಖವನ್ನ ಕ್ಲಾಸಿನವರಿಗೆಲ್ಲ ತೋರಿಸು."

ಸ್ವಾಮಿನಾಥ ತನ್ನ ನಾಚಿಕೆಗೆಟ್ಟ ಮುಖವನ್ನು ಮುಚ್ಚಿಕೊಳ್ಳ ಯತ್ನಿಸಿದ. ಆದರೆ ಹೆಡ್‌ಮೇಷ್ಟರು ತಮ್ಮ ಎಡಗೈಯಿಂದ ಸ್ವಾಮಿನಾಥನ ಕುತ್ತಿಗೆಯನ್ನು ಹಿಡಿದುಕೊಂಡು, ಅವನ ಮುಖವನ್ನು ಕ್ಲಾಸಿನ ಕಡೆ ತಿರುಗಿಸಿ "ಈ ಮಹಾನುಭಾವನಿಗೆ ಡ್ರಿಲ್ ಕ್ಲಾಸು, ಸ್ಕೌಟು ಕ್ಲಾಸು ಇವೆಲ್ಲವನ್ನೂ ಕಂಡರೆ ತುಂಬ ನಿಕೃಷ್ಟವಂತೆ. ಆದುದರಿಂದ ಸೋಮವಾರದಿಂದ ದಯಮಾಡಿಸಿಲ್ಲ" ಎಂದರು. ಅವರ ತುಟಿಗಳಿಂದ ಕಹಿ ನಗುವೊಂದು ಹೊರಬಿತ್ತು. ಹೆಡ್‌ಮೇಷ್ಟರು ನಕ್ಕಾಗ ತಾವು ಸುಮ್ಮನಿದ್ದರೆ ಕಷ್ಟವೆಂದು ಕಂಡುಕೊಂಡು ಹುಡುಗರೂ ಹಲ್ಲುಕಿರಿದರು. ಭೂಗೋಳದ ಉಪಾಧ್ಯಾಯರ ಮುಖದ ಮೇಲೂ ಒಂದು ಕಿರುನಗು ಮರ್ಯಾದೆಯಿಂದ ಆಡಿ ಮಾಯವಾಯಿತು.

"ಏನು ಸ್ವಾಮೀ. ಏನಂತೀರ? ಹೇಳಿ" ಎಂದರು ಹೆಡ್‌ಮೇಷ್ಟರು.

ಬಹಳ ಪ್ರಯಾಸಪಟ್ಟ ಮೇಲೆ ಸ್ವಾಮಿನಾಥನಿಗೆ ಸ್ವರ ಹೊರಟಿತು.

"ಡಾಕ್ಟರು ಸಾರ್........... ನನ್ನ ವಿಷಯವಾಗಿ ಡಾಕ್ಟರು ಏನೂ ಹೇಳಲಿಲ್ಲವೇ ಸಾರ್?" ಎಂದು ದೈನ್ಯದಿಂದ ಮೊರೆಯಿಟ್ಟ.

"ಯಾವ ಡಾಕ್ಟರು, ಏನು ಹೇಳೋದು."

"ಹೇಳ್ತೀನಿ ನಿಮ್ಮ ಕೈಲಿ, ಅಂದಿದ್ದರು, ಸಾರ್."

"ಮಾತನಾಡಿದರೆ ಪೂರ್ತಿ ಮಾತನಾಡು. ಅರ್ಧಂಬರ್ಧ ಮಾತನಾಡಿದರೆ ಬೆನ್ನು ಮೇಲೆ ಎರಡು ಬಿಗೀತೀನಿ, ನೋಡು."

"ಡಾಕ್ಟರ್ ಕೇಶವನ್ ಹೇಳಿದರು, ಸಾರ್."

"ಏನು ಡಾಕ್ಟರ್ ಕೇಶವನ್ ಹೇಳಿದ್ದು?.........."

"ನಿಮ್ಮ ಕೈಲಿ ಮಾತಾಡಿ, ಡ್ರಿಲ್ ಕ್ಲಾಸಿಗೂ ಸ್ಕೌಟು ಕ್ಲಾಸಿಗೂ ರಜ ಕೊಡುವಂತೆ ಹೇಳ್ತೀನಿ, ಎಂದಿದ್ದರು, ಸಾರ್. ಡ್ರಿಲ್ ಕ್ಲಾಸಿಗೆ ಹೋಗಬೇಡ ಇನ್ನೊಂದು ತಿಂಗಳು; ಹೋದರೆ ನಿನ್ನ ಖಾಯಿಲೆ ಹೆಚ್ಚಾಗುತ್ತೆ ಅಂದರು, ಸಾರ್."

"ಓಹ್ಹೋ! ತಮಗೆ ಏನು ರೋಗ, ಸ್ವಾಮಿ?"

"ನನಗೆ.........ಒಂದು ತರಹ.........ಒಂದು ತರಹ ಸನ್ನಿಯಂತೆ, ಸಾರ್." ಈ ಪದವನ್ನು ಉಪಯೋಗಿಸಬಾರದು ಎಂದು ಡಾಕ್ಟರನ್ನು ನೋಡಿದ ದಿನದಿಂದ ತೀರ್ಮಾನ ಮಾಡಿದ್ದ. ಆದರೇನು ಮಾಡುವುದು? ಅಭ್ಯಾಸಬಲ.

"ಇನ್ನೇನು ಮಹಾವಾಕ್ಯಗಳನ್ನೆಲ್ಲ ಆಡ್ತೀಯೋ ಆಡಿಬಿಡು. ನಿನ್ನ ಪುರಾಣಾನೆಲ್ಲ ಕೇಳೋಣ" ಎಂದು ಹೆಡ್‌ಮೇಷ್ಟರು ಹೇಳಿ ರಾಮರಾಯರ ಕಡೆ ತಿರುಗಿ ಸಣ್ಣದಾಗಿ ಗುಟುರುಹಾಕಿದರು.

"ಸಾರ್, ನಿಮ್ಮ ಕೈಯಲ್ಲಿ ಅವರು ಮಾತನಾಡಿದ್ದಾರೆ ಅಂತ ನಾನು ಅಂದ್ಕೊಂಡಿದ್ದೆ, ಸಾರ್. ಹೇಳ್ತೀನಿ ಅಂತ ಅಂದಿದ್ದರು........."

"ಈ ಸ್ಕೂಲಿಗೆ ಹೆಡ್‌ಮೇಷ್ಟರು ನಾನು. ನನ್ನ ಹುಡುಗರಿಗೆ ರಜ ಕೊಡಬೇಕೋ ಬಿಡಬೇಕೋ ನನ್ನ ಇಷ್ಟ ಅದು. ಗೊತ್ತು ಗುರಿಯಿಲ್ಲದ ಬೇವಾರ್ಸಿಗಳು ಹೇಳೋ ಮಾತನ್ನೆಲ್ಲ ಕೇಳಿಕೊಂಡು ಕುಣಿಯೋದಕ್ಕಲ್ಲ ನಾನಿರೋದು. ನಿಮ್ಮ ಈ ಸರ್ಜನ್ ಜನರಲ್ ಬಂದಿದ್ದರೆ ನಮ್ಮ ಜವಾನನ ಕೈಲಿ ಅವನನ್ನು ಕತ್ತು ಹಿಡಿದು ದಬ್ಬಿಸಿಬಿಡ್ತಾ ಇದ್ದೆ. ಡಾಕ್ಟರ್ ಕೇಶವನ್ ಅಂತೆ! ಅವರಪ್ಪ ಬಂದರೂ ನನಗೇನು ದಿಗಿಲು? ಭಡವಾ."

ಡಾಕ್ಟರು ತನಗೆ ಮೋಸ ಮಾಡಿದರೆಂದು ಸ್ವಾಮಿಗೆ ಈಗ ಅರ್ಥವಾಯಿತು. 'ಹೆಡ್‌ಮೇಷ್ಟರನ್ನು ನೋಡಿ ಅವರಿಗೆ ಹೇಳ್ತೀನಿ, ಹೆದರಬೇಡ' ಎಂದಾಗ ಆ ಡಾಕ್ಟರು ಎಷ್ಟು ದೊಡ್ಡದಾಗಿ ನಕ್ಕರು ಎಂಬುದು ಅವನಿಗೆ ನೆನಪಾಯಿತು. ಬೆಳ್ಳಗಿರುವುದೆಲ್ಲ ಹಾಲಲ್ಲ ಎಂಬ ಮಾತು ಎಷ್ಟು ದಿಟ! ಎಂಥ ದ್ರೋಹಿ ಅವನು! ಇರಲಿ, ಅವನಿಗೊಂದು ಪಾಠ ಕಲಿಸ್ತೀನಿ. ಅವನ ಟೇಬಲ್ ಡ್ರಾಯರ್‌ನಲ್ಲಿ ಹಾವು ಚೇಳು ಎಲ್ಲ ತುಂಬ್ತೀನಿ. ಜ್ವರ ಬಂದು ನಾನು ಸಾಯ್ತಾ ಇದ್ದರೂ ಪರವಾಯಿಲ್ಲ; ನನ್ನ ಮೈ ಮುಟ್ಟೋಕೆ ಕೂಡ

ಬಿಡೋಲ್ಲ ಅವನ್ನ........ ಈ ವೇಳೆಗೆ ಸರಿಯಾಗಿ ಅವನ ಕೈ ಚುರ್ರೆಂದಿತು. ಹೆಡ್‌ಮೇಷ್ಟರು ಬೆತ್ತವನ್ನೆತ್ತಿ ಸಿದ್ಧವಾಗಿ ನಿಂತಿದ್ದರು. "ಬಿಚ್ಚೋ ಕೈಯ್ಯಿ, ಒಂದೊಂದು ದಿನ ಆಬ್ಸೆಂಟಾದ್ದಕ್ಕೂ ಈ ಕೈಗೆ ಆರು ಆ ಕೈಗೆ ಆರರಂತೆ ನಲವತ್ತೆಂಟು ಏಟು, ಮುಂದಿನ ಪೀರೀಡೆಲ್ಲ ಬೆಂಚಿನ ಮೇಲೆ.......ಗೊತ್ತಾಯ್ತೋ?......ಮಾನೀಟರ್, ಜ್ಞಾಪಕ ಇಟ್ಕೊಕೋ. ಅಷ್ಟೇ ಅಲ್ಲ. ಡಬ್ಲ್ಯು. ಎಸ್. ಸ್ವಾಮಿನಾಥನ್, ಹುಷಾರ್. ಇನ್ನೊಂದು ದಿನ ಇನ್ನೊಂದು ಕ್ಲಾಸಿಗೇನಾದರೂ ಚಕ್ಕರ್ ಹೊಡೀಬೇಕು; ಎಲ್ಲರ ಎದುರಿಗೆ ಸ್ಕೂಲು ಹಾಲಿನಲ್ಲಿ ನಿನ್ನ ಬಟ್ಟೆ ಬಿಚ್ಚಿ, ಜವಾನನ ಕೈಲಿ ಚರ್ಮದ ಬೆಲ್ಟಿಂದ ಲಾತಾ ಬಿಗಿಸ್ತೀನಿ. ನಿನ್ನ ಪೋಲೀಸು ಸೂಪರಿಂಟೆಂಡೆಂಟರು, ಅವನ ಮಕ್ಕಳು ಮೊಮ್ಮಕ್ಕಳು, ತಾತ ಮುತ್ತಾತಂದಿರು ಯಾರು ಬಂದರೂ ಹೆದರೋವನಲ್ಲ ನಾನು. ಚಕ್ರವರ್ತಿ ಸಾರ್ವಭೌಮರನ್ನು ಕರೆದುಕೊಂಡು ಬಂದರೂ ನಾನು ಜಗ್ಗೊಲ್ಲ. ಹ್ಞು!" ಎಂದು ಕೂಗಿ ಸ್ವಾಮಿನಾಥನ ಕುತ್ತಿಗೆಯನ್ನು ಹೋಗಬಿಟ್ಟು, ಬೆತ್ತವನ್ನು ಎತ್ತಿದರು.

ಇನ್ನೊಂದು ನಿಮಿಷವಾಗಿದ್ದರೆ, ಆ ಬೆತ್ತವು ಕ್ರೂರ ಸರ್ಪರಾಜನಂತೆ ಬುಸುಗುಟ್ಟುತ್ತ ಬಂದು ಸ್ವಾಮಿನಾಥನ ಅಂಗೈಯನ್ನು ಸುಲಿದು ತಿನ್ನುತ್ತಿತ್ತು. ಅಷ್ಟರಲ್ಲಿ ಸ್ವಾಮಿಗೆ ಎಲ್ಲಿಂದಲೋ ಆವೇಶ ಬಂದುಬಿಟ್ಟಿತು. ರೋಷ, ದ್ವೇಷ, ಭಯ ಇವೆಲ್ಲವೂ ಸೇರಿ ಅವನನ್ನು ಹುಚ್ಚನಂತೆ ಮಾಡಿದವು. ಏನು ಮಾಡುತ್ತಿದ್ದನೋ ಅವನಿಗೇ ತಿಳಿಯದಾಯಿತು. ಸರಕ್ಕನೆ ಕೈ ನೀಡಿ ಹೆಡ್‌ಮೇಷ್ಟರ ಕೈಯಿಂದ ಬೆತ್ತವನ್ನು ಕಸಿದುಕೊಂಡು ರೊಯ್ಯನೆ ಅದನ್ನು ಕಿಟಕಿಯಿಂದ ಆಚೆಗೆಸೆದ. ತನ್ನ ಡೆಸ್ಕ್ ಬಳಿಗೆ ಧಾವಿಸಿ, ಪುಸ್ತಕಗಳನ್ನು ಎತ್ತಿಕೊಂಡು ರೂಮಿಂದ ದಡದಡನೆ ಓಡಿ ಹೋದ. ಒಂದೇ ಓಟದಲ್ಲಿ ಹಾಲನ್ನೂ ವರಾಂಡಾವನ್ನೂ ದಾಟಿ, ಸ್ಕೂಲಿನ ಗೇಟನ್ನು ಹತ್ತಿ ಆಚೆ ಕಡೆಯ ರಸ್ತೆಯೊಳಕ್ಕೆ ದುಮುಕಿದ.

ರಸ್ತೆಯ ಪಕ್ಕದ ಮರವೊಂದರ ಕೆಳಗೆ ಕುಳಿತು ನಡೆದ ಘಟನೆಗಳನ್ನೆಲ್ಲ ಅವಲೋಕಿಸಿದ. ಆ ಧೂರ್ತನಿರುವವರೆಗೆ ಮತ್ತೆ ಆ ಸ್ಕೂಲಿಗೆ ಹೋಗುವುದಿಲ್ಲವೆಂದು ಶಪಥಮಾಡಿದ. ಅಪ್ಪನಿಗೆ ತಿಳಿದರೆ ಏನು ಮಾಡುತ್ತಾರೋ ಏನೋ! ದೇವರಿಗೇ ಗೊತ್ತು. ಅಲ್ಲಿಗೆ ವಾಪಸು ಹೋಗೆಂದು ಅಪ್ಪ ಬಲವಂತ ಮಾಡುತ್ತಾರೆ. ಆದರೆ ಹೋಗುವುದು ಹೇಗೆ ಸಾಧ್ಯ?.........ಇದೇ ರೀತಿಯಲ್ಲಿ ಎರಡು ಸ್ಕೂಲುಗಳನ್ನು ಬಿಟ್ಟುದಾಯಿತು. ಮಾಲ್ಗುಡಿಯಲ್ಲಿ ಇನ್ನು ಬೇರೆ ಸ್ಕೂಲುಗಳೇ ಇಲ್ಲ. ಹಾಗಾದರೆ ಅಪ್ಪ ನನ್ನನ್ನು ತಿರುಚುನಾಪಳ್ಳಿಗೋ ಮದರಾಸಿಗೋ ಕಳುಹಿಸಬೇಕಾಗುತ್ತದೆ. ಆದರೆ, ನಾನೆಂಥವನೆಂಬುದನ್ನು ಈ ಬೋರ್ಡು ಹೈಸ್ಕೂಲು ಹೆಡ್ ಮೇಷ್ಟರು ಮಿಕ್ಕ ಎಲ್ಲ ಹೈಸ್ಕೂಲು ಹೆಡ್‌ಮೇಷ್ಟರುಗಳಿಗೂ ತಿಳಿಸಿಬಿಟ್ಟರೆ? ಆಮೇಲೆ ನನ್ನನ್ನು ಯಾರೂ ಸೇರಿಸಿಕೊಳ್ಳುವುದಿಲ್ಲ. ಹಾಗಾದರೆ ಎಲ್ಲಾದರೂ ಕೂಲಿ ಮಾಡಿ ಹೊಟ್ಟೆ ಹೊರೆದುಕೊಳ್ಳಬೇಕು.........ಕೆಲಸ ಮಾಡಿದರೆ ರೂಪಾಯಿ ಸಿಕ್ಕುತ್ತೆ- ಆಗ ಹೋಟೆಲಿಗೆ ಹೋಗಿ ಬೇಕಾದ ಹಾಗೆ ತಿಂಡಿ ತಿನ್ನಬಹುದು. ಬೊಂಬಾಯಿ ಆನಂದ ಭವನದಲ್ಲಿ ಎಂಥೆಂಥ ತಿಂಡಿ ಇರುತ್ತೆ! ಬಾಗಿಲ ಹತ್ತಿರವೇ

ಗಾಜಿನ ಬೀರುವಿನ ಮೇಲಂತಸ್ತಿನಲ್ಲಿ ಬಾದಾಮಿ ಗೇರುಪೊಪ್ಪು ಎಲ್ಲ ಹಾಕಿ ಯಾವುದೋ ಒಂದು ಬಗೆಯ ಹಸುರು ಹಲ್ವ ಇದೆಯಲ್ಲ! ಅದನ್ನು ತಿನ್ನಬೇಕೂ ಅಂತ ನನಗೆ ಯಾವಾಗಲೂ ಆಸೆ; ಆದರೆ ಅದನ್ನು ಕೇಳುವಷ್ಟು ಧೈರ್ಯ ನನಗೆ ಯಾವಾಗಲೂ ಬಂದಿರಲಿಲ್ಲ. ಎಷ್ಟು ರೂಪಾಯೋ ಏನೋ ಅದಕ್ಕೆ?......... ಸ್ಕೂಲಿಗೆ ಹೋಗದೆ ಹೋದರೆ ಅಪ್ಪ ನನ್ನನ್ನು ಮನೆಯಲ್ಲಿ ಇಟ್ಟುಕೊಳ್ಳುವುದಿಲ್ಲ. ಮೂಳೆ ಮುರಿಯುವಂತೆ ಹೊಡೆಯಬಹುದು. ಹಾಗಾದರೆ ಈವತ್ತು ಮನೆಗೇ ಹೋಗೊಲ್ಲ. ಈವತ್ತೂ ಹೋಗೊಲ್ಲ, ಯಾವತ್ತೂ ಹೋಗೊಲ್ಲ, ಅಪ್ಪನ ಮುಖ ನೋಡೋಕೆ ಸಾಧ್ಯವಿಲ್ಲ. ಹಾಗಾದರೆ ಎಲ್ಲಿಗೆ ಹೋಗೋದು? ಎಲ್ಲಾದರೂ ಸರಿ. ಮಾರ್ಕೆಟ್ ರಸ್ತೇಲೇ ನಡೀತಾ ಹೋದರೆ ಎಲ್ಲಿಗೆ ಹೋಗುತ್ತೆ? ಮದರಾಸಿಗೆ ಹೋಗಬಹುದಲ್ಲವೆ? ಹಾಗೇ ಮುಂದಕ್ಕೆ ಹೋದರೆ ಬೊಂಬಾಯಿ, ಇಂಗ್ಲೆಂಡು ಎಲ್ಲವೂ ಸಿಕ್ಕೋಲ್ಲವೆ? ಅಲ್ಲೆಲ್ಲಾದರೂ ಹೋಗಿ ಕೂಲಿ ನಾಲಿ ಮಾಡಿ, ಬೇಕಾದ ಹಾಗೆ ದುಡ್ಡು ಸಂಪಾದಿಸಿ, ಮನಸೋಯಿಚ್ಛೆ ಖರ್ಚು ಮಾಡಬಹುದು. ರೈಲಿನಲ್ಲೇಕೆ ಹೋಗಬಾರದು?........... ಆದರೆ ರೈಲಿಗೆ ದುಡ್ಡೆಲ್ಲಿಂದ ತರೋದು? ಪರವಾಯಿಲ್ಲ. ಸ್ಟೇಷನ್‌ಮಾಷ್ಟರು ಗುರುತಿದ್ದಾರಲ್ಲ! ಅವರು ಬಿಟ್ಟೇನೇ ಬಿಟ್ಟರೂ ಬಿಡಬಹುದು.

ಸ್ಕೂಲಿನ ಗಂಟೆ ಹೊಡೆಯಿತು. ಸ್ವಾಮಿನಾಥ ಎದ್ದ............ ಬೆಲ್ ಹೊಡೆದುದರಿಂದ ಹುಡುಗರೆಲ್ಲ ಬರುತ್ತಾರೆ, ಬಂದು ಸುತ್ತಲೂ ಮುತ್ತಿಕೊಂಡು ತನ್ನನ್ನೇ ನೋಡಲು ಷುರು ಮಾಡುತ್ತಾರೆ. ತಾನೇನು ಡೊಂಬರವನೇ?

ಮಾರ್ಕೆಟ್ ರಸ್ತೆಯಲ್ಲೇ ಹೊರಟು, ಬಲಗಡೆ ತಿರುಗಿದ. ಆಮೇಲೆ ಸ್ಮಿತ್ ರಸ್ತೆಗೆ ತಿರುಗಿ, ಹಲವಾರು ಸಣ್ಣ ಸಣ್ಣ ಗಲ್ಲಿಗಳ ಮೂಲಕ ಹಾದುಹೋಗಿ, ತನ್ನ ಹಳೇ ಸ್ಕೂಲಿನ ಮುಂದೆ ನಿಂತ. ಆ ಹಳದೀ ಬಣ್ಣದ ಎರಡಂತಸ್ತಿನ ಮನೆಯನ್ನು ಕಂಡು ಅವನ ಮನಸ್ಸಿನ ತುಂಬ ಹಿಂದಿನ ಕಾಲದ ನೆನಹುಗಳು ತುಂಬಿಕೊಂಡವು. ಮತ್ತೆ ಆ ಕಾಲ ಬರಬಾರದೇ ಎನಿಸಿತು. ಆ ಸ್ಕೂಲನ್ನು ಬಿಡದೆ ಹೋಗಿದ್ದರೆ ಚೆನ್ನಾಗಿರುತ್ತಿತ್ತಲ್ಲ ಎಂದುಕೊಂಡ. ಆಲ್ಬರ್ಟ್ ಮಿಷನ್‌ನಲ್ಲಿ ಎಲ್ಲವೂ ಎಷ್ಟು ಜಬರ್ದಸ್ತಾಗಿದೆ? ಕಲಾಪತ್ತು ಅಂಚಿನ ಪೇಟ ಇಟ್ಟುಕೊಂಡು ಹೆಡ್‌ಮೇಷ್ಟರು ಬಂದಾ ಅಂದರೆ! ಬೋರ್ಡು ಹೈಸ್ಕೂಲಿನ ಶೊಬಚ ಹೆಡ್‌ಮೇಷ್ಟರನ್ನ ತೊಗೊಂಡು ಹೋಗಿ ಸುಡಬೇಕು.......ವೇದನಾಯಗಂ, ಎಬನೀಜರ್- ಅವರು ಕೂಡ ಎಷ್ಟು ಒಳ್ಳೆಯವರು! ಡಿ. ಪಿಳ್ಳೆಯವರ ವಿಷಯವಂತೂ ಹೇಳಬೇಕಾಗಿಲ್ಲ. ಅವರಿಗಿಂತ ಒಳ್ಳೆಯ ಚರಿತ್ರೆ ಮೇಷ್ಟರು ಇನ್ನೊಬ್ಬರುಂಟೆ!........... ಸೋಮು, ಬಟಾಣಿ ಮುಂತಾದವರ ನೆನಪು ಬಂದಾಗಲಂತೂ ಸ್ವಾಮಿಯ ಕಣ್ಣಲ್ಲಿ ನೀರೇ ಬಂದುಬಿಟ್ಟಿತು. ತನ್ನ ಸ್ನೇಹಿತರಾದ ರಾಜಂ, ಮಣಿ, ಬಟಾಣಿ, ಸೋಮು ಇವರೆಲ್ಲ ಈ ಸ್ಕೂಲಲ್ಲಿ ಎಷ್ಟು ಹಾಯಾಗಿದ್ದಾರೆ! ಎಷ್ಟು ಗೌರವವಾಗಿದ್ದಾರೆ! ತಾನೊಬ್ಬನೇ ಹೊರಗೆ. ಒಬ್ಬನೇ ಒಬ್ಬ. ಕುಷ್ಠರೋಗಿಯಂತೆ ಎಲ್ಲರೂ ತನ್ನನ್ನು ದೂರಮಾಡಿದ್ದಾರೆ! ತಾನೊಬ್ಬ

ಪರದೇಶಿ. ಹೌದು, ಪರದೇಶಿ. ಇದ್ದಕ್ಕಿದ್ದಂತೆ ಸ್ವಾಮಿಗೆ ತನ್ನನ್ನು ಕಂಡು ವಿಪರೀತ ಜಿಗುಪ್ಸೆ ಹುಟ್ಟಿಬಿಟ್ಟಿತು. ಆ ಹಳೆಯ ಸ್ಕೂಲಿಗೆ ಹಿಂದಿರುಗಲು ಏನು ಬೇಕಾದರೂ ಅವನು ಕೊಡಲು ಸಿದ್ಧ, ಆದರೆ ಅವರು ತೊಗೊಳ್ಳಬೇಕಲ್ಲ! ಗೋಳಾಡಿ ಏನು ಪ್ರಯೋಜನ? ಮಾಲ್ಗುಡಿಯಲ್ಲಿ ಬೇರೆ ಯಾವ ಸ್ಕೂಲೂ ಇಲ್ಲ. ಮದರಾಸಿಗೆ ಓಡಿಹೋಗಬೇಕು. ಅಲ್ಲಿ ಜೀತ ಮಾಡಬೇಕು. ಆದರೆ ಹೊರಡೋ ಮುಂಚೆ ಮಣಿ ರಾಜಂ ಇಬ್ಬರನ್ನೂ ನೋಡಿ ಹೋಗೋದು ವಾಸಿ.........

ಸ್ಕೂಲು ಬಾಗಿಲು ಮುಂದೆಯೇ ತುಸು ಹೊತ್ತು ನಿಂತಿದ್ದ. ಒಳಗೆ ಹೋಗಲು ಧೈರ್ಯವಿಲ್ಲ. ತಾನು ಆ ಸ್ಕೂಲಿನ ಶತ್ರು. ಸ್ಕೂಲು ಜವಾನ ಸಿಂಗಾರಂ ತನ್ನನ್ನೇನಾದರೂ ಕಂಡನೆಂದರೆ ಬೆನ್ನು ನೆಗ್ಗಿ ಬಿಟ್ಟಾನು. ಮೆಲ್ಲ ಮೆಲ್ಲಗೆ ಸ್ಕೂಲು ಗೋಡೆಯ ಬಳಿ ಸೇರಿ ಯಾರಿಗೂ ಕಾಣಿಸದ ರೀತಿಯಲ್ಲಿ ಅವಿತುಕೊಂಡ. ರಾಜಂ, ಮಣಿ-ಇಬ್ಬರನ್ನೂ ನೋಡದೆ ಹೋಗುವಂತಿಲ್ಲ. ಆದರೆ ನೋಡುವುದು ಹೇಗೆ?........ ಒಂದು ಉಪಾಯ ಹೊಳೆಯಿತು.

ಕಾಂಪೌಂಡನ್ನು ಬಳಸಿಕೊಂಡು ಸ್ಕೂಲಿನ ಹಿಂದುಗಡೆ ಹೋದ. ಇತ್ತ ಕಡೆ ಸಾಧಾರಣವಾಗಿ ಯಾರೂ ಹೋಗರು. ಈ ಸ್ಕೂಲಿನಲ್ಲಿದ್ದ ಆರೇಳು ವರ್ಷಗಳಲ್ಲಿ ಸ್ವಾಮಿ ಒಂದು ಸಲವೂ ಇಲ್ಲಿಗೆ ಬಂದಿರಲಿಲ್ಲ. ಕಾಂಪೌಂಡಿನ ಮೇಲೆ ಹುಲುಸಾಗಿ ಪಾಚಿ ಬೆಳೆದುಬಿಟ್ಟಿತ್ತು. ಹಿಂದುಗಡೆಯಿಂದ ನೋಡಿದರೆ ಸ್ಕೂಲು ತುಂಬ ವಿಚಿತ್ರವಾಗಿ ಕಾಣುತ್ತಿತ್ತು. ತನ್ನ ಹಳೆಯ ತರಗತಿ ಸೆಕೆಂಡ್ 'ಎ' ಎಲ್ಲಿದೆ ಎಂದು ಹೇಳುವುದಕ್ಕೂ ಕೂಡ ಸ್ವಾಮಿಗೆ ತೋರುತ್ತಿರಲಿಲ್ಲ. ಇಲ್ಲಿಂದ ಗೋಡೆಯ ಪಕ್ಕದಲ್ಲಿ ಏಳೆಂಟು ಇಟ್ಟಿಗೆಗಳನ್ನು ಪೇರಿಸಿ, ಅದರ ಮೇಲೆ ಹತ್ತಿ ನಿಂತ. ಸ್ಕೂಲಿನ ಅಂಗಳ ಕಾಣಿಸಿತು. ಆಗ ಸುಮಾರು ಹನ್ನೆರಡು ಗಂಟೆ. ಎಲ್ಲ ತರಗತಿಗಳೂ ಅತ್ಯಂತ ಹುರುಪಿನಿಂದ ಕೆಲಸ ಮಾಡುವ ವೇಳೆಯೆಂದರೆ ಅದೇ. ಆದುದರಿಂದ ಅಂಗಳದಲ್ಲಿ ಒಂದು ನರಪಿಳ್ಳೆಯೂ ಇರಲಿಲ್ಲ. ಸ್ವಾಮಿ ಕಾದು ನೋಡಿದ. ಥೂ,-ಕಾಯುವುದಕ್ಕಿಂತ ಅಧ್ವಾನವಾದ್ದು ಯಾವುದೂ ಇಲ್ಲ. ಸ್ವಲ್ಪ ಹೊತ್ತಾದ ಮೇಲೆ ಮೂಗು ಸೀನುವುದಕ್ಕೆಂದು ಪ್ರೈಮರಿ ಒಂದನೆಯ ತರಗತಿಯ ಹುಡುಗನೊಬ್ಬ ಹೊರಗೆ ಬಂದ.

ಸ್ವಾಮಿನಾಥ ಮೆಲ್ಲಗೆ ಸಿಳ್ಳು ಹಾಕಿದ. ಆ ಪುಟ್ಟ ಮನುಷ್ಯನಿಗದು ಕೇಳಿಸಲಿಲ್ಲ. ಸ್ವಾಮಿನಾಥ ಮತ್ತೆ ಸಿಳ್ಳು ಹಾಕಿದ. ಆ ಪುಟ್ಟ ಮನುಷ್ಯ ತಿರುಗಿ ನೋಡಿ, ದಯ್ಯವನ್ನು ನೋಡಿದವನಂತೆ ಬೆಚ್ಚಿಬಿದ್ದ. ಸ್ವಾಮಿನಾಥ ಅವನನ್ನು ಕರೆದ. ದಯ್ಯದ ಆಜ್ಞೆಯನ್ನು ಶಿರಸಾವಹಿಸಬೇಕೋ ಭದ್ರವಾಗಿ ಕ್ಲಾಸಿಗೆ ಹೋಗಿ ಸೇರಿಕೊಳ್ಳಬೇಕೋ ತೀರ್ಮಾನಿಸಲು ಆ ಪುಟ್ಟ ಮನುಷ್ಯನಿಗೆ ಒಂದು ನಿಮಿಷ ಹಿಡಿಯಿತು. ಸ್ವಾಮಿನಾಥ ಅವನನ್ನು ಮತ್ತೆ ಕರೆದ. ಮಾಟಗಾರನ ಮಂತ್ರಕ್ಕೆ ವಶವಾದವನಂತೆ ಆ ಪುಟ್ಟ ಹುಡುಗನು ಅರಳಿದ ಕಣ್ಣುಗಳೊಡನೆ ಸ್ವಾಮಿಯ ಹತ್ತಿರಕ್ಕೆ ಬಂದ. "ಲೋ, ನಿನಗೊಂದು ಬಾದಾಮಿ ಪೆಪ್ಪರಮೆಂಟು ಬೇಕೇನೋ?" ಎಂದು ಸ್ವಾಮಿ ಕೇಳಿದ.

ಆ ಪುಟ್ಟ ಮನುಷ್ಯನಿಗೆ ಆಶ್ಚರ್ಯವೋ ಆಶ್ಚರ್ಯ! ತನ್ನ ಕಿವಿಗಳನ್ನೇ ನಂಬಲಿಲ್ಲ ಅವನು. ಈ ಮನುಷ್ಯನನ್ನು ನೋಡು! ತಾನಾಗಿ ಬಂದು ಬಾದಾಮಿ ಪೆಪ್ಪರಮೆಂಟು ಕೊಡುತ್ತ ಇದ್ದಾನೆ! ನಿಜವೇ ಇದು? ಏನಾದರೂ ಕಮಾಲ್ ಇರಬೇಕು ಇದರಲ್ಲಿ. ಸ್ವಾಮಿ ಅದೇ ಪ್ರಶ್ನೆಯನ್ನು ಮತ್ತೊಮ್ಮೆ ಕೇಳಿದ. ಪುಟ್ಟ ಮನುಷ್ಯನು ಬಹಳ ಜಾಗರೂಕತೆಯಿಂದ "ನನಗೆ ಪೆಪ್ಪರಮೆಟೆಂದರೇನೋ ಇಷ್ಟ" ಎಂದ.

"ಈ ತಕ್ಷಣವೇ ಸಿಗೊಲ್ಲ. ಬೇಕಾಬಿಟ್ಟೆ ಬಂದುಬಿಡುತ್ತೆ ಅಂದುಕೊಂಡಿದ್ದಿಯೇನು? ಕಷ್ಟಪಟ್ಟರೆ ಫಲವುಂಟು, ನೋಡು. ಸುಮ್ಮನೆ ಸೆಕೆಂಡ್ ಫಾರಂ 'ಎ'ಗೆ ಹೋಗಿ, ಎಂ. ರಾಜಂ ಎಂಬುವನಿಗೆ ಹೇಳು - ಮನೆಯಿಂದ ನಿನ್ನನ್ನು ನೋಡಲು ಯಾರೋ ಬಂದಿದ್ದಾರೆ, ಬಹಳ ಅರ್ಜೆಂಟ್ ಕೆಲಸ ಇದೆಯಂತೆ, ಬೇಗ ಬರಬೇಕಂತೆ - ಅಂತ. ಅವನ್ನ ಕರಕೊಂಡು ಬಾ. ಬಾದಾಮಿ ಪೆಪ್ಪರಮೆಂಟು ಸಿಕ್ಕುತ್ತೆ. ನೋಡು......... ಕೆಲಸ ಕಷ್ಟಾ ಅಂತ ಎರಡು ಪೆಪ್ಪರಮೆಂಟು ಕೊಡ್ತೀನಿ............" ಎಂದ ಸ್ವಾಮಿ.

ಪ್ರಶ್ನೆಯ ಪ್ರತಿಯೊಂದು ಭಾಗವನ್ನೂ ಅರಗಿಸಿಕೊಳ್ಳುವುದಕ್ಕೆ ಆ ಪುಟ್ಟ ಮನುಷ್ಯನಿಗೆ ಸ್ವಲ್ಪ ಹೊತ್ತು ಹಿಡಿಯಿತು. ಆಮೇಲೆ ಅವನು ಹುಬ್ಬನ್ನು ಮೇಲಕ್ಕೆತ್ತಿ "ಸೆಕೆಂಡ್ ಎ ಎಲ್ಲಿದೆ?" ಎಂದು ಕೇಳಿದ.

"ಮಹಡಿ ಮೇಲೆ."

"ಅಯ್ಯೋ!" ಅಲ್ಲಿಗೆ ಹೋಗುವುದು ಹೇಗೆ ಎಂದು ತಿಳಿಯದೆ ಹುಡುಗ ಬೆಪ್ಪಾಗಿ ನಿಂತ.

"ಏನಂತೀಯ? ನಾನು ಹತ್ತೆಣಿಸುವುದರೊಳಗೆ ಹೇಳಬೇಕು. ಇಲ್ಲದೆ ಹೋದರೆ ನಿನಗೆ ಪೆಪ್ಪರಮೆಂಟೇ ಇಲ್ಲ. ಎಲ್ಲಿ? - ಒಂದು, ಎರಡು, ಮೂರು-"

"ಮಹಡಿ ಮೇಲಿದೆ ಅಂದ್ಯಾ?"

"ಹೂ."

"ನಾನು ಅಲ್ಲಿಗೆ ಯಾವತ್ತೂ ಹೋಗಿಲ್ಲ."

"ಪೆಪ್ಪರಮೆಂಟು ಬೇಕಾದರೆ ಇವತ್ತು ಹೋಗಬೇಕು."

"ದಾರಿ ಗೊತ್ತಿಲ್ಲವಲ್ಲ, ನನಗೆ?"

"ಸುಮ್ಮನೆ ಮೆಟ್ಟಿಲು ಹತ್ತಿ ಹೋಗು."

"ಯಾರಾದರೂ ಹೊಡೆದುಬಿಟ್ಟರೆ-"

"ನೋಡು, ಪೆಪ್ಪರಮೆಂಟು ಬೇಕಾದರೆ ಅದನ್ನೆಲ್ಲ ಎದುರಿಸಬೇಕು........ ಹೋಗ್ತೀಯೋ ಇಲ್ಲವೋ ಹೇಳು ಮತ್ತೆ."

"ಆಗಲಿ. ಸ್ವಲ್ಪ ತಡಿ." ಪುಟ್ಟ ಮನುಷ್ಯ ಓಡಿದ.

ಹತ್ತು ನಿಮಿಷ ಆದಮೇಲೆ ಅವನು ಮತ್ತೆ ಬಂದ. ಜತೆಯಲ್ಲಿ ರಾಜಂ ಕೂಡ ಬಂದ. ಕಾಂಪೌಂಡಿನ ಆಚೆ ಸ್ವಾಮಿಯ ತಲೆಯನ್ನು ಕಂಡು ರಾಜಂಗೆ ಆಶ್ಚರ್ಯ! "ಏನು ಮಾಡ್ತಾ ಇದ್ದೀಯೋ ಇಲ್ಲಿ?"

"ರಾಜಂ, ತುಂಬಾ ಅರ್ಜೆಂಟಾಗಿ ಮಾತಾಡಬೇಕಾಗಿದೆ. ಗೋಡೆ ದುಮುಕಿ ಬಾರೋ ಈ ಕಡೆ."

"ಈಗ ನಮಗೆ ಕ್ಲಾಸಿದೆ ಕಾಣೋ. ಬರೋದಕ್ಕಾಗೊಲ್ಲ."

"ತಲೆಹರಟೆ ಮಾಡಬೇಡ ಕಾಣೋ. ಬಾಯಿ ಮುಚ್ಚಿಕೊಂಡು ಬಾ ಇಲ್ಲಿ."

ರಾಜಂ ಗೋಡೆಯನ್ನು ಹಾರಿ ಸ್ವಾಮಿಯ ಪಕ್ಕದಲ್ಲಿ ನಿಂತ.

ಅಂಗಳದ ಒಳಗಡೆಯಿಂದ, "ಪೆಪ್ಪರಮೆಂಟು ಎಲ್ಲಿ? ಕೊಡ್ತೀನೀ ಅಂದೆಯಲ್ಲೋ?" ಎಂದು ಒಂದು ಆರ್ತಸ್ವರ ಕೇಳಿಸಿತು.

"ಅಯ್ಯೋ, ಮರೆತುಬಿಟ್ಟೆ, ತೊಗೋ, ಇದನ್ನು ಕ್ಯಾಚ್ ಹಿಡಿ" ಎಂದು ಸ್ವಾಮಿನಾಥ ಒಂದು ಮೂರು ಕಾಸಿನ ನಾಣ್ಯವನ್ನು ಬಿಸಾಕಿದ.

"ಬಾದಾಮಿ ಪೆಪ್ಪರಮೆಂಟ್ ಕೊಡ್ತೀನಿ ಅಂದೆ?" ಎಂದು ಹುಡುಗ ನೆನಪು ಮಾಡಿದ.

"ನಾನು ಸಾವಿರ ಸಾಮಾನು ಕೊಡ್ತೀನಿ ಅನ್ನಬಹುದು. ಸಾಲದೋ ಮೂರು ಕಾಸು? ಬೇಕಾದರೆ ಹೋಗಿ ಕೊಂಡುಕೊ" ಎಂದು ಸ್ವಾಮಿ ಒರಟಾಗಿ ಉತ್ತರ ಕೊಟ್ಟ.

"ಎರಡು ಪೆಪ್ಪರಮೆಂಟು ಕೊಡ್ತೀನಿ ಅಂದೆ."

"ಸುಮ್ಮನೆ ಹೋಗಯ್ಯ. ಬದನೇಕಾಯಿ ಮಾರೋವಳ ಹಾಗೆ ಚೌಕಾಸಿ ಮಾಡಬೇಡ. ತೃಪ್ತಿಯಾಗಿರೋದನ್ನು ಕಲಿತುಕೊ. ಪ್ರಪಂಚದಲ್ಲಿ ಯಾವುದೂ ಶಾಶ್ವತವಲ್ಲ" ಎಂದು ಹೇಳಿ ಸ್ವಾಮಿನಾಥ ಆ ಇಟ್ಟಿಗೆಗಳ ರಾಶಿಯಿಂದ ದುಮುಕಿ ಹೊರಟುಹೋದ.

"ರಾಜಂ, ನಮ್ಮ ಸ್ಕೂಲಿನಲ್ಲಿ ಈವತ್ತೇನಾಯಿತು ಗೊತ್ತಾ? ಹೆಡ್ ಮೇಷ್ಟರ ಕೈಯಲ್ಲಿ ನಾನು ಯುದ್ಧ ಮಾಡಿಬಿಟ್ಟೆ. ಆದ್ದರಿಂದ ಹೆಡ್ ಮೇಷ್ಟರು ನನ್ನನ್ನ ಡಿಸ್‌ಮಿಸ್ ಮಾಡಿಬಿಟ್ಟರು. ಇನ್ನು ಮೇಲೆ ನನಗೆ ಸ್ಕೂಲೂ ಇಲ್ಲ, ಕ್ಲಾಸೂ ಇಲ್ಲ.........."

"ಏನು? ಹೆಡ್‌ಮೇಷ್ಟರ ಕೈಲಿ ಹೋರಾಡಿದೆಯಾ?"

"ಹೂ. ಡ್ರಿಲ್ ವಿಷಯವಾಗಿ ನನ್ನನ್ನ ಹೊಡೀಬೇಕೂಂತ ಬೆತ್ತ ತೊಗೊಂಡು ಬಂದರು. ನಾನು ಅವರ ಕೈ ತಿರಚಿ ಬೆತ್ತ ಕಿತ್ತುಕೊಂಡು ಬಿಟ್ಟೆ. ತಿರುಗಿ ನಾನು ಆ ಸ್ಕೂಲಿಗೆ ಹೋಗೊಲ್ಲ. ಹೋದರೆ ಇನ್ನೂ ಹೆಚ್ಚು ಫಜೀತಿಯಾಗೊತ್ತೆ......."

"ಎಂಥಾವನೋ ನೀನು. ಮುಟ್ಟಿದ್ದೆಲ್ಲ ಹಾಳು..........ಎಲ್ಲಿ ಹೋಗಲಿ, ಒಂದಲ್ಲ ಒಂದು ಗಲಾಟೆ ಮಾಡಿಕೊಂಡು........ಸದಾ ಇದೇ ರಗಳೆ!"

"ನನ್ನದಲ್ಲ ಕಾಣೋ ತಪ್ಪು" ಎಂದು ಹೇಳಿ ಸ್ವಾಮಿನಾಥನ್ ಡಾ॥ ಕೇಶವನ್ ಮಾಡಿದ ದ್ರೋಹವನ್ನೆಲ್ಲ ವಿವರಿಸಿದ.

"ಸ್ವಾಮಿ, ನಿನಗೆ ಬುದ್ಧಿಯಿಲ್ಲ ಕಾಣೋ, ಬಲೆ ವಿಚಿತ್ರ ಮನುಷ್ಯ ನೀನು."

"ಇನ್ನೇನು ಮಾಡಲೋ ನಾನು? ಸಾಯಂಕಾಲ ಟೀಮಿಗೆ ಬರಬೇಕಾದರೆ ಬೇರೆ ದಾರಿಯೇ ಇರಲಿಲ್ಲ ಕಾಣೋ. ವೈ.ಎಂ.ಯು. ಅವರನ್ನು ಸೋಲಿಸೋದು ಸುಲಭದ ಮಾತೇ?"

"ನೀನು ಹೇಳಿದ್ದು ನಿಜಾ ಅನ್ನು. ಇವತ್ತು ಬೆಳಿಗ್ಗೆ ಅವರು ಪ್ರಾಕ್ಟೀಸು ಮಾಡಿಕೋತಿದ್ದನ್ನ ನೋಡಿದೆ. ಬೆಳಿಗ್ಗೆ ಕೂಡ ಪ್ರಾಕ್ಟೀಸು ಮಾಡಿಕೋತಿದ್ದಾರೆ ಅವರು. ತೆಗೆದುಹಾಕೋ ಅಂಥಾ ಪ್ಲೇಯರ್ಸ್ ಅಲ್ಲ. ಮೊಹದೀನ್ ಅಂತ ಒಬ್ಬನಿದ್ದಾನೆ- ಕರ್‍ರಗೆ, ಎತ್ತರವಾಗಿ. ಅವನ ಮೇಲೆ ನೀನೊಂದು ಕಣ್ಣಿಟ್ಟೇ ಇರಬೇಕು. ಬ್ರಾಡ್‌ಮನ್ ಹಾಗೆ ಆಡ್ತಾನೆ ಕಾಣೋ ಅವನು. ಹುಷಾರಾಗಿರು. ಇನ್ನೊಬ್ಬ, ಷಣ್ಮುಗಂ ಅಂತ ಇದ್ದಾನೆ. ಬಲೆ ಗಟ್ಟಿಗ ಬೋಲಿಂಗಿನಲ್ಲಿ. ಆದರೆ ಮೊಹಿದ್ದೀನನಲ್ಲಿ ಒಂದು ಐಬಿದೆ. ಲೆಗ್‌ಸ್ಕ್ವೇರ್ ಕಡೆ ಹೊಡೀಲಾರ. ಸುಳು ತಿಳಕೊ....... ಸ್ವಾಮಿ, ಯಾವ ವಿಷಯವಾಗೂನೂ ಚಿಂತೆ ಇಟ್ಟುಕೋಬೇಡ. ನಾಳೆ ಬೆಳಿಗ್ಗೇನೂ ಬರಬೇಕು ನೀನು, ಪ್ರಾಕ್ಟೀಸಿಗೆ. ವೈ.ಎಂ.ಯು.ನ ಕುಟ್ಟಿ ಬಜಾಯಿಸಿ ಬಿಡಬೇಕು........."

ಸ್ವಾಮಿನಾಥ ಬಂದುದು ರಾಜಂಗೆ ಗುಡ್ ಬೈ ಹೇಳುವುದಕ್ಕೇಂತ. ಆದರೆ ಈಗ ಮನಸ್ಸು ಬದಲಾಯಿಸಿಬಿಟ್ಟ. ಅವನು ತನ್ನ ಯೋಚನೆಯನ್ನು ರಾಜಂಗೆ ವಿವರಿಸತೊಡಗಿದರೆ, ಖಂಡಿತವಾಗಿ ಅವನು ತಡೆದುಬಿಡ್ತಾನೆ. ಆದುದರಿಂದ ರಾಜಂಗೆ ಏನೂ ಹೇಳದಲೇ ಇರೋದೇ ವಾಸಿ. ರಾಜಂಗೂ ಹೇಳೊಲ್ಲ, ಯಾರಿಗೂ ಹೇಳೊಲ್ಲ. ಮಣೀಗೆ ಕೂಡ ಹೇಳೊಲ್ಲ. ರಾಜಂ ತಡೆದುಬಿಟ್ಟ ಅಂತ ಇಟ್ಟುಕೊಳ್ಳೋಣ. ಆವಾಗ ಯಾರ ಮನೇಲಿರೋದು?........ ಮ್ಯಾಚಿಗೆ ಇನ್ನೂ ಎರಡು ದಿನ ಇದೆಯಲ್ಲ. ಯಾರಿಗೂ ಹೇಳದೆ ತಲೆ ತಪ್ಪಿಸಿಕೊಂಡು ಹೊರಟುಹೋಗಿ, ದಾರೀಲಿ ಹೇಗೋ ಅಂತೂ ಪ್ರಾಕ್ಟೀಸು ಮಾಡಿಕೊಂಡು, ಮ್ಯಾಚಿನ ದಿನ ಆ ಹೊತ್ತಿಗೆ ಸರಿಯಾಗಿ ಬಂದು, ಮ್ಯಾಚು ಮುಗಿಸಿಕೊಂಡು ಮತ್ತೆ ಮಾಯವಾಗಿ ಬಿಡೋದು. ಮಾಲ್ಗುಡಿ ಕಡೆ ತಿರುಗಿ ಮುಖ ತೋರಿಸೋದೇ ಇಲ್ಲ. ಅಪ್ಪನಂಥ ಕಲ್ಲೆದೆಯವನು, ಹೆಡ್‌ಮೇಷ್ಟರಂಥ ಕ್ರೂರಿ ಇವರೆಲ್ಲ ಇರೋಂಥ ಮಾಲ್ಗುಡಿಯಲ್ಲಿ ನನಗೇನು ಕೆಲಸ?.......ಎಷ್ಟು ಹೇಳಿದರೂನೂ ಅಪ್ಪ ಮಾತ್ರ ಒಪ್ಪೊಲ್ಲ, ನಾನು ಮಾಡಿದ್ದನ್ನು. ಮನೆಗೆ ಹೋದೇಂತ ಇಟ್ಟುಕೊಳ್ಳೋಣ. ಅಪ್ಪ ಸುಮ್ಮನೆ ಇರ್ತಾರೇ? ಹೊಡೆದು ಬಡಿದು ಪ್ರಾಣ ತೆಗೆದುಬಿಡ್ತಾರೆ. ಬೋರ್ಡು ಹೈಸ್ಕೂಲಿಗೆ ಮತ್ತೆ ಹೋಗು ಅಂತಾರೆ. ಹೋಗದೆ ಇದ್ದರೆ ಚರ್ಮ ಸುಲಿದುಬಿಡ್ತಾರೆ. ಸಾಮಾನ್ಯ ಮನುಷ್ಯರೆ ಅಪ್ಪ!........ ಯಾರಿಗೂ ಗೊತ್ತಾಗದ ಹಾಗೆ ಮ್ಯಾಚ್ ದಿನ ಮಾತ್ರ ಬಂದುಬಿಡಬೇಕು. ಬಂದೇ ತೀರಬೇಕೇ? ಆದ್ದರಿಂದ ಅವನು ರಾಜಂನ ತಕ್ಷಣ ಕೇಳಿದ : "ರಾಜಂ, ನಾನಿದ್ದೇ ತೀರಬೇಕೇನೋ ಮ್ಯಾಚಿಗೆ?"

ರಾಜಂಗೆ ಯಾಕೋ ಒಂದು ಬಗೆಯ ಸಂಶಯ ಬಂತು. "ಅಂಥ ಪ್ರಶ್ನೆಯೆಲ್ಲ ಕೇಳಬೇಡ" ಎಂದು ಸ್ವಾಮಿಯ ಬಾಯಿ ಮುಚ್ಚಿಸಿದ. ಸ್ವಲ್ಪ ಹೊತ್ತು ತಡೆದು, "ಸ್ವಾಮಿ, ನೀನಿಲ್ಲದಿದ್ದರೆ ಆಗೋದೇ ಇಲ್ಲ, ಸ್ವಾಮಿ; ನಾವೆಲ್ಲ ನಿನ್ನನ್ನೇ ನಂಬಿದ್ದೇವೆ. ನೀನೇ ನಮ್ಮ ಟೀಮಿನಲ್ಲೆಲ್ಲ ಬೆಸ್ಟ್ ಬೌಲರ್. ನೀನಿಲ್ಲದೆ ಹೋದರೆ ಆ ವೈ.ಎಂ.ಯು. ಅವರನ್ನು ಹೇಗೆ ಸೋಲಿಸೋಕ್ಕೆ ಸಾಧ್ಯ? ಸೋತು ಹೋದಿವಿ ಅಂದರೆ ನೇಣು ಹಾಕಿಕೊಂಡು ಬಿಡ್ತೀನಿ. ಲೋ, ಸ್ವಾಮಿ, ಏನು ಮಾಡಿಕೊಂಡುಬಿಟ್ಟೆಯೋ! ಸ್ಕೂಲಿಗೆ ಸೇರದೇನೆ ಹೇಗೆ

ಇರ್ತೀಯೋ?" ಎಂದು ಕೇಳಿದ.

"ಯಾವುದಾದರೂ ವರ್ಕ್‌ಷಾಪಿಗೆ ಸೇರ್‍ಕೊಂತೀನಿ."

"ಇದನ್ನು ಕೇಳಿದರೆ ನಿಮ್ಮ ತಂದೆ ಏನಂತಾರೋ?"

"ಏನಂತಾರೆ? ಏನೂ ಅನ್ನೊಲ್ಲ. ನಿನ್ನ ಇಷ್ಟ ಬಂದದ್ದು ಮಾಡು ಅಂದುಬಿಡ್ತಾರೆ."

"ಸ್ವಾಮಿ, ನಾನು ಕ್ಲಾಸಿಗೆ ಹೋಗಬೇಕು. ಹೊತ್ತಾಯಿತು." ರಾಜಂ ಎದ್ದು ಕುಣಿಕುಣಿಯುತ್ತ ಕಾಂಪೌಂಡನ್ನು ನೆಗೆದು ಒಳಗೆ ಹೋದ. "ಸ್ವಾಮೀ, ಫೀಲ್ಡಿಗೆ ಈವತ್ತು ಬೇಗನೆ ಬಾ. ಈಗ ಯಾವ ಡ್ರಿಲ್ ಕ್ಲಾಸೂ ಇಲ್ಲವಲ್ಲ......"

# ಪಲಾಯನ

ಸ್ವಾಮಿನಾಥನ ತಂದೆ ಮಾರ್ಕೆಟ್ ರಸ್ತೆಯ ತುಟ್ಟತುದಿಗೆ ಬಂದಿದ್ದರು. ಅಲ್ಲಿಂದ ಎಲ್ಲಮನ್ ಬೀದಿಯ ಕಡೆ ತಿರುಗಿದರು. ಮಾರ್ಕೆಟ್ ರಸ್ತೆಯಲ್ಲಿ ಬೇಕಾದಷ್ಟು ಬೆಳಕಿತ್ತು. ಎಲ್ಲಮನ್ ಬೀದಿಯಲ್ಲಿ ಕತ್ತಲೋ ಕತ್ತಲು. ಜನಸಂಚಾರ ಕೂಡ ಇರಲಿಲ್ಲ. ಊರಿಗೆಲ್ಲ ಅದೇ ಕಡೆಯ ಬೀದಿ. ಆ ಬೀದಿಯಲ್ಲಿ ಸ್ವಲ್ಪ ಮುಂದೆ ಹೋದರೆ ಸರಯೂ ನದಿ ಸಿಕ್ಕುತ್ತದೆ. ಕೆಲವು ಮನೆಗಳ ಮುಂದೆ ಸಣ್ಣ ಹಣತೆಗಳು ಉರಿಯುತ್ತಿವೆ. ಇವುಗಳಿಂದ ಬೆಳಕು ದೊರೆಯುವ ಬದಲು, ಸುತ್ತಲೂ ಕವಿದಿದ್ದ ಕತ್ತಲು ಮತ್ತಷ್ಟು ಕಪ್ಪಗೆ ಕಾಣುತ್ತಿದೆ.

ಸ್ವಾಮಿನಾಥನ ತಂದೆಗೆ ಬಹಳ ಅವಮಾನವಾಯಿತು. ಈ ಬೀದಿಯಲ್ಲಿ ನಡೆದುಕೊಂಡು ಹೋಗಿ, ಮರಳನ್ನು ದಾಟಿ, ಸರಯೂ ನದಿಯಲ್ಲಿ ಬಗ್ಗಿ ನೋಡಬೇಕೆಂದು ತಾನು ಹೋಗುತ್ತಿದ್ದುದು. ಏಕೆ - ತನ್ನ ಮಗನ ದೇಹಕ್ಕಾಗಿ! ತನ್ನ ಮಗ, ಸ್ವಾಮಿ. ಅವನ ದೇಹವನ್ನು ಸರಯೂ ನದಿಯಲ್ಲಿ ಹುಡುಕುವುದೆ? ಎಂಥ ದಡ್ಡ ಕೆಲಸ! ಆದರೇನು ಮಾಡುವುದು? ಮಗನ ವಿಷಯವಾಗಿ ಒಳ್ಳೆಯದೋ ಕೆಟ್ಟದೋ ಏನಾದರೂ ಒಂದು ಸಮಾಚಾರ ತೆಗೆದುಕೊಂಡು ಹೋಗದೆ ಮನೆಗೆ ಹಿಂದಿರುಗುವುದು ಹೇಗೆ? ರಾತ್ರಿ ಒಂಬತ್ತು ಗಂಟೆಯಿಂದ ಮನೆಯಲ್ಲಿ ಒಂದು ಬಗೆಯ ಸೂತಕದ ಕಳೆ ಮುಚ್ಚಿಕೊಂಡಿತ್ತು. ತಾಯಿಗೂ ಹೆಂಡತಿಗೂ ಮಂಕು ಬಡಿದುಬಿಟ್ಟಿತ್ತು. ಮನೆಯಾಕೆ ತಾಲ್ಲೂಕು ಕಛೇರಿಯಲ್ಲಿ ಹತ್ತು ಗಂಟೆ ಹೊಡೆಯುವ ವರೆಗೂ ಮನಸ್ಸನ್ನು ಬಿಗಿಯಾಗಿ ಹಿಡಿದುಕೊಂಡಿದ್ದಳು. ಆದರೆ ಹತ್ತು ಗಂಟೆ ಹೊಡೆಯಿತೋ ಇಲ್ಲವೋ ಆಕೆಯ ಮುಖ ಬಿಳುಪೇರಿಬಿಟ್ಟಿತು. "ಅವನ ಸ್ನೇಹಿತರ ಮನೆಗೋ ಮೇಷ್ಟರುಗಳ ಮನೆಗೋ ಹೋಗಿ ವಿಚಾರಿಸಿಕೊಂಡು ಬನ್ನೀಂದ್ರೆ" ಎಂದು ಆಕೆ ಹಟ ಹಿಡಿದಳು.

ಸ್ವಾಮಿಯ ಹೆಡ್‌ಮೇಷ್ಟರ ಮನೆಯಲ್ಲಿದೆಯೆಂಬುದು ಅಪ್ಪನಿಗೆ ತಿಳಿದಿರಲಿಲ್ಲ. ಬೋರ್ಡು ಸ್ಕೂಲಿನ ಹತ್ತಿರ ಹೋಗಿ ಜವಾನನನ್ನು ಕೇಳಿದರೆ ಅವನು ತಪ್ಪು ಅಡ್ರೆಸ್ ಹೇಳಿಬಿಟ್ಟ. ಆದರಿಂದ ಅಪ್ಪ ನಿಷ್ಕಾರಣವಾಗಿ ಊರೆಲ್ಲ ಅಲೆದಾಡಬೇಕಾಯಿತು. ಮಣಿಯ ಮನೆಯೂ ಸಿಕ್ಕಲಿಲ್ಲ. ರಾಜಂ ಮನೆಯ ಹತ್ತಿರ ಹೋದರು. ಎಲ್ಲರೂ ನಿದ್ದೆ ಮಾಡಿಬಿಟ್ಟಿದ್ದರು. ಒಂದಾದರೂ ದೀಪವಿರಲಿಲ್ಲ. ಅಪರಿಚಿತರ ಮನೆಗೆ ಹೋಗಿ, ನಿದ್ದೆ ಮಾಡುವವರನ್ನೆಲ್ಲ ಎಬ್ಬಿಸಿ, ತನ್ನ ಮಗನೆಲ್ಲಿ ಎಂದು ಕೇಳುವುದು ತರವಲ್ಲವೆಂದು ಸುಮ್ಮನಾಗಬೇಕಾಯಿತು. ಬಾಗಿಲ ಹತ್ತಿರ ಮಲಗಿದ್ದ ಸೆರದೀ ಜವಾನನನ್ನು ಕೇಳಲಾಗಿ

ಸ್ವಾಮಿಯು ಆ ಸಂಜೆ ರಾಜಂ ಮನೆಗೆ ಬಂದಿರಲಿಲ್ಲವೆಂದು ತಿಳಿಸಿದ. ಆಮೇಲೆ ಗೊತ್ತುಗುರಿಯಿಲ್ಲದೆ ಊರೆಲ್ಲ ಅಲೆದಾಡಿದರು ಆತ. ಹೆಂಡತಿಗೂ ತಾಯಿಗೂ ತೃಪ್ತಿಯಾಗಲೆಂದು ಈ ಅಲೆದಾಟ. ಹೆಂಡತಿಯಂತೆ ತನಗೇನೂ ಭಯವಿರಲಿಲ್ಲ. 'ಎಲ್ಲೋ ಹೋಗಿದ್ದಾನೆ, ಬರ್‍ತಾನೆ. ಬಂದಾಗ ಸ್ವಲ್ಪ ಬಲವಾಗಿ ದಬಾಯಿಸಿ ಈ ತುಂಟತನವನ್ನು ಚಿಗುರಿನಲ್ಲೇ ಜಿಗುಟಿ ಹಾಕಿದರೆ ದಾರಿಗೆ ಬರ್‍ತಾನೆ' ಎಂಬ ಧೈರ್ಯವಿತ್ತು. ಹೀಗೆ ಒಂದು ಗಂಟೆಯ ಹೊತ್ತು ಸುತ್ತಾಡಿ ಮನೆಗೆ ಹಿಂದಿರುಗಿದರು. ಮುದಿ ತಾಯಿ ತನ್ನ ಹಾಸಿಗೆಯನ್ನು ಬಿಟ್ಟು ಕುರುಡು ಕುರುಡಾಗಿ ಮನೆಯೆಲ್ಲ ಓಡಾಡುತ್ತಿದ್ದಳು. ಸ್ವಾಮಿನಾಥನನ್ನು ಸುರಕ್ಷಿತವಾಗಿ ಕರೆದುಕೊಂಡು ಬಂದರೆ ಬೇಕಾದಷ್ಟು ಒಡವೆ ಒಪ್ಪಿಸುತ್ತೇನೆಂದು ಆಕೆ ತಿರುಪತಿ ಬೆಟ್ಟದ ದೇವರಿಗೆ ಹರಕೆ ಹೊತ್ತಳು. ಹೆಂಡತಿಯಾದರೋ, ಬೀದಿಯ ಕಡೆಯೇ ನೋಡುತ್ತಾ ಕಲ್ಲು ಪ್ರತಿಮೆಯಂತೆ ಹೊಸಿಲ ಹತ್ತಿರ ನಿಂತಳು. ಮನೆಯಲ್ಲಿ ನಿಜವಾದ ಮನಶ್ಶಾಂತಿಯನ್ನನುಭವಿಸುತ್ತಿದ್ದ ವ್ಯಕ್ತಿಯೆಂದರೆ ಸ್ವಾಮಿಯ ತಮ್ಮನೊಬ್ಬನೇ. ತೊಟ್ಟಿಲಿನಿಂದ ಕ್ಲುಪ್ತವಾಗಿ ಅವನು ಉಸಿರಾಡುತ್ತಿದ್ದ ಸಣ್ಣ ಸದ್ದು ಕೇಳಿಬರುತ್ತಿತ್ತು. ಮಿಕ್ಕವರ ಆತಂಕವೂ ವ್ಯಥೆಯೂ ಆ ಮಗುವಿಗೆ ತಟ್ಟಿರಲಿಲ್ಲ.

ಸ್ವಾಮಿನಾಥನ ತಂದೆ ಮನೆಗೆ ಹಿಂದಿರುಗಿದರು. 'ಏನೂ ಸಮಾಚಾರವಿಲ್ಲ' ಎಂಬ ಸಮಾಚಾರವನ್ನು ಹೆಂಡತಿಗೆ ತಿಳಿಸುವಾಗ, ಆಕೆಯ ಮನೋವ್ಯಥೆಯನ್ನು ತಗ್ಗಿಸುವ ಉದ್ದೇಶದಿಂದ ಒಂದು ಬಗೆಯ ಒರಟು ಸಂತೋಷವನ್ನು ತಳೆದುಕೊಂಡರು. ಆದರೆ ಈ ಕೃತಕ ಸಂತೋಷ ಎಷ್ಟು ಕಾಲ ಇದ್ದೀತು? ಆ ಇಬ್ಬರು ಹೆಂಗಸರ ಕಾತರ ಆತನನ್ನೂ ಆವರಿಸಿತು. ಏನೋ ಆಗಿರಬೇಕು ತನ್ನ ಮಗನಿಗೆ - ಯಾವುದಾದರೂ ಅನಾಹುತ ಸಂಭವಿಸಿರಬೇಕು, ಇಲ್ಲದಿದ್ದರೆ ಯಾರಾದರೂ ಹೊತ್ತುಕೊಂಡು ಹೋಗಿರಬೇಕು- ಎಂಬ ಅಭಿಪ್ರಾಯ ಬಲವಾಗತೊಡಗಿತು. ಹೆಂಡತಿಯನ್ನು ಸಮಾಧಾನ ಪಡಿಸೋಣವೆಂದು ಆತ ಪ್ರಯತ್ನ ಮಾಡುತ್ತಿದ್ದಾಗ ಆಕೆ, "ಆಸ್ಪತ್ರೆಗೆ ಹೋಗಿ ನೋಡಿಕೊಂಡು ಬಂದಿರಾ?" ಎಂದು ಕೇಳಿ ಕಿಟಾರನೆ ಕಿರಿಚಿಕೊಂಡು ಬಿಕ್ಕಿಬಿಕ್ಕಿ ಅಳಲು ಮೊದಲುಮಾಡಿದಳು. ಅಪ್ಪ ಈ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದಂತಿದ್ದರು. ಆದರೂ ಅವರ ಮನಸ್ಸಿನ ಮುಂದೆ ಆಸ್ಪತ್ರೆಯಲ್ಲಿ ತಮ್ಮ ಮಗ ಕುಪ್ಪೆಯಾಗಿ ಬಿದ್ದ ಚಿತ್ರವೇ ಕಾಣಿಸುತ್ತಿತ್ತು. ಈ ಚಿತ್ರವನ್ನು ಅಳಿಸಿಬಿಡೋಣವೆಂದು ಆತ ಬಹಳ ಪ್ರಯತ್ನಪಟ್ಟರು. ಆದರೆ ಆ ವೇಳೆಗೆ ಆತನ ಮುದಿ ತಾಯಿ, "ಎಲ್ಲಿಗೆ ಹೋದ ಹೇಳಪ್ಪಾ-ಬೆಳಿಗ್ಗೆ ಏನಾದರೂ ಬೈದೆಯೇನು?" ಎಂದು ಕೇಳಿ ಆತನ ಮನಸ್ಸಿಗೆ ಇನ್ನಷ್ಟು ತೊಂದರೆಯುಂಟು ಮಾಡಿದರು. ಈ ಮಾತು ಕೇಳಿ ಆತನಿಗೆ ರೇಗಿಹೋಯಿತು. ಸ್ವಾಮಿನಾಥ ತಪ್ಪಿಸಿಕೊಂಡು ಹೋದುದಕ್ಕೆ ತಾನೇ ಕಾರಣ ಎಂದು ಇವರೆಲ್ಲ ಭಾವಿಸುತ್ತಿದ್ದಾರಲ್ಲ! ರಾತ್ರಿ ಒಂಬತ್ತು ಗಂಟೆಯಿಂದ ತಾಯಿಯೂ ಹೆಂಡತಿಯೂ ಈ ಭಾವನೆಯಿಂದಲೇ ಕೂಡಿದ್ದರು. ಆದರೆ ಬಾಯಿಬಿಟ್ಟು ಕೇಳಿದುದು ಈಗಲೇ. "ಅಮ್ಮ ನಿನ್ನಷ್ಟಕ್ಕೆ ಮಲಕ್ಕೋಮ್ಮ. ಬೆಪ್ಪುಬೆಪ್ಪಾಗಿ ಮಾತಾಡಬೇಡ, ನಿನಗಾಗಿರುವ ವಯಸ್ಸಿಗೆ ಗೌರವ ಕೊಡಬೇಕೂ ಅಂತಿದ್ದರೆ ಬಾಯಿ ಮುಚ್ಚಿಕೊಂಡಿರು."

ಎಂದು ಆಕೆಯ ಬಾಯಡಗಿಸಿಬಿಟ್ಟರು. ಬೆಳಿಗ್ಗೆಯಿಂದ ಮಗನನ್ನು ಯಾವಾಗಲಾದರೂ ಬೈದೆನೋ ಎಂದು ಜ್ಞಾಪಕ ಮಾಡಿಕೊಂಡು ನೋಡಿದರು. ಆ ಬೆಳಿಗ್ಗೆಯೆಲ್ಲ ಕಕ್ಷಿಗಾರರೊಡನೆ ಮಾತುಕಥೆಗಳಲ್ಲೇ ಕಳೆದುಬಿಟ್ಟು ಸ್ವಾಮಿಯನ್ನು ನೋಡಿ ಕೂಡ ಇರಲಿಲ್ಲ ಎನ್ನುವುದು ನೆನಪಿಗೆ ಬಂದು ಸ್ವಲ್ಪ ಸಮಾಧಾನವಾಯಿತು. ನಿನ್ನೆ ಮೊನ್ನೆಯಲ್ಲೇನಾದರೂ ನಡೆಯಿತೋ ಎಂದು ಯೋಚಿಸಿ ನೋಡಿದರು. ತಮ್ಮ ಜ್ಞಾಪಕಶಕ್ತಿ ಅಷ್ಟು ಸರಿಯಾಗಿಲ್ಲದಿರಬಹುದು. ಆದರೂ ತಮ್ಮ ನಡೆಯಲ್ಲಿ ನಿಂದಾರ್ಹವಾದುದು ಯಾವುದೂ ಕಂಡುಬರಲಿಲ್ಲ. ಹುಡುಗನ ಮನಸ್ಸು ಮುರಿದು ಅವನು ಇಂತಹ ವಿಪರೀತದ ಕೆಲಸ ಕೈಗೊಳ್ಳುವಂತೆ ಅವನನ್ನು ಯಾವ ವಿಧವಾಗಿಯೂ ನೋಯಿಸಿರಲಿಲ್ಲ. ಹನ್ನೆರಡು ಗಂಟೆಯ ಸಮಯವಾಗುತ್ತ ಬಂತು. ಹೆಂಡತಿ ಇನ್ನೂ ಅಳುತ್ತಿದ್ದಳು. ಆಕೆಯನ್ನು ಸಮಾಧಾನಪಡಿಸಲು ಅಪ್ಪ ಪ್ರಯತ್ನಿಸಿ ನೋಡಿದರು. ಸಫಲವಾಗಲಿಲ್ಲ. ಮತ್ತೆ ಹೊರಟರು. "ಹುಡುಗನ್ನ ಹುಡುಕಿಕೊಂಡು ಬರೋಕೆ ಹೊರಟೆ. ನಾನು ಬರೋದರೊಳಗಾಗಿ ಅವನೇನಾದರೂ ಬಂದರೆ, ನಾನೆಲ್ಲಿಗೆ ಹೋಗಿದ್ದೀನಿ ಎಂತ ತಿಳಿಸಬೇಡ" ಎಂದರು.

ಆಸ್ಪತ್ರೆಯ ರಸ್ತೆಯಲ್ಲಿ ಆತ ಸರಸರನೆ ನಡೆದುಕೊಂಡು ಹೊರಟರು. ಆದರೆ ಅಲ್ಲಿಯ ಎತ್ತರವಾದ ಕಬ್ಬಿಣದ ಬಾಗಿಲುಗಳನ್ನು ನೋಡುತ್ತ ಸ್ವಲ್ಪ ಹೊತ್ತು ನಿಂತಿದ್ದು ಹಿಂದಿರುಗಿಬಿಟ್ಟರು. ಆದರೊಳಗೆ ಹೋಗಬೇಕಾದುದು ಅನಾವಶ್ಯಕ ಎಂದು ತಮಗೆ ತಾವೇ ಸಬೂಬು ಹೇಳಿಕೊಂಡರು. ಆದರೆ ನಿಜವಾಗಿಯೂ ಒಳಗೆ ಹೋಗಲು ಧೈರ್ಯವಿಲ್ಲವೆಂಬುದು ತಮಗೆ ಗೊತ್ತು. ಮಹಡಿಯ ಮೇಲೆ ಮೂಲೆಯಲ್ಲಿ ಒಂದು ಕಿಟಕಿಯಿಂದ ಬೆಳಕು ಕಾಣಿಸುತ್ತಿದೆಯಲ್ಲ, ಆ ಕಿಟಕಿಯ ಕೆಳಗಿರುವ ಮಂಚದ ಮೇಲೆಯೆ ಇರಬಹುದು ಸ್ವಾಮಿನಾಥನ ಕಳೇಬರ! ಎಷ್ಟು ಬ್ಯಾಂಡೇಜುಗಳಿರುತ್ತವೋ ಏನೋ! ಸುತ್ತಮುತ್ತಲ ರಸ್ತೆಗಳಲ್ಲೂ ಸಂದುಗಳಲ್ಲೂ ಸ್ವಲ್ಪ ಹೊತ್ತು ಸುತ್ತಾಡಿದರು. ಒಂದೊಂದು ಗಂಟೆ ಕಳೆದಂತೆಲ್ಲ ಹೃದಯ ಭಾರವಾಗುತ್ತಿತ್ತು. ಮಾರ್ಕೆಟ್ ರಸ್ತೆಯನ್ನೂ ದಾಟಿ ಈಗ ಎಲ್ಲಮನ್ ಬೀದಿಯನ್ನು ಪ್ರವೇಶಿಸಿದ್ದರು.

ಆ ರಸ್ತೆಯನ್ನೂ ಬೇಗ ಬೇಗ ದಾಟಿ, ನದಿಯ ಕಡೆಗೆ ಹೊರಟರು. ನದಿ ಸಮೀಪಿಸಿದಂತೆಲ್ಲ ನಡೆ ನಿಧಾನವಾಯಿತು. ತಾನು ಮಾಡುತ್ತಿರುವುದು ಬರೀ ಒಂದು ಕಪಟ, ಬರೀ ನಾಟಕ ಎಂದು ತಮ್ಮ ಮನಸ್ಸನ್ನು ಒಪ್ಪಿಸಲು ಪ್ರಯತ್ನಿಸಿ ನೋಡಿದರು........ಆದರೆ ನೀರಿನಲ್ಲಿ ನೆನೆದು ಬಾತುಕೊಂಡು ಆಕಾರ ಕೆಟ್ಟು ತನ್ನ ಮಗನ ದೇಹ ತೇಲಿಕೊಂಡು ಬಂದು, ಜೊಂಡುಹುಲ್ಲಿನ ನಡುವೆ ಸಿಕ್ಕಿಕೊಂಡು ಬಿದ್ದಿದ್ದರೆ...............ಕಣ್ಣನ್ನು ಬಿಗಿಯಾಗಿ ಮುಚ್ಚಿಕೊಂಡು, "ದೇವರೇ, ಕಾಪಾಡಪ್ಪಾ" ಎಂದು ಪ್ರಾರ್ಥನೆ ಸಲ್ಲಿಸಿದರು.

ಸುಮಧುರ ಸಂಗೀತದೊಡನೆ ಹರಿದುಹೋಗುತ್ತಿದ್ದ ನದಿಯ ದಡವನ್ನು ಸ್ವಾಮಿಯ ತಂದೆ ಒಂದು ಸಲ ಪರೀಕ್ಷಿಸಿದರು. ನದಿಯ ಕಡೆಗೆ ವಾಲುಕೊಂಡಿದ್ದ ಆ ಭಾರಿಯ ಅರಳಿ

ಮರಗಳು ರಾತ್ರಿಯ ಕಡೆ ನೋಡಿ ನಿಟ್ಟುಸಿರುಗರೆಯುತ್ತಿದ್ದವು. ಯಾವುದೋ ಒಂದು ಮರದ ಕೊಂಬೆಯ ನೆರಳು ನೀರಿನ ಮೇಲೆ ಬಿದ್ದುದನ್ನು ಕಂಡು ಆತ ಬೆಚ್ಚಿಬಿದ್ದರು. ಯಾವುದೋ ಮರದ ತುಂಡು ಸೋಪಾನದ ಮೆಟ್ಟಲಿಗೆ ತಗಲಿದಾಗ ಉಂಟಾದ ಶಬ್ದವನ್ನು ಕೇಳಿ ಎದೆ ಇನ್ನೊಮ್ಮೆ ಜಲ್ಲೆಂದಿತು.

ಇದೆಲ್ಲ ಬರಿಯ ನಟನೆ, ತಾನೊಬ್ಬ ದಡ್ಡ ಎಂದು ಹೇಳಿಕೊಳ್ಳುತ್ತ, ರೈಲ್ವೆ ಸ್ಟೇಷನ್ ಬಳಿ ಹೋಗಿ, ರೈಲ್ವೆ ಪಕ್ಕದಲ್ಲೇ ಒಂದು ಒಂದೂವರೆ ಮೈಲಿ ನಡೆದುಕೊಂಡು ಹೋದರು. ಕಂಬಿಗಳನ್ನೂ ಮರದ ಪಟ್ಟಿಗಳನ್ನೂ ಬಹಳ ಜಾಗರೂಕತೆಯಿಂದ ಪರೀಕ್ಷಿಸುತ್ತಿದ್ದರು. ರಾತ್ರಿವೇಳೆಯ ಕ್ರಿಮಿಕೀಟ ಬಿಡುವಿಲ್ಲದೆ ಮಾಡುತ್ತಿದ್ದ ಸದ್ದುಗಳು, ಬಾವಲಿಗಳ ಹಾರಾಟ ಸದ್ದು; ಕಪ್ಪೆಗಳ ವಟಗುಟ್ಟಾಟ, ಇವೆಲ್ಲವೂ ರಾತ್ರಿಯ ಮೌನವನ್ನು ಮತ್ತಷ್ಟು ಭೀಕರವಾಗಿ ಮಾಡುತ್ತಿದ್ದವು. ಒಂದು ಕಡೆ ಕಂಬಿಯ ಮೇಲೆ ತೇವವಿದ್ದ ಹಾಗೆ ಕಂಡಿತು. ಕೆಳಕ್ಕೆ ಬಗ್ಗಿ ಬೆರಳನ್ನು ಅದ್ದಿ, ಅದನ್ನು ಮೇಲಕ್ಕೆತ್ತಿ ನಕ್ಷತ್ರಗಳ ಬೆಳಕಿನಲ್ಲಿ ಪರೀಕ್ಷಿಸಿ ನೋಡಿದರು. ಬರೇ ನೀರು, ರಕ್ತವಲ್ಲ ಸದ್ಯ. ದೊಡ್ಡದಾಗಿ ನಿಟ್ಟುಸಿರು ಬಿಟ್ಟು ದೇವರಿಗೆ ಕೈಮುಗಿದರು.

# ಮಹಾದಿನ

ಟ್ರಂಕ್ ರೋಡಿನ ಎಡಗಡೆಗೆ ಒಂದು ರಸ್ತೆ ಕವಲೊಡೆದು ಹೋಗುತ್ತಿತ್ತು. ಆ ರಸ್ತೆಯ ಎರಡು ಪಕ್ಕಗಳಲ್ಲೂ ಹಣ್ಣಿನ ಮರಗಳು ಬೆಳೆದಿದ್ದವು. ಆದುದರಿಂದ ಸ್ವಾಮಿನಾಥನಿಗೆ ಅದರ ಮೇಲೆ ಖಾಯಿಷಿಯಾಯಿತು. ಚೆಂಡಿನಂತೆ ಕಾಣುವ ಬೇಲದ ಹಣ್ಣಿನ ಮರಗಳೇನು, ಅತ್ತಿಯ ಮರಗಳೇನು, ನೇರಳೆ ಮರಗಳೇನು-ಇವನ್ನೆಲ್ಲ ನೋಡಿ ಸ್ವಾಮಿಯ ಬಾಯಲ್ಲಿ ನೀರೂರಿತು. ಆ ರಸ್ತೆಯಲ್ಲಿ ಒಂದು ಮೈಲಿಯಷ್ಟು ದೂರ ನಡೆದುಹೋದ. ಆಮೇಲೆ ಅದು ಅವನ ಮನಸ್ಸಿಗೆ ಹಿಡಿಸಲಿಲ್ಲ. ಮೌನವಾಗಿ ಜನಶೂನ್ಯವಾಗಿತ್ತು ಆ ರಸ್ತೆ. ಟ್ರಂಕ್ ರೋಡ್ ವಾಸಿ. ಅಲ್ಲಾದರೆ ಜನ ಓಡಾಡುತ್ತಾರೆ; ಒಂದೆರಡು ಹಳ್ಳಿಯ ಬಂಡಿಗಳು ಹಾದು ಹೋಗುತ್ತವೆ; ಹಾಸಿಗೆಗಳನ್ನೂ ಪೆಟ್ಟಿಗೆಗಳನ್ನೂ ಹಿಂದುಗಡೆ ಬಿಗಿದು ಕಟ್ಟಿರುವ ಮೋಟಾರು ಕಾರು ಆಗಾಗ ಸರ್ರೆಂದು ದಾಟಿಹೋಗಿ ದೂಳಿನ ಮೋಡದಲ್ಲಿ ಮಾಯವಾಗುತ್ತದೆ. ಇಲ್ಲದೆ ಹೋದರೆ, ರೈತರು ಗುಂಪುಗಟ್ಟಿಕೊಂಡು ರಸ್ತೆಯ ಅಂಚಿನಲ್ಲಿ ನಡೆದುಹೋಗುತ್ತಾರೆ. ಆದರೆ ಈ ರಸ್ತೆ ಹಾಳು ಬಿದ್ದಿದೆ. ಇದರ ಗಾಢ ನೀರವತೆಯನ್ನು ಸಹಿಸುವುದು ಅಸಾಧ್ಯ. ಅಲ್ಲದೆ, ಮನೆ ಬಿಟ್ಟು ಬಹಳ ಕಾಲವಾಗಿ ಹೋಗಿ, ಮನೆಯನ್ನು ಸೇರಿಕೊಂಡರೆ ಸಾಕೆಂದು ಗೀಳು ಹುಟ್ಟಿಬಿಟ್ಟಿದೆ.

ಮನೆಯ ಯೋಚನೆ ಹುಟ್ಟಿ ಸ್ವಾಮಿಗೆ ಮಿಕ್ಕದ್ದೆಲ್ಲ ಮರೆತು ಹೋಯಿತು. ಅಡಿಗೆಯವನು ಎಷ್ಟೆಷ್ಟು ರುಚಿರುಚಿಯಾದ ತಿಂಡಿ ಮಾಡಿರುತ್ತಾನೋ ಏನೋ! ಮೊಸರನ್ನು ಅಮ್ಮ ಯಾವಾಗಲೂ ತಾನೇ ಬಡಿಸುತ್ತಾಳಲ್ಲ, ಅವನ್ನು ಮರೆಯಲು ಸಾಧ್ಯವೇ? ಎಲೆಯ ಮುಂದೆ ತಾನು ಕೂತಿರಬೇಕು, ಸಾರು ಅನ್ನ ತಿಂದು ಮುಗಿದಿರಬೇಕು, ಅಮ್ಮ ಬೀರುವಿನ ಹತ್ತಿರ ಹೋಗಿ ಬಾಗಿಲ ತೆರೆಯಬೇಕು, ಅಲ್ಯೂಮಿನಿಯಂ ಡಬರಿ ಎತ್ತಿ ಕೆಳಗಿಡಬೇಕು, ತಪ್ಪಲೆಯಲ್ಲಿ ಬೆಳ್ಳಿಯ ಬಟ್ಟಲನ್ನು ಅದ್ದಿ ಮೊಸರನ್ನು ತನಗೆ ಬಡಿಸಬೇಕು. ಹಾ! ಅನ್ನದ ಗುಡ್ಡೆಯ ಮೇಲೆ ಸದ್ದು ಮಾಡದೆ ಎಷ್ಟು ನಯವಾಗಿ ಬೀಳುತ್ತೆ ಆ ಮೊಸರು!..........ಹೊಟ್ಟೆ ತಾಳಹಾಕುತ್ತಿದೆ. ಭಯಂಕರವಾದ ಹಸಿವು ಕಿತ್ತು ತಿನ್ನುತ್ತಿದೆ. ನಡೆದು ನಡೆದು ತೊಡೆಯೆಲ್ಲ ಭಾರವಾಗಿಬಿಟ್ಟಿದೆ. ಸೊಂಟ ಕೂಡ ನೋಯತೊಡಗಿದೆ. ಸೂರ್ಯನ ಕಿರಣಗಳು ಪಶ್ಚಿಮ ದಿಕ್ಕಿನಿಂದ ಓರೆಯಾಗಿ ಬೀಳುತ್ತಿವೆ. ಹಕ್ಕಿಗಳು ಆಗಲೇ ಗೂಡಿನ ಕಡೆಗೆ ಹಿಂದಿರುಗುತ್ತಿವೆ. ಆದರೆ ಸ್ವಾಮಿ ಇದನ್ನು ಗಮನಿಸಲಿಲ್ಲ.

ಹಸಿವನ್ನು ತಡೆಯುವುದಕ್ಕಾಗದೆ ಹೋಯಿತು. ಕಲ್ಲು ತೆಗೆದುಕೊಂಡು ಅತ್ತಿಯ ಮರಕ್ಕೆ ಬೀರಿದ. ಉದುರಿದ ಹಣ್ಣುಗಳನ್ನು ತಿಂದ. ಹತ್ತಿರವೇ ಸಣ್ಣದೊಂದು ತಿಳಿನೀರಿನ ಕೊಳವಿತ್ತು.

ಕೊಂಚ ಹೊತ್ತು ದಣಿವಾರಿಸಿಕೊಂಡು ಮನೆಯ ಕಡೆ ಹೊರಟ. ಅವನ ಯೋಚನೆಯೆಲ್ಲ ಮನೆಯ ಮೇಲೆಯೇ. ಎಲ್ಲಕ್ಕಿಂತ ಮನೆಯೇ ಮುಖ್ಯ-ಮಿಕ್ಕದ್ದೆಲ್ಲ ಅಮುಖ್ಯ. ಬೋರ್ಡ್ ಹೈಸ್ಕೂಲಿನಲ್ಲಿ ನಡೆದ ಸಂಗತಿ ಹುಲ್ಲು ಕಡ್ಡಿಯಂಥದು. ಅದನ್ನು ಅಷ್ಟು ದೊಡ್ಡದಾಗಿ ಭಾವಿಸಿ ಇಷ್ಟೆಲ್ಲ ರಗಳೆ ಪಟ್ಟುಕೊಳ್ಳಬೇಕಾಗಿತ್ತೆ? ಎಂಥ ಪೆದ್ದು ಮೂದೇವಿ, ತಾನು! ಹೆಡ್‌ಮೇಷ್ಟರು ಕೈ ಹಿಡಿ ಎಂದಾಗ ಬಾಯಿ ಮುಚ್ಚಿಕೊಂಡು ಕೈ ನೀಡಿಬಿಟ್ಟಿದ್ದರೆ ಚೆನ್ನಾಗಿತ್ತಲ್ಲ ಎಂದು ಪರಿಪರಿಯಾಗಿ ಹಂಬಲಿಸಿದ. ಒಂದು ವೇಳೆ ಹಾಗೆ ಮಾಡದೆ ಹೋಗಿದ್ದರೂ, ನೇರವಾಗಿ ಮನೆಗಾದರೂ ಹೋಗಿ ಅಪ್ಪನಿಗೆ ಎಲ್ಲವನ್ನೂ ಹೇಳಿಬಿಡಬೇಕಾಗಿತ್ತು. ಅಪ್ಪ ಏನು ಮಾಡಿರುತ್ತಿದ್ದರು, ಮಹಾ? ಒಂದಷ್ಟು ಬೈಯುತ್ತಿದ್ದರು. ಹೆಚ್ಚು ಬೈದರೆಂದರೆ, ಗೊತ್ತೇ ಇದೆ, ಅಮ್ಮ ಅಜ್ಜಿ ಇಬ್ಬರೂ ವಹಿಸಿಕೊಳ್ಳುತ್ತಾರೆ. ಎಷ್ಟು ಬೇಕಾದರೂ ಬೈಸಿಕೊಳ್ಳಬಹುದು. ಅಪ್ಪನಿಗೆ ಎಷ್ಟೇ ಆಗಲಿ ತನ್ನ ಮೇಲೆ ಪ್ರೀತಿಯಿಲ್ಲವೆ? ಎಂಥಾ ಕಷ್ಟದಿಂದಾಗಲಿ ಪಾರು ಮಾಡುವ ಶಕ್ತಿಯಿಲ್ಲವೆ, ಅಪ್ಪನಿಗೆ? ಅಪ್ಪನನ್ನು ಕಂಡರೆ ಜನರಿಗೆ ಎಷ್ಟು ಭಯ! ಮ್ಯಾಚು ಇನ್ನೆರಡೇ ದಿನವಿದೆಯೆನ್ನುವಾಗ ಹೀಗೆಲ್ಲ ಪೆದ್ದುಪೆದ್ದಾಗಿ ಕುಣಿಯುವುದೇ! ಮ್ಯಾಚಿನಲ್ಲಿ ಸೋತುಹೋದರೆ ರಾಜಂ ಏನು ಮಾಡಿಕೊಳ್ಳುತ್ತಾನೋ ಯಾರು ಹೇಳಬಲ್ಲರು!

ಹೀಗೆ ಯೋಚನೆ ಮಾಡುತ್ತ ಸ್ವಾಮಿನಾಥ ಟ್ರಂಕ್ ರೋಡಿನ ಕಡೆ ಬರುತ್ತಿದ್ದ. ಇನ್ನೇನು ಟ್ರಂಕ್ ರೋಡು ಸಿಕ್ಕಿಬಿಡುತ್ತದೆ. ಅಲ್ಲಿಂದ ನೇರವಾಗಿ ಹೋದರೆ ಮಾರ್ಕೆಟ್ ರಸ್ತೆ ಸಿಗುತ್ತದೆ. ಮಾರ್ಕೆಟ್ ರಸ್ತೆಯಿಂದ ಕಣ್ಣು ಕಟ್ಟಿಕೊಂಡು ಬೇಕಾದರೂ ಮನೆ ಸೇರಿಕೊಳ್ಳಬಹುದು. ಯಾಕೆ ಇಷ್ಟು ಲೇಟಾಗಿ ಬಂದೆ ಎಂದು ಅಮ್ಮ ಅಪ್ಪ ಸ್ವಲ್ಪ ಗದರಿಸಬಹುದು. ದಾರಿ ತಪ್ಪಿ ಹೋಯಿತು ಎಂದು ಹೇಳಿದರೆ ತೀರಿತು. ಅವರು ನಂಬದೆ ಹೋಗಬಹುದು. ಪಠಾಣರು ಹೊತ್ತುಕೊಂಡು ಹೊರಟುಹೋದರು; ತುಂಬ ಕಷ್ಟಪಟ್ಟು ಕಾದಾಡಿ ತಪ್ಪಿಸಿಕೊಂಡು ಬಂದೆ ಅಂತ ಯಾಕೆ ಹೇಳಬಾರದು?..........ಆಗಲೇ ಟ್ರಂಕ್ ರೋಡ್ ಸಿಕ್ಕಿಬಿಡಬೇಕಾಗಿತ್ತು. ಇನ್ನೂ ಸಿಕ್ಕಲಿಲ್ಲವಲ್ಲ, ಏಕೆ? ಸ್ವಲ್ಪ ನಿಂತು ಸುತ್ತಮುತ್ತ ನೋಡಿದ. ಇನ್ನೂ ಎರಡು ಪಕ್ಕಗಳಲ್ಲೂ ಸಾಲು ಮರಗಳು ಕಾಣಿಸಿತು. ಯಥಾ ಪ್ರಕಾರ ಅತ್ತಿಯ ಮರಗಳು, ನೇರಳೆ ಮರಗಳು, ಬೇಲದ ಮರಗಳು. ರಸ್ತೆಯ ತುಂಬ ಮುದಿಯೆಲೆಗಳು, ಹೀಚುಗಳು, ಕೊಳೆತ ಹಣ್ಣುಗಳು ಮುಚ್ಚಿಕೊಂಡಿದ್ದವು. ಬರುವಾಗ ಇದ್ದುದಕ್ಕಿಂತ ಹೋಗುವಾಗ ಹೆಚ್ಚು ಉದ್ದವಾಗಿದ್ದಂತೆ ಕಾಣುತ್ತದಲ್ಲ ಈ ರೋಡು?

ವಾಸ್ತವಾಗಿ ನಡೆದಿದ್ದ ಸಂಗತಿ ಇದು : ಈ ರಸ್ತೆಯಿಂದ ಇನ್ನೊಂದು ಕವಲೊಡೆದು ಮೆಂಪಿ ಕಾಡಿಗೆ ಹೋಗುತ್ತಿತ್ತು. ಸ್ವಾಮಿ ಅರಿಯದೆ ಈ ರಸ್ತೆಗೆ ಬಂದುಬಿಟ್ಟಿದ್ದ. ಈ ರಸ್ತೆಯಲ್ಲಿ ಎಪ್ಪತ್ತು ಮೈಲಿಗಳು ನಡೆದು ಹೋದರೆ ಮೆಂಪಿ ಕಾಡು ಸಿಕ್ಕುತ್ತಿತ್ತು. ಈ

ಡೊಂಕು ರಸ್ತೆಗೆ ಹೋಗದಿದ್ದರೆ ಸ್ವಾಮಿ ಎಷ್ಟೋ ಮುಂಚೆಯೇ ಟ್ರಂಕ್ ರೋಡನ್ನು ಸೇರಿಬಿಟ್ಟಿರುತ್ತಿದ್ದ.

ಇದ್ದಕ್ಕಿದ್ದಂತೆ ರಾತ್ರಿ ಕವಿಯಿತು. ಸ್ವಾಮಿಯ ಎದೆ ಬೇಗ ಬೇಗ ಮಿಡಿಯತೊಡಗಿತು. ಟ್ರಂಕ್ ರೋಡನ್ನು ಇನ್ನೂ ತಲಪಿಲ್ಲವೆಂದು ತಿಳಿದು ಅವನ ಗಂಟಲು ಒಣಗಿಹೋಯಿತು. ಸಾಲು ಮರಗಳು ಇನ್ನೂ ದಟ್ಟವಾಗಿಯೇ ಇದ್ದವು. ರಸ್ತೆ ಮಾತ್ರ ಇಕ್ಕಟ್ಟಾಗಿಯೇ ಇತ್ತು. ಟ್ರಂಕ್ ರೋಡು ಇದಕ್ಕಿಂತ ಅಗಲ. ಅಲ್ಲದೆ, ಅದರ ಮೇಲೆ ಇಲ್ಲಿಯ ಹಾಗೆ ಮರದ ರೆಂಬೆಗಳು ಮುಚ್ಚಿಕೊಂಡಿರಲಿಲ್ಲ. ಆಕಾಶ ಕಾಣುತ್ತಿತ್ತು. ಆದರೆ ಈ ರಸ್ತೆಯಲ್ಲಿ ತಲೆಯೆತ್ತಿ ನೋಡಿದರೆ ಆಕಾಶವೇ ಕಾಣಿಸದು. ಅಲ್ಲಲ್ಲಿ ಒಂದೊಂದು ಕಡೆ ಎಲೆಗಳ ನಡುವೆ ಎರಡೋ ಮೂರೋ ನಕ್ಷತ್ರಗಳು ಕಾಣಿಸುವುವು. ತೀರ ಆಯಾಸವಾಗಿದ್ದರೂ ನಡೆಯ ವೇಗವನ್ನು ಹೆಚ್ಚು ಮಾಡಿದ. ಒಂದಷ್ಟು ದೂರ ಓಡಿದ. ರಸ್ತೆಯಲ್ಲಿ ಬಿದ್ದಿದ್ದ ತರಗೆಲೆಗಳ ಮೇಲೆ ಹೆಜ್ಜೆಯಿಟ್ಟರೆ ಕರಕರಕರಾ ಎಂದು ಶಬ್ದವಾಗುತ್ತಿತ್ತು. ಮರದ ಮೇಲೆ ಮನೆಮಾಡಿಕೊಂಡಿದ್ದ ಹಕ್ಕಿಗಳು ಈ ಸದ್ದಿಗೆ ಎಚ್ಚೆತ್ತು ಬಡಬಡನೆ ರೆಕ್ಕೆ ಬಡಿದುಕೊಂಡು ಕೂಗುತ್ತಿದ್ದವು. ಮೊದಲೇ ಕಗ್ಗತ್ತಲೆ, ರುದ್ರಮೌನ. ಅದರ ನಡುವೆ ಈ ಹಕ್ಕಿಗಳ ರೆಕ್ಕೆ ಬಡಿತದ ಸದ್ದು ಬಹಳ ಕರ್ಕಶವಾಗಿ ಕೇಳುತ್ತಿತ್ತು. ಸ್ವಾಮಿಗೆ ಭಯವಾಯಿತು. ಅಲ್ಲಾಡದೆ ನಿಂತು ಬಿಟ್ಟ. ಆದರೆ ಟ್ರಂಕ್ ರೋಡನ್ನು ಸೇರಲೇಬೇಕಲ್ಲ. ಇಲ್ಲದಿದ್ದರೆ ಮನೆ ತಲಪುವುದು ಹೇಗೆ? ಟ್ರಂಕ್ ರೋಡಿಗೆ ಸೇರುವ ಹೊತ್ತಿಗೆ ಹನ್ನೆರಡು ಗಂಟೆಯಾದರೂ ಪರವಾ ಇಲ್ಲ. ಎದೆಗುಂದಬೇಕಾದುದಿಲ್ಲ, ವಿಶಾಲವಾಗಿದೆ, ಅಕ್ಕಪಕ್ಕದಲ್ಲಿ ಮರಗಳಿಲ್ಲ, ಮೇಲೆ ಆಕಾಶ ಕಾಣಿಸುತ್ತದೆ. ಆದುದರಿಂದ ಟ್ರಂಕ್ ರೋಡಿನಲ್ಲಿ ಏನು ಭಯ? ಆದರೆ ಈ ಹಾಳು ರಸ್ತೆಯ ಮೇಲೆ ಮರದ ಕೊಂಬೆಗಳು ಒಂದಕ್ಕೊಂದು ಹೆಣೆದುಕೊಂಡು ಯಾವುದೋ ಪೆಡಂಭೂತದ ಕರಿಯ ಗುಹೆಯಂತೆ ಕಾಣುತ್ತಿವೆ.

ಹಕ್ಕಿಗಳ ಸದ್ದು ಅಡಗಿತು. ಸ್ವಾಮಿ ಮತ್ತೆ ಹೊರಟ. ಓಡಿಹೋಗಬೇಕೆಂದು ಮನಸ್ಸು. ಆದರೆ ಪಕ್ಷಿಗಳು ಮತ್ತೆ ಎಲ್ಲಿ ಎಚ್ಚರಗೊಳ್ಳುತ್ತವೋ ಎಂಬ ಭಯದಿಂದ ಬಹಳ ಹುಷಾರಾಗಿ ಹೆಜ್ಜೆಯಿಟ್ಟ. ಓಡಿಹೋಗು, ಬೇಗ ಮನೆ ಸೇರಿಕೋ, ಎಂದು ಒಂದು ಮನಸ್ಸು ಹೇಳುತ್ತಿದೆ. ಬೇಡ, ಹುಷಾರಾಗಿ ಇರು, ಎಂದು ಇನ್ನೊಂದು ಮನಸ್ಸು ಹೇಳುತ್ತಿದೆ. ಇವೆರಡರ ತುಯ್ದಾಟ ಬಹಳ ತೀವ್ರವಾಗಿತ್ತು. ಬಲವೆಲ್ಲ ಬಿಟ್ಟು ಓಡಿಹೋಗಬೇಕೆಂಬ ಬಲವಾದ ಆಸೆಯನ್ನು ಅದುಮಿಟ್ಟಿಕೊಂಡು, ಮೆಲ್ಲಗೆ, ಸದ್ದಾಗದಂತೆ, ನಡೆಯುವುದನ್ನು ತಡೆಯಲಾರದೆ ಮೈಯ ಪ್ರತಿ ನರವೂ ಅಲ್ಲಾಡತೊಡಗಿತು. ಒಂದು ಬೆಟ್ಟದಿಂದ ಇನ್ನೊಂದು ಬೆಟ್ಟಕ್ಕೆ ಪುಸಕಲು ಹಗ್ಗವೊಂದನ್ನು ಕಟ್ಟಿ, ಭಾರಿಯ ಬಿರುಗಾಳಿ ಬೀಸುವಾಗ ಆ ಹಗ್ಗದ ಮೇಲೆ ನಡೆದುಕೊಂಡು ಹೋದರೆ ಹೇಗೋ ಹಾಗಾಗುತ್ತಿತ್ತು.

ಕಿವಿಗಳು ಅಸಾಧಾರಣ ಸೂಕ್ಷ್ಮವಾದವು. ಏನೇನು ಶಬ್ದವಾಗಲಿ ಎಲ್ಲ ಕೇಳುವುದು. ತಾನು ಹೆಜ್ಜೆಯಿಟ್ಟಾಗ ಪ್ರತಿಯೊಂದು ಎಲೆ ಅಲುಗಿದುದೂ ಇವನಿಗೆ ಕೇಳಿಸುವುದು.

ಹೆಜ್ಜೆಯ ಸದ್ದು - ನೆಲದ ಮೇಲೆ ಒಣಗಿದ ಎಲೆಗಳು ಬಿದ್ದಿದ್ದರೆ ಒಂದು ಬಗೆ, ಕಡ್ಡಿಯ ತುಂಡುಗಳು ಬಿದ್ದಾಗಲೇ ಒಂದು ಬಗೆ, ಹಸುರೆಲೆಗಳು ಬಿದ್ದಿತ್ತೆಂದರೆ ಒಂದು ಬಗೆ, ಹಣ್ಣೆಲೆಗಳು ಬಿದ್ದಿದ್ದರಿನ್ನೊಂದು ಬಗ. ಕೆಲವು ಕಡೆ ಬರಿಯ ಭೂಮಿ ಸಿಗುವುದು. ಆಗ ಹೆಜ್ಜೆಯ ಸದ್ದು ದಪ್ ದಾಪ್, ದಪ್ ದಾಪ್ ಎಂದು ಕೇಳಿಸುವುದು. ದಪ್ ದಾಪ್, ದಪ್ ದಾಪ್. ಒಂದೇ ಶ್ರುತಿ, ಒಂದೇ ಸ್ವರ. ಏನೇನು ಸದ್ದಾಗಲಿ ಎಲ್ಲವೂ ಇವನ ಕಿವಿಯನ್ನು ಹೊಗುವುದು. ಕೆಲ ಕಾಲ ಇವನಿಗೆ ಬೇರೇನೂ ಕೇಳಿಸಲೇ ಇಲ್ಲ. ದಪ್ ದಾಪ್ - ದಪ್ ದಾಪ್ - ದಪ್-ದಪ್-ಸ್ರ್‌ರ್. ಈ ಸದ್ದುಗಳೆಲ್ಲ ಕೊನೆ ಮೊದಲಿಲ್ಲದೆ ಇವನ ಮಿದುಳಿನೊಳಕ್ಕೆ ನುಗ್ಗಿದವು. ಯಾವುದೋ ಒಂದು ಭಯಂಕರ ಬಲಿಗೆ ಬಾರೆಂದು ಯಾರೋ ಅನಿಷ್ಟದೇವತೆ ಪಿಸುಗುಟ್ಟಿದಂತಿತ್ತು. ತನ್ನ ಹೆಸರನ್ನು ಸ್ಪಷ್ಟವಾಗಿ ಯಾರೋ ಉಚ್ಚರಿಸುತ್ತಿದ್ದರು. ಅದರಲ್ಲಿ ಸಂದೇಹವೇ ಇರಲಿಲ್ಲ. "ಸ್ವಾಮಿ ಸ್ವಾಮಿ.......ಸ್ವಾಮಿ.........ಸ್ವಾಮಿ........ಸ್ವಾಮಿ......." ಎನ್ನುತ್ತಿತ್ತು ಆ ದನಿ. ಹೌದು ಬಲಿಕೊಡುವುದಕ್ಕಾಗಿಯೇ ಕರೆಯುತ್ತಿದ್ದುದು. ಯಾವುದೋ ಭೂತ ಸದ್ದಾಗದಂತೆ ಬೆನ್ನ ಹಿಂದೆಯೇ ಬಂದು ಒಂದೇ ಮಾತನ್ನು ತನ್ನ ಕಿವಿಯ ಒಳಗೆ ಪಿಸುಗುಟ್ಟುತ್ತಿತ್ತು. ನಿಂತು ಹಿಂದಿರುಗಿ ನೋಡಿದ. ಆ ಭಾರಿಯ ಭೂತ ನಾಲ್ಕು ಕಾಲ ಮೇಲೆ ನಿಂತು ಹೊಂಚುಕಾಯುತ್ತಿತ್ತು. ಅದರ ಭಾರಿಯ ಕಾಲುಗಳು ದೂರ ದೂರದಲ್ಲಿದ್ದವು. ಕೈಗಳನ್ನು ಆ ಭೂತ ತಲೆಯ ಮೇಲಿಟ್ಟುಕೊಂಡಿತ್ತು. ಅಗೋ! ತಲೆಯಲ್ಲಾಡಿಸಿತು. ಸ್ವಾಮಿ ಅದರ ಕಡೆ ನೋಡುತ್ತ ನಿಂತ. ಕಣ್ಣು ಹೊರಳಿಸಲಿಲ್ಲ. ಬೇರೆ ಕಡೆ ನೋಡಿದರೆ ಎಲ್ಲಿ ಹಾರಿಬಿಡುತ್ತದೋ ತನ್ನ ಮೇಲೆ! ಕಂಬದಂತೆ ನಿಂತಲ್ಲೇ ನಿಂತ. ತಾನು ಹಿಂದಕ್ಕೆ ತಿರುಗಿ ನೋಡಿದ ತಕ್ಷಣವೇ ಆ ಭೂತವು ಪಿಸುಗುಟ್ಟುವುದನ್ನೇಕೆ ನಿಲ್ಲಿಸಿಬಿಟ್ಟಿತು? ಅದರ ಕಡೆಯೇ ನೋಡುತ್ತಿದ್ದ. ಹೀಗೆ ಐದು ನಿಮಿಷಗಳು ನಿಂತಿರಬಹುದು. ಭೀತಿಯ ಪ್ರಥಮ ಪ್ರವಾಹ ಹರಿದು ಹೋದಮೇಲೆ, ಇನ್ನಷ್ಟು ಗಮನಿಸಿ ನೋಡುತ್ತಾನೆ ; ದೊಡ್ಡ ಮರಗಳ ಕೊಂಬೆಗಳು ಕಾಂಡಗಳು, ಅಷ್ಟೇ.

ತನ್ನ ಹಾದಿ ಹಿಡಿದು ಮುಂದೆ ನಡೆದ. ಇನ್ನೇನು ಟ್ರಂಕ್ ರೋಡು ಇನ್ನೊಂದು ಗಜದಲ್ಲೇ ಇರಬೇಕು. ಆಮೇಲೆ ರಾಜಾರೋಷವಾಗಿ ಮನೆಗೆ ಹೊರಟುಹೋಗಬಹುದು. ಟ್ರಂಕ್ ರೋಡಿನಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಸುಧಾರಿಸಿಕೊಂಡು ಹೋಗುವುದೇ ವಾಸಿಯೇ, ನಿಲ್ಲದೆ ನೇರವಾಗಿ ಹೊರಟುಹೋಗುವುದೇ ವಾಸಿಯೇ ಎಂದು ತನ್ನನ್ನು ತಾನೇ ಕೇಳಿಕೊಂಡ. ಕಲ್ಲಿನಿಂದ ಮಾಡಿದ ಹಾಗಿತ್ತು ಅವನ ಕಾಲುಗಳು. ಟ್ರಂಕ್ ರೋಡು ಸಿಕ್ಕಿದಾಗ ಸ್ವಲ್ಪ ಹೊತ್ತು ಕೂತುಕೊಳ್ಳತಕ್ಕದ್ದೆಂದು ತೀರ್ಮಾನ ಮಾಡಿಕೊಂಡ. ಪರವಾ ಇಲ್ಲ, ಟ್ರಂಕ್ ರೋಡಿನಲ್ಲಿ ಯಾವ ಭಯವೂ ಇಲ್ಲ ; ನಟ್ಟಿರುಳಾದರೂ ದಿಗಿಲುಪಡಬೇಕಾದ್ದಿಲ್ಲ. ಸ್ವಲ್ಪ ದಣಿವು ಆರಿಸಿಕೊಂಡರೆ ಆಮೇಲೆ ಓಡಿ ಓಡಿ ಬೇಕಾದರೂ ಹೋಗಬಹುದು ಮನೆಗೆ.

ಗಿಡಮರಗಳಿಲ್ಲದ ಬಯಲು ಪ್ರದೇಶವೊಂದು ಸಿಕ್ಕಿತು. ತಲೆಯೆತ್ತಿ ನೋಡಿದರೆ

ತಾರೆಗಳು ಕಾಣಿಸುತ್ತಿದ್ದವು. ಮುಂದುಗಡೆ ರಸ್ತೆ ಮಸಕು ಮಸಕಾಗಿತ್ತು. ಕವಿದ ಕತ್ತಲೆಯಿಲ್ಲ ಇಲ್ಲಿ ; ಮರಗಳ ಸಂತೆಯಿಲ್ಲ. ಟ್ರಂಕ್ ರೋಡ್ ! ಟ್ರಂಕ್ ರೋಡ್ ಸಿಕ್ಕಿತೆಂದು ತಿಳಿದು ಅವನಿಗಾದ ಸಂಭ್ರಮ ಅಷ್ಟಿಷ್ಟಲ್ಲ. ಎಲ್ಲ ವಿಧದಲ್ಲೂ ಈ ಪ್ರದೇಶ ಟ್ರಂಕ್ ರೋಡು ಇದ್ದಂತೆಯೇ ಇತ್ತು. ತಡೆಯಿಲ್ಲದೆ ಸ್ಪಷ್ಟವಾಗಿ, ಸಂತತವಾಗಿ ಹೊಳೆಯುತ್ತಿದ್ದ ನಕ್ಷತ್ರಗಳನ್ನು ನೋಡಿ ಅವನಿಗೆ ಹೊಸ ಹುಮ್ಮಸ್ಸು ಹುಟ್ಟಿತು. ನಿರಾಂತಕವಾಗಿ ಮಿನುಗುತ್ತಿದ್ದ ಲಕ್ಷಾಂತರ ಚುಕ್ಕಿಗಳನ್ನು ಕಂಡು ತನಗೆ ನೆನಪಿರುವ ಹಾಡುಗಳನ್ನೆಲ್ಲ ಒಟ್ಟಿಗೆ ಹಾಡೋಣವೆನಿಸಿತು. ಗುಹೆಯಂತಿದ್ದ ಆ ಇಕ್ಕಟ್ಟು ರಸ್ತೆಯಿಂದ ಪಾರಾದೆನಲ್ಲಪ್ಪ ಸದ್ಯ ಎಂಬ ತಿಳಿವಳಿಕೆಯಿಂದ ಅವನ ಮೈನೋವೆಲ್ಲ ಮರೆತುಹೋಯಿತು. ಕೈವಲ್ಯ ಸಿಕ್ಕಿದಂತಾಯಿತು. ಕುಳಿತು ಸುಧಾರಿಸಿಕೊಳ್ಳುವುದು ಸರಿಯಲ್ಲ. ಬೇಗ ಬೇಗ ಮನೆಗೆ ಹೋಗುವುದೇ ಸರಿ ಎಂದು ನಿರ್ಧರಮಾಡಿದ. ಇದ್ದಕ್ಕಿದ್ದಂತೆ ಒಂದು ಶಂಕೆ ಹುಟ್ಟಿತು : ಈ ಕವಲುದಾರಿ ಟ್ರಂಕ್ ರೋಡಿಗೆ ಸರಿಯಾಗಿ ಅಡ್ಡಲಾಗಿ ಹೊರಟಿದ್ದಂತೆ ಅವನಿಗೆ ಜ್ಞಾಪಕ. ಆದರೆ ಇಲ್ಲಿ ಒಂದೇ ನೇರದಲ್ಲಿಯೇ ಇದೆಯಲ್ಲ? ಒಂದು ಕ್ಷಣ ಅವನಿಗೆ ಏನೂ ತೋಚಲಿಲ್ಲ. ಸುಮಾರು ಈ ರಸ್ತೆ ಟ್ರಂಕ್ ರೋಡಿನ ಇನ್ನೊಂದು ಪಕ್ಕದಲ್ಲೂ ಮುಂದುವರಿಯಬಹುದು, ಆಗ ತಾನು ನೋಡಿಲ್ಲದಿರಬಹುದು ಎಂದು ಸಮಾಧಾನ ಹೇಳಿಕೊಂಡ. ಅದೇನೇ ಆಗಲಿ, ಟ್ರಂಕ್ ರೋಡಂತೂ ಇದಕ್ಕೆ ಅಡ್ಡಲಾಗಿರಬೇಕು. ಆದುದರಿಂದ ಬಲಗಡೆಗೆ ತಿರುಗಿಕೊಂಡು ಮುಂದಕ್ಕೆ ಹೋದರೆ ಸರಿ, ಊರು ಸಿಕ್ಕುತ್ತದೆ. ಆದುದರಿಂದ ಸುತ್ತಮುತ್ತಲ ಸ್ಥಳವನ್ನೆಲ್ಲ ಕಣ್ಣಿಟ್ಟು ನೋಡಿದ. ರೋಡಿನ ಚಿಹ್ನೆಯೇ ಕಂಡು ಬರಲಿಲ್ಲ. ಕತ್ತಲಾಗಿದೆ, ಅದರಿಂದ ಕಂಡಿರಲಾರದು ಎಂದು ಭಾವಿಸಿಕೊಂಡ. ರೋಡಂತೂ ಇದ್ದೇ ತೀರಬೇಕಲ್ಲ. ಆದುದರಿಂದ ಬಲಗಡೆಗೆ ತಿರುಗಿಕೊಂಡು ಐದಾರು ಹೆಜ್ಜೆ ಹೋದ. ಮಂಡಿಯ ವರೆಗೆ ಕಾಲು ಕೊಚ್ಚೆಯಲ್ಲಿ ಹೂತು ಹೋಯಿತು. ಹಾಗೇ ಸ್ವಲ್ಪ ದೂರ ಮುಂದಕ್ಕೆ ಹೋದ. ಚೂಪಾದ ಮೊನೆಯುಳ್ಳ ಹುಲ್ಲು ಅವನ ಮುಖವನ್ನು ತಿವಿಯಿತು. ಕಾಲಿಗೆ ಮುಳ್ಳುಗಳು ಚುಚ್ಚಿಕೊಂಡವು. ಕೆಲವು ಕಡೆ ಹಂಬುಗಳು ಬೆಳೆದುಕೊಂಡಿದ್ದವು. ಸ್ವಾಮಿನಾಥ ಹಿಂದಿರುಗಿ ರಸ್ತೆಗೆ ಬಂದುಬಿಟ್ಟ.

## ಎರಡು

ಕ್ರಮೇಣ ಅವನಿಗೆ ತನ್ನ ಗತಿ ಗೊತ್ತಾಯಿತು : ಯಾವುದೋ ರಸ್ತೆಯಲ್ಲಿ ಅನೇಕ ಮೈಲಿಗಳ ದೂರದಲ್ಲಿ ಹೊತ್ತಲ್ಲದ ಹೊತ್ತಿನಲ್ಲಿ ಒಬ್ಬಂಟಿಗನಾಗಿದ್ದಾನೆ, ತನಗೆ ತಿಳಿದಿರುವ ಟ್ರಂಕ್ ರೋಡು ಸಿಗುವದೆಂಬ ಭರವಸೆಯೊಂದರಿಂದಲೇ-ಇಷ್ಟು ಹೊತ್ತು ಅವನು ಜೀವಹಿಡಿದುಕೊಂಡಿದ್ದ. ಈಗ ಆ ಪೊಳ್ಳು ಭರವಸೆಯೂ ಹೋಯಿತು. ಸ್ವಾಮಿ ಭಯದಿಂದ ತಲ್ಲಣಿಸಿದ. ಟ್ರಂಕ್ ರೋಡನ್ನು ಸೇರುವ ಆಸೆ ಬರಿಯ ಕನಸೆಂದು

ಗೊತ್ತಾದ ಮೇಲೆ ಅವನ ಕಾಲುಗಳು ಮುಷ್ಕರ ಹಿಡಿದವು. ಆದರೂ ಏದಿಕೊಂಡು ಹೋಗುತ್ತಲೇ ಇದ್ದ ತನ್ನ ನಡೆಗೆ ಅರ್ಥವೇ ಇಲ್ಲವೆಂದು ಅವನಿಗೆ ಗೊತ್ತು. ಅರೆಹುಚ್ಚನಂತಾಗಿದ್ದ ಅವನು. ಒಂದು ಸಣ್ಣ ಎಲೆ ನೆಲದ ಮೇಲೆ ಬಿದ್ದರೂ ಮರುದನಿ ಹೊರಡುತ್ತಿತ್ತು. ಹಾಗಿತ್ತು ಅಲ್ಲಿಯ ನೀರವತೆ. ಸ್ವಾಮಿಯ ಕತ್ತು ಕಿವಿಚಿದಂತಾಯಿತು. ಜನರೇ ಇಲ್ಲದ ದೈಯ್ಯಗಳ ಪ್ರಪಂಚದಲ್ಲಿ ನಡೆಯುತ್ತಿದ್ದೇನೋ ಎಂಬ ಭಾವನೆ ಹುಟ್ಟಿತು ಅವನಿಗೆ.

ಖಾಲಿ ಚೀಲದಂತೆ ಕುಸಿದುಬಿದ್ದು ಸ್ವಾಮಿ ಗೋಳೋ ಎಂದು ಅಳತೊಡಗಿದ. ಅಪ್ಪ, ಅಮ್ಮ ಅಜ್ಜಿ, ರಾಜಂ, ಮಣಿ ಎಲ್ಲರನ್ನೂ ವರಸೆ ವರಸೆಯಾಗಿ ಹೆಸರು ಹಿಡಿದು ಕೂಗಿದ. ಬಲು ದೂರದಲ್ಲಿ ಏನೋ ಕರಿಯ ಆಕಾರಗಳು ಅಸ್ಪಷ್ಟವಾಗಿ ಕಾಣುತ್ತಿದ್ದವು. ಅವೇನು ಮರಗಳೋ? ಇಲ್ಲದಿದ್ದರೆ ಪಾತಾಳ ಲೋಕದ ಬಾಗಿಲ ಕಂಬಗಳೋ? ಸ್ವಾಮಿಯ ಅಳು ಕಾರ್ಗತ್ತಲೆಯನ್ನು ಸೀಳಿಕೊಂಡು ಈ ಅಸ್ಪಷ್ಟ ಆಕಾರಗಳನ್ನು ದಾಟಿಹೋಯಿತು. ಆ ಸ್ಥಳದಿಂದ ಕರೆದೊಯ್ಯಿರೆಂದು ತನಗೆ ಯಾವ ಯಾವ ದೇವರ ಹೆಸರು ಗೊತ್ತೋ ಅವರಿಗೆಲ್ಲ ಮೊರೆಯಿಟ್ಟ, ಅವರಿಗೆಲ್ಲ ಹರಕೆ ಹೊತ್ತ. ಪ್ರತಿ ಶನಿವಾರವೂ ಆನೆ ಮುಖದ ಗಣಪತಿಗೆ ಎರಡೆರಡು ಇಡಿಗಾಯಿ ಒಡೆಸುತ್ತೇನೆಂದು ಪ್ರಮಾಣಮಾಡಿದ. ಬೀದಿಯಲ್ಲಿ ಹೊರಳಿಕೊಂಡು ಭಿಕ್ಷೆ ಬೇಡುತ್ತ ಬಂದ ಹಣವನ್ನೆಲ್ಲ ಒಪ್ಪಿಸುತ್ತೇನೆಂದು ತಿರುಪತಿ ವೆಂಕಟರಮಣಸ್ವಾಮಿಗೆ ಅರಿಕೆ ಮಾಡಿಕೊಂಡ. ದೇವಲೋಕದಲ್ಲಿದ್ದ ದೇವತೆಗಳು ತನ್ನ ಮೊರೆಯನ್ನು ಕೇಳಿಕೊಂಡು ತನ್ನನ್ನು ಕಾಪಾಡುವುದಕ್ಕೋಸ್ಕರ ಎಷ್ಟು ಹೊತ್ತಿಗೆ ಇಳಿದು ಬರುತ್ತಾರೋ ನೋಡೋಣ ಎಂದು ಸ್ವಲ್ಪ ಹೊತ್ತು ಕಾದು ನೋಡಿದ.

ತಲೆಯ ತುಂಬ ವಿಲಕ್ಷಣವಾದ ಕಲ್ಪನೆಗಳು ತುಂಬಿಕೊಂಡವು. ಬೆನ್ನ ಹಿಂದೆ ದೊಡ್ಡ ಹೆಜ್ಜೆಗಳ ಸದ್ದಾಯಿತು. ತಿರುಗಿ ನೋಡಿದ. ಕತ್ತಲೆಯ ಮುದ್ದೆಯೊಂದು ತನ್ನ ಕಡೆಯೇ ಬರುತ್ತಿತ್ತು. ಓ! ನೋಡಿಬಿಟ್ಟಿತು ತನ್ನನ್ನು. ಕಾಲ ಮಿಂಚಿ ಹೋಯಿತು. ಅದರ ಭಾರಿಯ ದಂತಗಳು ಬೆಳ್ಳಗೆ ಹೊಳೆಯುತ್ತಿದ್ದವು. ಘರ್ಜಿಸುತ್ತ ಓಡಿಬಂತು. ದಾರಿಯಲ್ಲಿ ಒಂದು ಹೆಮ್ಮರವನ್ನು ಹಣೆಯಿಂದ ಗುದ್ದಿ, ಅದನ್ನು ಬೇರುಸಹಿತವಾಗಿ ಕಿತ್ತು ಮೇಲಕ್ಕೆತ್ತಿ ನೆಲಕ್ಕೆ ಝಾಡಿಸಿ ಅಪ್ಪಳಿಸಿತು. ಅದರ ಸಣ್ಣ ಕಣ್ಣು ಕೋಪದಿಂದ ಕೆಂಪಗೆ ಕೆಂಡದಂತೆ ಹೊಳೆಯುತ್ತಿತ್ತು. ಅದೋ ತನ್ನ ದಂತವನ್ನು ನೆಲಕ್ಕೆ ತಾಗಿಸಿ ಸೊಂಡಿಲನ್ನು ಎತ್ತಿಕೊಂಡು ಕಾದಿದೆ. ಸ್ವಾಮಿ ಸರಕ್ಕನೆ ಒಂದು ಪಕ್ಕಕ್ಕೆ ಹೊರಳಿ ಅದರ ಏಟನ್ನು ತಪ್ಪಿಸಿಕೊಂಡ. ಒಂದು ನಿಮಿಷದ ಹೊತ್ತು. ಮೇಲುಸಿರು ಬಿಡುತ್ತ ಮಲಗಿದ. ಬೆವರಿಂದ ಬಟ್ಟೆಯೆಲ್ಲ ತೊಯ್ದುಹೋಗಿತ್ತು..........ಕಳ್ಳನ ಹೆಜ್ಜೆಯಂತೆ ಸದ್ದಾಯಿತು. ಗುರ್ ಗುರ್ ಎಂದು ಗುರುಗುಟ್ಟಿದ ಶಬ್ದ ಕೇಳಿಸಿತು. ಅದೇನೆಂದು ತಿರುಗಿ ನೋಡುವ ವೇಳೆಗಾಗಲೇ ಆ ದುಷ್ಟ ಪ್ರಾಣಿಯ ಪಂಜಗಳು ಇವನ ಬೆನ್ನ ಮೇಲೆ ಇಳಿದವು. ಅದರ ಬಿಸಿಯುಸಿರು ಇವನ ಹೆಕ್ಕತ್ತಿಗೆ ತಗಲಿ ಸುಡತೊಡಗಿತು. ಅಷ್ಟರಲ್ಲಿ ಎಲ್ಲಿಂದ ಸಮಯಸ್ಫೂರ್ತಿ ಬಂತೋ

ಏನೋ, ಸ್ವಾಮಿ ಬೆನ್ನನ್ನು ತಗ್ಗಿಸಿ ನೆಲದ ಮೇಲೆ ಜೋರಲಾಗಿಬಿಟ್ಟ. ಆ ಹಳದಿ-ಕಪ್ಪು ಪಟ್ಟೆಯ ಹುಲಿಗೆ ಅವನು ಸಿಕ್ಕಲಿಲ್ಲ. ಈಗೊಂದು ಕಿರುಬ ಬಂತು, ಈಗೊಂದು ಸಿಂಹ, ಆಮೇಲೊಂದು ತಿಮಿಂಗಿಲ. ಆಮೇಲೆ ಕ್ರೂರವಾದ ಆನೆಗಳು, ಹುಲಿಗಳು, ಸಿಂಹಗಳು, ಬೇತಾಳಗಳು ಇವನನ್ನು ಕಿವಿ ಹಿಡಿದೆತ್ತಿದವು. ಇನ್ನು ಕೆಲವು ಬೇತಾಳಗಳು ಇವನ ತಲೆಗೂದಲನ್ನು ಒಂದೊಂದಾಗಿ ಕೀಳತೊಡಗಿದವು. ಮಿಕ್ಕ ಬೇತಾಳಗಳು ಇವನ ಚರ್ಮವನ್ನು ಚೂರುಚೂರಾಗಿ ಕತ್ತರಿಸಹತ್ತಿದವು. ಅಯ್ಯೋ, ಇದೇನಿದು? ಕಾಲಿನ ಸುತ್ತ ಸುತ್ತಿಕೊಂಡಿದೆ, ತಣ್ಣಗೆ ಪಾಚಿಪಾಚಿಯಾಗಿದೆ? ದೂರದಲ್ಲಿ ರೈಲುಗಾಡಿಯಷ್ಟು ಗಾತ್ರದ ಚೇಳೊಂದು ಕೊಂಡಿಯನ್ನೆತ್ತಿ ಗಾಳಿಯಲ್ಲಿ ಆಡಿಸುತ್ತಾ ಬರುತ್ತಿತ್ತು. ಅಲ್ಲ, ಅಲ್ಲ. ಮನುಷ್ಯ ಜೀವಿ ಬದುಕಿರಬೇಕಾದರೆ ಇದಲ್ಲ ಸ್ಥಳ. ಆ ನಾಗರಹಾವೂ ಆ ಚೇಳೂ ಇವನ ಹತ್ತಿರ ಬಂದುಬಿಟ್ಟವು. ಇನ್ನೊಂದೇ ಒಂದು ಅಂಗುಲ ಬಿಟ್ಟಿತ್ತು. ಇವನು ಕಿಟ್ಟೆಂದು ಕಿರಿಚಿಕೊಂಡು ಎದ್ದು ಓಡತೊಡಗಿದ. ಓಡುವಾಗಲೆಲ್ಲ ಹಿಂದುಗಡೆಯೇ ನೋಡುತ್ತಿದ್ದ. ಆ ಚೇಳೂ ಇವನಷ್ಟೇ ವೇಗವಾಗಿ ಅಟ್ಟಿಸಿಕೊಂಡು ಬರುತ್ತಿತ್ತು. ಇದರಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಉಸಿರು ಕಟ್ಟಿ, ತನ್ನ ಶಕ್ತಿಯನ್ನೆಲ್ಲ ಬಿಟ್ಟು, ಎರಡರಷ್ಟು ವೇಗದಿಂದ ಓಡಿದ.

ಚೆಂಡು ಬೌಂಡರಿ ಲೈನಿನ ಹತ್ತಿರ ಹೋಯಿತು. ಅಷ್ಟರೊಳಗೆ ಫೀಲ್ಡರ್ ತಡೆದುಬಿಟ್ಟ. ಆದರೂ ಎರಡು ರನ್ನು ಬಂತು. ಮತ್ತೆ ಬ್ಯಾಟನ್ನು ಹಿಡಿದುಕೊಂಡು ಸಿದ್ಧವಾಗಿದ್ದ. ವೈ.ಎಂ.ಯು. ಕ್ಯಾಪ್ಟನ್ ಬೋಲು ಮಾಡುತ್ತಿದ್ದ. ಚೆಂಡು ಬಂತು. ಬೀಸಿದ. ನೆಟ್ಟಗೆ ಸಿಕ್ಸರ್‌ಗೆ ಹೋಯಿತು. ಏನು! ನೋಡುತ್ತಿದ್ದವರ ಮೊರೆತದಿಂದ ಕಿವಿ ಕಿವುಡಾಗಬೇಕು. ರಾಜಂಗೆ ವಿಪರೀತ ಸಂತೋಷವಾಗಿ ಮೈದಾನದ ಸುತ್ತ ಓಡಿ ಬಂದು ಮೂರು ಸಲ ಗೋಡೆಯ ಮೇಲೆ ನೆಗೆದು ಕೂತುಕೊಂಡ. ಕ್ಯಾಪ್ಟನ್ ಇನ್ನೊಂದು ಬಾಲ್ ಬೋಲು ಮಾಡಿದ. ಅದನ್ನು ಹೊಡೆಯುವ ಬದಲು ಸ್ವಾಮಿನಾಥ ಬ್ಯಾಟನ್ನು ದೂರಕ್ಕೆ ಎಸೆದು, ತನ್ನ ತಲೆಯೊಡ್ಡಿ ಚೆಂಡನ್ನು ತಡೆದ. ಚಂಗನೆ ಚೆಂಡು ಬೋಲರ್ ಹತ್ತಿರ ನೆಗೆಯಿತು. ಆ ಬೋಲರು ಯಾರೆಂದು ನೋಡಿದರೆ ಬೋರ್ಡು ಹೈಸ್ಕೂಲಿನ ಹೆಡ್‌ಮೇಷ್ಟರು! ಸ್ವಾಮಿನಾಥನೂ ಚೆಂಡಿನ ಹಿಂದೆಯೇ ಓಡಿದ. ಅರ್ಧ ದಾರಿಯಲ್ಲೇ ಚೆಂಡನ್ನು ಹಿಡಿದುಕೊಂಡು ಕ್ಯಾಪ್ಟನ್ ತಲೆಗೆ ಗುರಿಯಿಟ್ಟು ಎಸೆದ. ಅವನ ತಲೆ ಪುಡಿಪುಡಿಯಾಗಿ ಬಿಟ್ಟಿತು. ಎಂ.ಸಿ.ಸಿ.ಯವರು ಗೆದ್ದರು ; ವೈ.ಎಂ.ಯು. ಅವರು ಸೋತುಹೋದರು. ವೈ.ಎಂ.ಯು. ಅವರನ್ನು ಎಂ.ಸಿ.ಸಿ.ಯವರು ಅಟ್ಟಿಸಿಕೊಂಡು ಹೋಗಿ, ಬ್ಯಾಟುಗಳು, ವಿಕೆಟ್ಟುಗಳು, ಚೆಂಡುಗಳು, ಇಟ್ಟಿಗೆಗಳು, ಕಲ್ಲುಗಳು ಇವುಗಳಿಂದೆಲ್ಲ ಬಲವಾಗಿ ಹೊಡೆದು ತಮ್ಮ ವಿಜಯವನ್ನು ಮೆರೆಸಿದರು. ಸ್ವಾಮಿನಾಥ ಹೊಟ್ಟೆ ಹುಣ್ಣಾಗುವಂತೆ ನಕ್ಕೂ ನಕ್ಕೂ ನಕ್ಕ. ಇನ್ನು ತಡೆಯಲಾರದೆ ಕುಸಿದುಬಿದ್ದ.

# ಮೂರು

ಶನಿವಾರದ ದಿನ ಬೆಳಗಿನ ಜಾವ ಆ ವೇಳೆಗೆ ರಂಗ ಗಾಡಿ ಹೊಡೆದುಕೊಂಡು ಮೆಂಪಿಕಾಡಿಗೆ ಐದು ಮೈಲಿ ದೂರದಲ್ಲಿದ್ದ ತನ್ನ ಹಳ್ಳಿಗೆ ಹಿಂದಿರುಗುತ್ತಿದ್ದಾನೆ. ಮಧ್ಯಾಹ್ನದ ವೇಳೆಗೆ ಹಳ್ಳಿಯಲ್ಲಿರಬೇಕು ಎಂಬುದಾಗಿ, ಬೆಳಗಿನ ಜಾವ ಎರಡು ಗಂಟೆಗೇ ಬಂಡಿ ಕಟ್ಟಿಕೊಂಡು ಹೊರಟಿದ್ದ. ಮೆಂಪಿ ರಸ್ತೆ ಬಂದ ಮೇಲೆ, ಹಗ್ಗವನ್ನು ಬಂಡಿಯ ಕಮಾನಿಗೆ ಕಟ್ಟಿ, ತಾನೂ ಒಂದಷ್ಟು ಕಾಲು ಚಾಚಿದ. ಎತ್ತಿನ ಕೊರಳಿಗೆ ಕಟ್ಟಿದ್ದ ಸಣ್ಣ ಗೆಜ್ಜೆಗಳ ಜಿಣಿಜಿಣಿ ಗಲುಕು, ಎತ್ತಿನ ಮೆಲುನಡೆ ಇವೆರಡೂ ಸೇರಿ ರಂಗನಿಗೆ ಕೂಡಲೇ ಜೊಂಪು ಹತ್ತಿತ್ತು.

ಇದ್ದಕ್ಕಿದ್ದಂತೆ ಎತ್ತು ಬೆದರಿ ನಿಂತುಬಿಟ್ಟಿತು. ರಂಗ ಎದ್ದು ಎತ್ತನ್ನು ಬೈದು, "ಅರ್ರ ಅರ್ರ...........ಟ್ ರ್ ರ್‌ರ್........." ಎಂದು ಕೂಗಿ ಹಗ್ಗವನ್ನು ಬಲವಾಗಿ ಎಳೆದ. ಆದರೆ ಎತ್ತು ತಲೆಯನ್ನು ಬಲವಾಗಿ ಅಲ್ಲಾಡಿಸಿ ಗೆಜ್ಜೆಗಳನ್ನು ಕುಣಿಸಿತೇ ಹೊರತು ಮುಂದಕ್ಕೆ ಜಗ್ಗಲಿಲ್ಲ. ಇದರ ನಡವಳಿಕೆಯನ್ನು ನೋಡಿ ರಂಗನಿಗೆ ಮಿತಿಮೀರಿದ ಕೋಪ ಬಂದು "ನಿನಗೆ ಬುದ್ಧಿ ಕಲಿಸುತ್ತೀನಿ ತಾಳು" ಎಂದು ಕೆಳಕ್ಕೆ ದುಮುಕಿದ. ದುಮುಕಿ ನೋಡುತ್ತಾನೆ, ಹಗಲಿನ ನಸುಕಿನಲ್ಲಿ ರಸ್ತೆಗೆ ಅಡ್ಡಲಾಗಿ ಮನುಷ್ಯ ದೇಹವೊಂದು ಬಿದ್ದಿರುವುದು ಕಾಣಿಸುತ್ತದೆ! "ಹೇಯ್, ಏಳೋ ಮೂದೇವಿ, ಬಹಳ ಒಳ್ಳೇ ಜಾಗ ಹುಡುಕಿದ್ದೀ ಮಲಗಿ ಕೊಳ್ಳೋದಕ್ಕೆ, ಎದ್ದು ಕೂತುಕೋ, ಗೊತ್ತಾಯ್ತಾ?" ಎಂದು ಕೂಗಿದ. ಆದರೆ ಮಲಗಿಕೊಂಡಿದ್ದವನು ಕದಲಲಿಲ್ಲ. ಅವನನ್ನು ಒಂದು ಪಕ್ಕಕ್ಕೆ ನೂಕೋಣವೆಂದು ರಂಗ ಅವನ ಹತ್ತಿರ ಬಂದ.

"ಅಯ್ಯೋ! ಇನ್ನೂ ಎಳೆ ಹುಡುಗ! ಇಲ್ಲೇಕೆ ಮಲಗಿದ್ದಾನೆ?" ಇನ್ನೂ ಹತ್ತಿರ ಬಗ್ಗಿ ನೋಡಿ "ಅಯ್ಯೋ ಶಿವನೆ, ಸತ್ತುಹೋಗಿದ್ದಾನೆ, ಇನ್ನೇನು ಗತಿ" ಎಂದು ಕೂಗಿಕೊಂಡ. ಬೆಳಗಿನ ಜಾವ. ಸಣ್ಣ ಇಬ್ಬನಿಯಿಂದ ಕೈ ಕಾಲು, ಹಣೆ ಮೊದಲಾದ ಭಾಗಗಳೆಲ್ಲ ನೆನೆದು ತಣ್ಣಗಾಗಿಬಿಟ್ಟಿದ್ದವು. ರಂಗ ಹುಡುಗನ ಅಂಗಿಯನ್ನು ಹರಿದು, ಎದೆಯ ಬಳಿ ಕೈಯಿಟ್ಟು ನೋಡಿದ. ಅಲ್ಲಿನ್ನೂ ಜೀವದ ಕಾವಿರುವುದನ್ನು ಕಂಡು ಅವನ ಭಯ ಇಳಿಯಿತು. ಹೇಗೆ ಹೀಗಾಯಿತು ಎಂದು ಅವನಿಗೆ ಹೊಳೆಯಲಿಲ್ಲ. ಹುಡುಗನ ಬಟ್ಟೆಬರೆ ನೋಡಿದರೆ ಅವನು ಪಟ್ಟಣವಾಸದವನ ಹಾಗೆ ಕಾಣುತ್ತಿದ್ದಾನೆ, ಹಳ್ಳಿಗಾಡಿನವನಲ್ಲ. ಪಟ್ಟಣವಾಸದ ಹುಡುಗ ಇಷ್ಟೊಂದು ದೂರದ ರಸ್ತೆಯಲ್ಲಿ ಒಬ್ಬಂಟಿಗನಾಗಿ ರಸ್ತೆಗೆ ಅಡ್ಡಲಾಗಿ ಮಲಗಿರುವುದರ ಗುಟ್ಟೇನು? ಅವನು ಯಾರು? ಎಲ್ಲಿಯವನು? ಅಲ್ಲೇಕೆ ಮಲಗಿದ್ದಾನೆ? ರಂಗನ ಮಿದುಳಿನ ತುಂಬ ಇಂಥ ಪ್ರಶ್ನೆಗಳು ತುಂಬಿ ಅವನನ್ನು ಬಾಧಿಸಿದವು. ಒಂದೊಂದು ಸಲ ದೈತ್ಯಗಳು ಹುಡುಗರನ್ನು ಎತ್ತಿಕೊಂಡು ಬಂದು ಇಂತಹ ನಿರ್ಜನ ಪ್ರದೇಶದಲ್ಲಿ ಹಾಕುತ್ತವಂತೆ. ಸುಮಾರು ಈ ಹುಡುಗನ ಗತಿಯೂ ಹಾಗೇ ಇರಬೇಕು.

ಅಥವಾ ಇಲ್ಲದೆ ಇದ್ದರೂ ಇರಬಹುದು. ಈ ಪ್ರಶ್ನೆಗಳನ್ನೆಲ್ಲ ತಾನು ಯೋಚನೆ ಮಾಡಿ ತಲೆ ಕೆಡಿಸಿಕೊಳ್ಳುವ ಬದಲು, ಮೆಂಪಿ ಕಾಡಿನಿಂದ ಹರದಾರಿ ಈಚೆ ಮುಸಾಫರ್ ಖಾನೆಯಲ್ಲಿ ತಂಗಿದ್ದ ಸರಕಾರೀ ಸಾಹೇಬರಂಥ ತಿಳಿದವರಿಗೆ ಬಿಡೋದೇ ವಾಸಿ ಎಂದು ಅವನಿಗೆ ತೋರಿತು. ಹುಡುಗನನ್ನು ಕರೆದುಕೊಂಡು ಅವರ ಹತ್ತಿರ ಬಿಟ್ಟರೆ ತನ್ನ ಕೆಲಸ ತೀರಿತು. ಮೆಲ್ಲಗೆ ಅವನನ್ನು ಎತ್ತಿ ತನ್ನ ಗಾಡಿಯಲ್ಲಿ ಮಲಗಿಸಿದ.

ರಂಗ ಬಂಡಿಯಲ್ಲಿ ಕುಳಿತು ಹಗ್ಗವನ್ನು ಕೈಗೆ ತೆಗೆದುಕೊಂಡು ಎಡಗಾಲನ್ನೆತ್ತಿ ಎತ್ತಿನ ಹೊಟ್ಟೆಗೆ ಒಂದು ವತ್ತ ಒದ್ದ. "ತಂಟೆಗಿಂಟೆ ಮಾಡಿದೆಯೋ, ಮನೆಗೆ ಹೋದ ಕ್ಷಣ ಗುಳಾನ ಕೆಂಪಗೆ ಕಾಯಿಸಿ ಪಕ್ಕೇ ಮೇಲೊಂದು ಬರೆ ಎಳೆದುಬಿಡ್ತೀನಿ ನೋಡು" ಎಂದು ಎಚ್ಚರಿಕೆ ಕೊಟ್ಟು, ಹಗ್ಗವನ್ನು ಸಡಿಲಬಿಟ್ಟ. ಈ ಬುದ್ಧಿವಾದದ ಮಾತನ್ನು ಅರ್ಥಮಾಡಿಕೊಂಡು ಎತ್ತು ಒಂದು ಸಲ ಗೋಣನ್ನು ಒದರಿ, ಮುಖ್ಯವಾದ ಸಂದರ್ಭಗಳಿಗೆ ಮಾತ್ರ ಮೀಸಲಾಗಿಟ್ಟಿದ್ದ ವೇಗದ ನಡಗೆಯಲ್ಲಿ ಹೊರಟಿತು.

## ನಾಲ್ಕು

ಸ್ವಾಮಿನಾಥ ಕಣ್ಣು ಬಿಟ್ಟು ಪೆಚ್ಚು ಪೆಚ್ಚಾಗಿ ನೋಡಿದ. ಅವನಿಗೆ ಒಂದೂ ಅರ್ಥವಾಗಲಿಲ್ಲ. ಅನೇಕ ವರ್ಷಗಳಿಂದ ಎಲ್ಲಿದ್ದೆನೋ ಅಲ್ಲೇ ಇದ್ದೆನೆಂದು ಮೊದಲು ನೆನೆದ. ಆಮೇಲೆ ನೋಡುತ್ತಾನೆ-ಅದು ಮನೆಯಲ್ಲ. ಮನಸ್ಸಿನ ಮಬ್ಬು ಕಳದಂತೆಲ್ಲ. ಒಂದೊಂದಾಗಿ ಅನೇಕ ಸಂಗತಿಗಳು ನೆನಪಿಗೆ ಬಂದವು. ಆದರೆ ಯಾವುದೂ ಕ್ರಮದಲ್ಲಿರಲಿಲ್ಲ, ಎಲ್ಲವೂ ಕಲಸು ಮೇಲೋಗರವಾಗಿತ್ತು. ಬೇಗ ಬೇಗ ಕಣ್ಣು ಮಿಟಿಕಿಸಿದ. ಕೈಚಾಚಿ ಏನನ್ನೋ ಹುಡುಕಾಡಿದ. ಸುತ್ತಮುತ್ತಲೂ ಇದ್ದ ಪದಾರ್ಥಗಳನ್ನು ಹೆಚ್ಚು ಗಮನದಿಂದ ಪರೀಕ್ಷಿಸಿದ. ಮನಸ್ಸನ್ನು ಹತೋಟಿಗೆ ತಂದುಕೊಳ್ಳಲು ಅವನಿಗೆ ತುಂಬಾ ಶ್ರಮವಾಯಿತು. ಎದುರು ಗೋಡೆಯ ಮೇಲೆ ಒಂದು ಪಟವನ್ನು ತಗಲಿಹಾಕಿದ್ದರು. ಅಥವಾ ಅದು ಕ್ಯಾಲೆಂಡರೋ? ಮನೆಯಲ್ಲಿ ತಾನು ಎದ್ದ ತಕ್ಷಣ ಕಣ್ಣಿಗೆ ಬೀಳುತ್ತಿದ್ದ ಕ್ಯಾಲೆಂಡರ್ ಇದೇನೆ? ಅದರ ವಿವರಗಳನ್ನು ಸ್ವಲ್ಪಸ್ವಲ್ಪವಾಗಿ ತಿಳಿದುಕೊಳ್ಳುತ್ತಿರುವಷ್ಟರಲ್ಲೇ, ಆಯಾಸವನ್ನು ತಡೆಯಲಾರದೆ ಅವನ ಮನಸ್ಸು ಮತ್ತೆ ಉಡುಗಿ ಹೋಯಿತು. ಮತ್ತೆ ಗೊಂದಲ ಮೊದಲಾಯಿತು. ಗೋಡೆಯ ಮೇಲೆ ಏನಾದರೂ ಇತ್ತೋ, ಇಲ್ಲವೇ ಇಲ್ಲವೋ? ಮನಸ್ಸಿನ ತುಂಟಾಟವನ್ನು ಕಂಡು ಅವನಿಗೆ ರೋಸಿ ಹೋಯಿತು.........ಹತ್ತಿರದಲ್ಲೇ ಕುರ್ಚಿಯ ಮೇಲೆ ಯಾರೋ ಕುಳಿತಿದ್ದಂತೆ ತೋರಿತು. ಆ ವ್ಯಕ್ತಿ ಕುರ್ಚಿಯನ್ನು ಹತ್ತಿರಕ್ಕೆಳೆದು "ಹಾ, ಹಾಗೇ, ಈಗ ಪರವಾ ಇಲ್ಲ ತಾನೆ?" ಎಂದು ಕೇಳಿದ..........ಇನ್ನೂ ಪೂರ್ಣ ಪ್ರಾಣವನ್ನು ಪಡೆಯದ ಕಿವಿಗಳ ಮೇಲೆ ಬಿತ್ತು ಈ ವಾಕ್ಯ. ತಮ್ಮ ಅಪ್ಪ ಕುಳಿತಿರುವುದನ್ನು ಕಂಡು ಸ್ವಾಮಿನಾಥನಿಗೆ

ತುಂಬ ಆಶ್ಚರ್ಯವಾಯಿತು. ತನ್ನ ಪಕ್ಕದಲ್ಲಿ ಬಂದು ಅಪ್ಪ ಕೂತುಕೊಳ್ಳುವುದುಂಟೇ? ಆದರೂ ಅದೇಕೆ ಕೂತಿದ್ದಾರೆ ಈವತ್ತು?

ಆ ವ್ಯಕ್ತಿಯ ಕಡೆಯೇ ನೋಡಿ "ಅಪ್ಪಾ" ಎಂದು ಕೂಗಿದ.

"ನಿಮ್ಮ ಅಪ್ಪನನ್ನು ಈಗಲೇ ನೋಡುತ್ತೀಯಂತೆ, ಯೋಚನೆ ಮಾಡಬೇಡ" ಎಂದು ಆ ಮನುಷ್ಯ ಸಮಾಧಾನ ಹೇಳಿದರು. ಆಮೇಲೆ ಎಲ್ಲರಂತೆ ಕುತೂಹಲವುಳ್ಳ ಯಾವ ಮನುಷ್ಯನಾದರೂ ಕೇಳತಕ್ಕಂಥ ಕೆಲವು ಪ್ರಶ್ನೆಗಳನ್ನು ಕೇಳಿದರು. ಒಂದೊಂದಕ್ಕೆ ಉತ್ತರ ಹೇಳುವುದಕ್ಕೂ ಸ್ವಾಮಿನಾಥ ಬಹಳ ಹೊತ್ತು ತೆಗೆದುಕೊಳ್ಳುತ್ತಿದ್ದ. ಕೊಟ್ಟ ಉತ್ತರಗಳೂ ಅಸಂಬದ್ಧವಾಗಿದ್ದವು. ಸ್ವಲ್ಪವಾದರೂ ಅರ್ಥವಿರಲಿಲ್ಲ. ಇದರಿಂದ ಆತನಿಗೆ ಮೊದಲು ತುಂಬ ನಗು ಬಂತು. ಆಮೇಲೆ ಬೇಸರ ಬಂದು, ಪ್ರಶ್ನೆ ಕೇಳುವುದನ್ನೇ ಬಿಟ್ಟರು. ಸ್ವಾಮಿನಾಥನನ್ನು ನೂರಾರು ಪ್ರಶ್ನೆಗಳು ಬಾಧಿಸಿದವು. ಈ ಮನುಷ್ಯನಾರು? ಅಪ್ಪನೋ? ಅಪ್ಪ ಅಲ್ಲದೆ ಹೋದರೆ ಅಲ್ಲೇಕೆ ಇದ್ದಾನೆ? ಅಪ್ಪನೇ ಆಗಿದ್ದರೆ ಇಲ್ಲಿರುವುದುಂಟೇ? ಹಾಗಾದರೆ ಅವನು ಯಾರು? ಅವನು ಹೇಳುತ್ತಿದ್ದುದೇನು? ಇನ್ನೂ ಚೆನ್ನಾಗಿ ಅರ್ಥವಾಗುವಂತೆ ಗಟ್ಟಿಯಾಗಿ ಯಾಕೆ ಮಾತಾಡುವುದಿಲ್ಲ ಅವನು?

ಈ ಅಪ್ಪ-ಹೌದು-ಅಲ್ಲ, ಮನುಷ್ಯ ಆಮೇಲೆ ರೂಮಿಂದ ಹೊರಟು ಹೋದರು. ಆತನ ಹೆಸರು ಶ್ರೀ ಎಂ. ಪಿ. ಎಸ್. ನಾಯರ್ ಎಂದು. ಆತ ಜಿಲ್ಲಾ ಅರಣ್ಯಾಧಿಕಾರಿ. ಮೆಂಪಿ ಕಾಡಿನ ಹತ್ತಿರ ಮೊಕ್ಕಾಂ ಮಾಡಿದ್ದರು. ಬೆಳಿಗ್ಗೆ ಆ ವೇಳೆಗೇ ಎದ್ದು ಕಾಡಿಗೆ ಹೋದಾತ ಹಿಂದಿರುಗಿದುದು ಕತ್ತಲೆಯಾದ ಮೇಲೆಯೇ. ಬಂದಾತ, ತನ್ನ ಭಾರವಾದ ಬೂಟ್ಸುಗಳನ್ನೂ ಪಟ್ಟಿಗಳನ್ನೂ ಇನ್ನೂ ಬಿಚ್ಚಿಲ್ಲ, ಅಷ್ಟರಲ್ಲಿ ಹುಡುಗನ ವಿಷಯವನ್ನು ಆತನಿಗೆ ತಿಳಿಸಿದರು. ಎರಡು ಮೂರು ಗಂಟೆಯ ಹೊತ್ತು ಪ್ರಯತ್ನಿಸಿ ಔಷಧೋಪಚಾರ ಮಾಡಿದ ಮೇಲೆ ಹುಡುಗ ಕಣ್ಣು ಬಿಟ್ಟ. ಆದರೆ ಏನು ಪ್ರಯೋಜನ? ತಾನು ಯಾರು ಏನು ಎಂಬುದನ್ನು ತಿಳಿಸುವ ಸ್ಥಿತಿಯಲ್ಲಿ ಕೂಡ ಇರಲಿಲ್ಲ ಅವನು. ಹುಡುಗ ಹೇಳಿದುದು ನಿಜವಾದರೆ, ಭೂಗೋಳಕಾರರಿಗೆ ಯಾರಿಗೂ ಗೊತ್ತಿಲ್ಲದಂಥ, ಉಚ್ಚಾರಣೆ ಮಾಡಲು ಕೂಡ ಸಾಧ್ಯವಿಲ್ಲದಂಥ ಯಾವುದೋ ಊರಿನವನಂತೆ ಅವನು!

ಮಾರನೆಯ ದಿನ ಬೆಳಿಗ್ಗೆ ಶ್ರೀ ನಾಯರ್ ಬಂದು ನೋಡುವ ವೇಳೆಗೆ ಹುಡುಗನು ಆಗಲೇ ಎದ್ದು ಲವಲವಿಕೆಯಿಂದ ಓಡಾಡುತ್ತಿದ್ದ. ಕಾಂಪೌಂಡಿನಲ್ಲೊಂದು ಮರವಿತ್ತು- ಅದಕ್ಕೆ ಇಪ್ಪತ್ತು ಇಪ್ಪತ್ತೈದು ಗಜದ ದೂರದಲ್ಲಿ ಹುಡುಗ ನಿಂತಿದ್ದ. ಕಾಲಿನ ಹತ್ತಿರ ಕಲ್ಲಿನ ಸಣ್ಣ ರಾಶಿಯೊಂದನ್ನು ಹಾಕಿಕೊಂಡಿದ್ದ. ಒಂದು ಕಲ್ಲನ್ನು ಎತ್ತಿಕೊಂಡು ಕೆಲವು ಹೆಜ್ಜೆಗಳು ಹಿಂದಕ್ಕೆ ಸರಿದು, ಅಲ್ಲಿಂದ ಪುಟಪುಟನೆ ಓಡಿಬಂದು, ಕಲ್ಲಿನ ರಾಶಿಯ ಹತ್ತಿರ ಸರಕ್ಕನೆ ನಿಂತು, ಕೈಯನ್ನು ತಿರುವಿ, ಕಿವಿಯ ಹತ್ತಿರ ತಂದು, ಮರಕ್ಕೆ ಗುರಿಯಿಟ್ಟು ಕಲ್ಲನ್ನು ಎಸೆದ. ಇದೇ ರೀತಿ ಒಂದಾದಮೇಲೊಂದು ಕಲ್ಲನ್ನು ಕ್ಲಪ್ತವಾಗಿ ಎಸೆದ.

"ಏನಣ್ಣಾ, ಹೇಗಿದ್ದೀಯಣ್ಣಾ? ಚೆನ್ನಾಗಿ ನಿದ್ರೆ ಬಂತೋ?" ಎಂದು ಶ್ರೀ ನಾಯರ್

ಅವನನ್ನು ಕೇಳಿದರು.

"ತುಂಬ ಥ್ಯಾಂಕ್ಸ್ ಸಾರ್. ನನ್ನನ್ನ ಕಷ್ಟದಿಂದ ಕಾಪಾಡಿದ್ದೀರಿ ನೀವು."

"ಓ............ಏನು? ಏನೋ ಕೆಲಸದಲ್ಲಿದ್ದ ಹಾಗೆ ಕಾಣುತ್ತಲ್ಲ?"

"ಪ್ರಾಕ್ಟೀಸು ಮಾಡಿಕೋತಿದ್ದೀನಿ, ಸಾರ್. ನಾವು ವೈ.ಎಂ.ಯು. ಮೇಲೊಂದು ಮ್ಯಾಚ್ ಆಡ್ತೀವಿ. ರಾಜಂ ನನ್ನನ್ನೇ ನಂಬಿಕೊಂಡಿದ್ದಾನೆ. ಎಲ್ಲರೂ ನನ್ನನ್ನು ಟೇಟ್ ಅಂತ ಕರೀತಾರೆ. ನಾನು ಪ್ರಾಕ್ಟೀಸೇ ತೊಗೊಂಡಿಲ್ಲ ಬಹಳ ದಿನದಿಂದ. ಮ್ಯಾಚ್ ಹತ್ತಿರ ಬಂದಿರೋವಾಗ ಪ್ರಾಕ್ಟೀಸು ಬಿಟ್ಟು ಬಿಟ್ಟು ದಡ್ಡ ಕೆಲಸ ಮಾಡಿಬಿಟ್ಟೆ...........ಈವತ್ತು ಯಾವ ವಾರ, ಸಾರ್?"

"ಯಾಕೆ?"

"ದಯವಿಟ್ಟು ಹೇಳಿ ಸಾರ್. ಮ್ಯಾಚಿಗೆ ಇನ್ನು ಎಷ್ಟು ದಿನ ಇದೇ ಅಂತ ತಿಳಕೊಳ್ಳೋಕೆ ಕೇಳಿದೆ."

"ಭಾನುವಾರ."

"ಏನು! ಏನು!" ಸ್ವಾಮಿನಾಥ ಕಲ್ಲಿನಂತೆ ನಿಂತುಬಿಟ್ಟ. ಭಾನುವಾರ! ಭಾನುವಾರ! ತನ್ನ ಕಾಲ ಬಳಿಯಿದ್ದ ಕಲ್ಲಿನ ರಾಶಿಯ ಕಡೆ ಮೊದ್ದು ಮೊದ್ದಾಗಿ ನೋಡಿದ.

"ಏನಯ್ಯಾ ಸಮಾಚಾರ?"

"ಭಾನುವಾರದ ದಿನವೇ ಸಾರ್, ನಮ್ಮ ಮ್ಯಾಚು..........."

"ಮತ್ತೆ ಯಾಕೆ ಯೋಚನೆ ಮಾಡ್ತೀಯ? ಇನ್ನೂ ಒಂದು ದಿನ ಇದೆಯಲ್ಲ! ಇವತ್ತಿನ್ನೂ ಶನಿವಾರ."

"ಭಾನುವಾರ ಅಂತ ಅಂದ್ರಲ್ಲಾ, ಸಾರ್?"

"ಇಲ್ಲ, ಇಲ್ಲ. ಇವತ್ತು ಶನಿವಾರ. ಬೇಕಾದರೆ ನೀನೇ ಕ್ಯಾಲೆಂಡರನ್ನು ನೋಡು."

"ಭಾನುವಾರಾಂತ ನೀವೇ ಹೇಳಿದಿರಲ್ಲ, ಸಾರ್."

"ಬಾಯಿ ತಪ್ಪಿ ಹೇಳಿರಬೇಕು............"

"ಸಾರ್, ಒಂದು ಉಪಕಾರ ಮಾಡಬೇಕು ಸಾರ್, ನೀವು. ಭಾನುವಾರದೊಳಗೆ ನನ್ನನ್ನು ಫೀಲ್ಡಿಗೆ ತಲಪಿಸಬೇಕು ಸಾರ್, ನೀವು."

"ಅದಕ್ಕೇನಂತೆ? ಈವತ್ತು ಸಂಜೆಯೇ ಹೋಗುವಿಯಂತೆ. ಅದೆಲ್ಲ ಸರಿಯೇ. ನಿಮ್ಮ ಊರು ಯಾವುದು, ನೀನು ಯಾರ ಮಗ-ಒಂದೂ ಹೇಳೊಲ್ಲವೆ ನೀನು?"

# ಪುನರಾಗಮನ

ಭಾನುವಾರ ಮಧ್ಯಾಹ್ನ ಮೂರೂವರೆ ಗಂಟೆ. ಎಂ.ಸಿ.ಸಿ.ಗೂ ವೈ.ಎಂ.ಯು.ಗೂ ಮ್ಯಾಚ್ ಇನ್ನೂ ನಡೆಯುತ್ತಿತ್ತು. ಮೊದಲ ಸರದಿ ವೈ.ಎಂ.ಯು. ಅವರಿಗೆ ಬಂತು. ಎರಡು ಗಂಟೆಯ ವೇಳೆಗೆ ಎಲ್ಲರೂ ಎಂಬತ್ತಾರು ರನ್ನುಗಳಿಗೆ ಔಟ್ ಆಗಿಬಿಟ್ಟರು. ಅವರ ಕ್ಯಾಪ್ಟನ್ ಮೂವತ್ತೆರಡು ರನ್ನು ಮ.ಾಡಿದ. ಅವನದೇ 'ಹೈಯೆಷ್ಟು'. ಅವನನ್ನ ಔಟು ಮಾಡುವಂಥ ಬೋಲರೇ ಇರಲಿಲ್ಲ ಎಂ.ಸಿ.ಸಿ. ಕಡೆ. ಭದ್ರವಾಗಿ ನಿಂತುಬಿಟ್ಟು ಎಡಗಡೆ ಬಲಗಡೆ ತೀಡುತ್ತಾ ಇದ್ದ ಅವನು. ಬೋಲರುಗಳೆಲ್ಲ ಸುಸ್ತಾಗಿಬಿಟ್ಟರು. ಗಂಟೆಗಟ್ಟಲೆ ಕಚ್ಚಿಕೊಂಡುಬಿಟ್ಟಿದ್ದ. ಅವನಾದ ಮೇಲೆ ಬಂದವನು ಅವನಷ್ಟು ರನ್ ಮಾಡದೇ ಹೋದರೂ, ಸಾಮಾನ್ಯವಾದ ಆಸಾಮಿಯೇನೂ ಅಲ್ಲ. ಎಂ.ಸಿ.ಸಿ. ಬೋಲರುಗಳಲ್ಲಿ ಉಳಿದಿದ್ದ ಅಷ್ಟಿಷ್ಟು ತ್ರಾಣವೂ ಉಡುಗಿ ಹೋಯಿತು. ಗಟ್ಟಿಗನಾದ ಬೋಲರಿನ ಕೊರತೆ ರಾಜಂಗೆ ಈಗ ಬಹಳ ಚೆನ್ನಾಗಿ ಮಂದಟ್ಟಾಯಿತು.

ಉಪಾಹಾರವಾದ ಮೇಲೆ ಎರಡೂವರೆಗೆ ಆಟ ತಿರುಗಿ ಮೊದಲಾಯಿತು. ಈ ಒಂದು ಗಂಟೆಯಲ್ಲಿ ಎಂ.ಸಿ.ಸಿ.ಯವರ ಸ್ಕೋರು ಕೇವಲ ಎಂಟು! ಮೂರು ಜನ ಆಗಲೇ ಔಟಾಗಿಬಿಟ್ಟಿದ್ದರು. ರಾಜಂ ಮಣಿ ಇಬ್ಬರೂ ಇನ್ನೂ ಆಡಿರಲಿಲ್ಲ. ರಾಜಂಗೆ ತುಂಬ ಜಿಗುಪ್ಸೆಯಾಗಿ ಬಿಟ್ಟಿತ್ತು. ಎಲ್ಲರನ್ನೂ ಬಾಯಿ ತುಂಬ ಶಪಿಸಿದ. ರೀಕು ಠಾಕು ಐದೂವರೆಗೆ ಮ್ಯಾಚ್ ಮುಗಿದು ಹೋಗುತ್ತದೆ. ಇನ್ನೆರಡೇ ಎರಡು ಗಂಟೆಯಿದೆ. ಮಿಕ್ಕಿರುವ ಎಂಟು ಜನ ಎಪ್ಪತ್ತೆಂಟು ರನ್ನು ಮಾಡಬಲ್ಲರೆ? ಆಗದ ಮಾತು. ಸ್ಕೋರನ್ನು ಇಪ್ಪತ್ತಕ್ಕೆ ಕೂಡ ಏರಿಸದೆ ಇನ್ನೂ ಆರು ಜನರು ಔಟ್ ಆಗಿಬಿಡುತ್ತಾರೆಂದು ಸಹ ರಾಜಂಗೆ ಅನ್ನಿಸಿತು. ಆಮೇಲೆ ಮಣಿ ಒಬ್ಬನು ಉಳಿದಿರುತ್ತಾನೆ. ತಾನೂ ಮಣಿಯೂ ಸೇರಿ ಎಲ್ಲ ಬುದ್ಧಿ ಉಪಯೋಗಿಸಿ ಒಂದೆರಡು ಸಿಕ್ಸರುಗಳು, ಐದೈದು ಬೌಂಡರಿಗಳನ್ನು ಹೊಡೆದರೆ ಗೆದ್ದರೂ ಗೆಲ್ಲಬಹುದೆಂಬ ದೂರದ ಆಸೆಯೊಂದು ಆಗಾಗ ತೋರುತ್ತಿತ್ತು.

ಕಾಂಪೌಂಡಿನ ನೆರಳಲ್ಲಿ ಅವನೂ ಕೆಲವು ಪ್ಲೇಯರುಗಳೂ ಚಕ್ಕಂಬಟ್ಟೆಲು ಹಾಕಿಕೊಂಡು ಕುಳಿತಿದ್ದರು.

"ರಾಜು, ಒಂದು ನಿಮಿಷ ಬಾ ಇಲ್ಲಿ" ಎಂದು ಮೇಲಿನಿಂದ ಒಂದು ದನಿ ಕೇಳಿಸಿತು. ರಾಜಂ ತಲೆಯೆತ್ತಿ ನೋಡಿದ. ಗೋಡೆಯ ಆಚೆ ಅವರ ತಂದೆಯ ಮುಖ ಕಾಣಿಸಿತು. "ಬಹಳ ಅರ್ಜೆಂಟೇನಪ್ಪ?" ಎಂದು ಕೇಳಿದ.

"ಹೌದು. ಒಂದು ನಿಮಿಷಕ್ಕಿಂತ ಹೆಚ್ಚು ಹೊತ್ತು ಹಿಡಿಯೊಲ್ಲ, ಬಾ."

ಗೋಡೆ ದುಮುಕಿ ಅಪ್ಪನ ಪಕ್ಕದಲ್ಲಿ ನಿಂತ. ಅವರೊಂದು ಕಾಗದವನ್ನು ಕೊಟ್ಟರು. ಕಾಗದವನ್ನು ಓದಿಕೊಂಡು, "ಹಾಗಾದರೆ ಗಟ್ಟಿಮುಟ್ಟಾಗಿದ್ದಾನೆ ತಾನೇ? ಅಲ್ಲಿ ಕೂತುಕೊಂಡು ಏನು ಮಾಡುತ್ತಿದ್ದಾನೋ" ಎಂದು ತಟಸ್ಥನಾಗಿ ಹೇಳಿ, ಕಾಗದವನ್ನು ಕೊಟ್ಟುಬಿಟ್ಟು ಹೊರಡಲು ಅಣಿಯಾದ.

"ಈ ಕಾಗದವನ್ನು ಸ್ವಾಮಿಯ ತಂದೆಯವರಿಗೆ ಕಳಿಸುತ್ತೇನೆ. ತಕ್ಷಣ ಅವರು ಮೋಟಾರು ಹಾಕಿಕೊಂಡು ಅಲ್ಲಿಗೆ ಓಡುತ್ತಾರೆ. ನಾನೂ ಹೋಗಬೇಕಾಗುತ್ತದೆ, ನೀನೂ ಬರುತ್ತೀಯೇನು?"

ರಾಜಂ ಒಂದು ಗಳಿಗೆ ಸುಮ್ಮನಿದ್ದು, "ಇಲ್ಲ" ಎಂದು ಖಂಡಿತವಾಗಿ ಹೇಳಿದ.

"ನಿನ್ನ ಸ್ನೇಹಿತನನ್ನು ನೋಡಿ ಕರೆದುಕೊಂಡು ಬರಬೇಕೂಂತ ನಿನಗೆ ಇಷ್ಟವಿಲ್ಲವೆ?"

"ಅವನೇನಾದರೆ ನನಗೇನಂತೆ! ಐ ಡೋಂಟ್ ಕೇರ್" ಎಂದು ಮೊಟಕಾಗಿ ಉತ್ತರ ಹೇಳಿ, ರಾಜಂ ತನ್ನ ಗೆಳೆಯರ ಮಧ್ಯೆ ಬಂದು ಕುಳಿತುಬಿಟ್ಟ. ನಾಲ್ಕನೆಯ ಆಟಗಾರ ಸುಮಾರಾಗಿ ಆಡುತ್ತಿದ್ದ. "ಪರವಾ ಇಲ್ಲ ಕಾಣೋ ಆ ಹುಡುಗ, ಆಗಲೇ ಆರು ರನ್ನು ಮಾಡಿಬಿಟ್ಟಿದ್ದಾನೆ, ಭೇಷ್ ಭೇಷ್" ಎಂದು ಮಣಿಯ ಕಿವಿಯಲ್ಲಿ ರಾಜಂ ಉಸುರಿದ.

"ಇವರು ಐವತ್ತಾದರೂ ಮಾಡಿದರೆ ಮಿಕ್ಕದ್ದನ್ನು ನಾವು ನೋಡಿಕೊಳ್ಳಬಹುದು."

ರಾಜಂ ತಲೆಯಾಡಿಸಿ ಒಪ್ಪಿಗೆ ಸೂಚಿಸಿದ. ಆದರೆ ಅವನ ಮನಸ್ಸಿನ ಒಂದು ಮೂಲೆಯಲ್ಲಿ ಮ್ಯಾಚಿಗೆ ಸಂಬಂಧಿಸಿದ ಯಾವುದೋ ವಿಷಯ ಕೆಲಸ ಮಾಡುತ್ತಿತ್ತು. ಅವರ ತಂದೆ ಹೇಳಿದ ಸುದ್ದಿಯಿಂದ ಅವನ ಮನಸ್ಸಿನಲ್ಲಿ ಹಲವಾರು ಭಾವನಾತರಂಗಗಳು ಸುಳಿದವು. ವಿಷಯವನ್ನು ಮಣಿಗೆ ತಿಳಿಸಬೇಕೆಂದು ಬಹಳ ಆಸೆಯಾಯಿತು. "ಮಣಿ, ನೋಡೋ, ಸ್ವಾಮಿ-" ನಾಲಗೆಯ ತುದಿಯನ್ನು ಕಚ್ಚಿ ಅಷ್ಟಕ್ಕೇ ಸುಮ್ಮನಾಗಿಬಿಟ್ಟ. ಸ್ವಾಮಿಗೂ ತನಗೂ ಏನೂ ಸಂಬಂಧವಿಲ್ಲವೆಂಬುದು ಅವನಿಗೆ ನೆನಪಾಯಿತು. ಮಣಿ ಸರ್ರನೆ ಎದ್ದು ನಿಂತು, "ಏನೋ ಅದು? ಏನೋ ಸ್ವಾಮೀ ವಿಷಯ ಹೇಳಿದೆಯಲ್ಲ? ಸಿಕ್ಕಿದನಂತೇನೋ? ಹೇಳೋ" ಎಂದು ಕೂಗಿಕೊಂಡ.

"ಗೊತ್ತಿಲ್ಲ ನನಗೆ."

"ರಾಜಂ, ರಾಜಂ, ಏನೋ ಹೇಳೋದರಲ್ಲಿದ್ದೆಯಲ್ಲೋ ಅವನ ವಿಷಯ-"

"ಏನೂ ಇಲ್ಲ. ಐ ಡೋಂಟ್ ಕೇರ್."

## ಎರಡು

ಸ್ವಾಮಿನಾಥನ ಮನಸ್ಸಿನಲ್ಲಿ ತುಂಬ ತೃಪ್ತಿ ಸಮಾಧಾನಗಳು ತುಂಬಿದ್ದವು. ಅವನನ್ನು ನೋಡಲು ಎಷ್ಟು ಜನ ಬರುತ್ತಿದ್ದರೆಂಬುದನ್ನು ನೋಡಿ ಅವನಿಗೆ ತುಂಬ ಹೆಮ್ಮೆಯಾಯಿತು. ಅಜ್ಜಿ, ಅಮ್ಮ ಇಬ್ಬರೂ ಯಾವಾಗಲೂ ಅವನ ಹತ್ತಿರವೇ ಕುಳಿತು

ಉಪಚಾರ ಮಾಡುತ್ತಿದ್ದರು. ಅವನ ಚಿಕ್ಕ ತಮ್ಮನನ್ನು ಎಲ್ಲರೂ ಮರೆತೇ ಬಿಟ್ಟಿದ್ದರು. ಅವನನ್ನು ಎಲ್ಲರೂ ಕೈಬಿಟ್ಟು, ತನಗೇ ಗಮನ ಕೊಡುತ್ತಿದ್ದುದನ್ನು ಕಂಡು ಅವನಿಗೆ ಒಂದು ಬಗೆಯ ಸಂತೋಷವಾಯಿತು.

ಅಪ್ಪನ ಸ್ನೇಹಿತರು ಅನೇಕ ಜನ ಬಂದರು, ಅವನನ್ನು ನೋಡಿಕೊಂಡು ಹೋಗುವುದಕ್ಕೆ. ಇವನು ಖಾಸ್ ಬಂಗಲೆಯ ಪ್ರಾಣಿಯೋ ಏನೋ ಎನ್ನುವಂತೆ ಒಂದು ನಿಮಿಷ ಕಣ್ಣು ಮಿಟುಕಿಸದೆ ಇವನ ಕಡೆ ನೋಡಿ, ಹಿಂದಿರುಗಿ ಬಂದುದರಿಂದ ಎಷ್ಟು ಚಿಂತೆ ತಪ್ಪಿತೆಂತು ಹೇಳಿ, ಒಂದೆರಡು ಪ್ರಶ್ನೆಗಳನ್ನು ಕೇಳಿ ಸ್ವಲ್ಪ ತಮಾಷೆ ಮಾಡಿ ನಗಿಸಿ ಹೊರಟು ಹೋದರು. ಅವರ ಜೊತೆಯಲ್ಲಿ ಅಪ್ಪನೂ ಹೊರಟು ಹೋದರು. ಹೊರಡುವ ಮುಂಚೆ, "ಸ್ವಾಮೀ, ಬರುವ ವೇಳೆಗೆ ತಿರುಗಿ ಹುಡುಕಿಕೊಳ್ಳುವಂತೆ ಮಾಡಬೇಡಪ್ಪಾ" ಎಂದರು. ಈ ಮಾತಿನಿಂದ ಸ್ವಾಮಿಯ ಮನಸ್ಸು ತುಂಬ ನೊಂದಿತು. ಹೀಗೆ ನಿಷ್ಕಾರಣವಾಗಿ ಮೇಲೆ ಬೀಳುವುದು ತರವಲ್ಲವೆನಿಸಿತು.

ಅಪ್ಪ ಹೊರಟು ಹೋದ ಮೇಲೆ ಸ್ವಾಮಿಗೆ ಮತ್ತಷ್ಟು ಸ್ವಾತಂತ್ರ್ಯ ಸಿಕ್ಕಿದ ಹಾಗಾಯಿತು. ಮನೆಯ ತುಂಬ ಅಮ್ಮನ ಜೊತೆಯವರು, ಅಜ್ಜಿಯ ಗುಂಪಿನವರು, ಸ್ವಾಮಿಯ ಅಪ್ಪ ಹುಟ್ಟಿದಾಗಿನಿಂದಲೂ ಮನೆಯವರಿಗೆ ಪರಿಚಯವಿದ್ದಂಥ ಮುದುಕರು - ಇವರೆಲ್ಲ ತುಂಬಿಕೊಂಡಿದ್ದರು. ಅವರ ಮೇಲೆ ಇವನು ನಡೆಸಿದ ದಿಮಾಕೇ ದಿಮಾಕು.

ಎಲ್ಲರೂ ಸ್ವಾಮಿನಾಥನ ಕಡೆಯೇ ನೋಡುತ್ತ ಗಟ್ಟಿಯಾಗಿ ಮಾತಾಡುತ್ತಿದ್ದರು. ಇಷ್ಟು ಗೊಂದಲದ ಮಧ್ಯೆ ಅವನು ಅಡಿಗೆಯವನನ್ನು ಗುರುತು ಹಿಡಿದು ಅವನ ಕಡೆಯೂ ಒಂದು ನಗುವನ್ನು ಬೀರಿದ. ಎಲ್ಲರ ಮಾತಿನ ಮೇಲೂ ಕೇಳುವಂತೆ ಅಡಿಗೆಯವನು ಯಾವುದೋ ಒಂದೆರಡು ಸಂತೋಷದ ಮಾತುಗಳನ್ನಾಡಿ, "ಇನ್ನಾದರೂ ಅಪ್ಪ, ಅಮ್ಮ, ಅಜ್ಜಿ ಮುಂತಾದವರೆಲ್ಲ ಊಟಗೀಟ ಮಾಡೋಕೆ ಷುರುಮಾಡ್ತಾರೋ ಏನೋ" ಎಂದ. ಉತ್ತರವಾಗಿ ಸ್ವಾಮಿ ಏನೋ ಹೇಳಬೇಕೆಂದಿದ್ದ. ಅಷ್ಟರಲ್ಲಿ ಎದುರು ಮನೆಯ ಮುದುಕಮ್ಮನ ಕಡೆ ಅವನ ಗಮನ ಸುಳಿಯಿತು. ಆಕೆ ಕೈ ಜೋಡಿಸಿ ಮೇಲಕ್ಕೆತ್ತಿ ಕಣ್ಣನ್ನು ಹೊರಳಿಸುತ್ತಾ "ಆ ಪರಮಾತ್ಮನೇ ಕಾಪಾಡಿರಬೇಕು ಮಗೂನ. ಇಲ್ಲದೆ ಹೋದರೆ ಅಂಥಾ ಕಾಡಿನ ಹತ್ತಿರ ಹುಲಿ ಸಿಂಹಗಳ ಬಾಯಿಗೆ ಬೀಳದಂತೆ ನೋಡಿಕೊಳ್ಳಲು ಫಾರೆಸ್ಟ್ ಆಫೀಸರನ್ನ ಯಾರು ಕಳಿಸ್ತಾ ಇದ್ದರು?" ಎಂದಳು. ತಾನು ಆ ಏಳು ಬೆಟ್ಟದ ಒಡೆಯನಿಗೆ ಹೊತ್ತಿದ್ದ ಹರಕೆಯ ಬಲದಿಂದ ಮೊಮ್ಮಗ ಸುರಕ್ಷಿತವಾಗಿ ಹಿಂದಕ್ಕೆ ಬಂದಿದ್ದುದರಿಂದ ಆ ಕಾಣಿಕೆಯನ್ನೆಲ್ಲ ಕೂಡಲೆ ಸಲ್ಲಿಸುತ್ತೇನೆಂದು ಅಜ್ಜಿ ಹೇಳಿದಳು.

ಅಮ್ಮ ಅಡಿಗೆಯ ಮನೆಯೊಳಕ್ಕೆ ಹೋಗಿದ್ದವಳು, ಒಂದು ತಟ್ಟೆಯ ತುಂಬ ಕೇಸರಿಭಾತು, ಬೋಂಡ, ಒಂದು ಲೋಟದಲ್ಲಿ ತುಂಬಾ ಸಕ್ಕರೆ ಹಾಕಿದ ಬಿಸಿ ಬಿಸಿ ಕಾಫಿ ಇವನ್ನು ತೆಗೆದುಕೊಂಡು ಬಂದಳು. ಸ್ವಾಮಿನಾಥ ಬೇಗನೆ ಅದಕ್ಕೆ ದಾರಿ ಕಾಣಿಸಿದ. ಅಡಿಗೆಯ ಮನೆಯಿಂದ ಏಲಕ್ಕಿಯ ವಾಸನೆ ಬರುತ್ತಾ ಇತ್ತು. ಓ, ಇನ್ನೂ ಏನೋ ಇದೆ ಸ್ವಾರಸ್ಯ ಈವತ್ತು ರಾತ್ರಿಗೆ!

ಹಾಗೆ ತನ್ನ ನಡವಳಿಕೆಯನ್ನೆಲ್ಲ ಪರೀಕ್ಷಿಸಿಕೊಂಡ, ಸ್ವಾಮಿ. ಶ್ರೀ ನಾಯರ್‌ರವರೊಡನೆ ತಾನು ನಡೆದುಕೊಂಡ ರೀತಿ ಸ್ವಲ್ಪವೂ ಸಮರ್ಪಕವಾಗಿರಲಿಲ್ಲ...........ಆತ ಮುತುವರ್ಜಿ ವಹಿಸಿದ್ದರಿಂದಲೇ ಅಲ್ಲವೇ ಟ್ಯಾಕ್ಸೀ ಬಂದದ್ದು? ಟ್ಯಾಕ್ಸಿಯಿಂದ ಅಪ್ಪ, ಅಮ್ಮ, ರಾಜಂ ತಂದೆ, ಇನ್ನೊಬ್ಬ ಪೊಲೀಸ್ ಇನ್‌ಸ್ಪೆಕ್ಟರು ಇಳಿದರು. ತನ್ನನ್ನು ನೋಡಿದಾಗ ಅಮ್ಮ ಹೇಗೆ ಆಡಿಬಿಟ್ಟಳು! ರಾಜಂ ತಂದೆಯೂ ಪೊಲೀಸ್ ಇನ್‌ಸ್ಪೆಕ್ಟರೂ ತನ್ನ ಕೈಗಳ್ಲಿ ಬೇಡಿ ಹಾಕಿಬಿಡ್ತಾರೋ ಎಂದು ತನಗೆ ತುಂಬ ಭಯವಾಗಿತ್ತು. ಆದರೆ ರಾಜಂ ತಂದೆ ಎಷ್ಟು ಒಳ್ಳೆಯವರು! ಅಪ್ಪನೂ ಅಷ್ಟೆ, ಅದೆಷ್ಟು ಒಳ್ಳೆಯವರು! ಎಷ್ಟು ದಯದಿಂದಿದ್ದರು! ಇದನ್ನೆಲ್ಲ ನೋಡಿ, ಅವರು ಬಂದ ಐದು ನಿಮಿಷದಲ್ಲೆ ತಾನು ಡ್ರಿಲ್ ಕ್ಲಾಸಿಗೆ ಚಕ್ಕರ್ ಹೊಡೆದಂದಿನಿಂದ ಹಿಡಿದು ತಾನು ಪರಾರಿಯಾಗುವ ವರೆಗೆ ಒಂದೂ ಬಿಡದೆ ಕತೆಯನ್ನೆಲ್ಲ ಪೂರ್ತಿಯಾಗಿ ಹೇಳಿಬಿಡಲಿಲ್ಲವೆ? ಆ ಕಥೆಯಲ್ಲಿ ನಗುವಂಥಾದ್ದೇನಿತ್ತು? ಆದರೂ ಅದೇಕೆ ಎಲ್ಲರೂ ಬಿದ್ದು ಬಿದ್ದು ನಕ್ಕರೋ? ಅಮ್ಮ ಕೂಡ ಸೆರಗಿನ ತುದಿಯಿಂದ ಮುಖವನ್ನು ಮುಚ್ಚಿಕೊಂಡು ನಕ್ಕಿದ್ದೂ ನಕ್ಕಿದ್ದೇ. ಅಲ್ಲದೆ, ಕೊನೆಯಲ್ಲಿ ಕಣ್ಣು ಒರಸಿಕೊಂಡದ್ದು ಬೇರೆ......ಈ ನೆನಹುಗಳೆಲ್ಲ ಸವಿಯಾಗಿದ್ದವು. ಆದರೆ ಅವುಗಳ ಸೊಬಗನ್ನೆಲ್ಲ ಹಾಳುಮಾಡುವಂತೆ ಒಂದೇ ಒಂದು ಬೆಪ್ಪು ಕೆಲಸ ಮಾಡಿಬಿಟ್ಟಿದ್ದ : ಆ ಫಾರೆಸ್ಟ್ ಆಫೀಸರು ಕಾರಿನ ಬಾಗಿಲು ತೆಗೆದು ಕಾದಿದ್ದರೂ ಅವರಿಗೆ ನಮಸ್ಕಾರ ಮಾಡಲೇ ಇಲ್ಲ. ಅದನ್ನು ನೆನಸಿಕೊಂಡು ಸ್ವಾಮಿನಾಥನ ಮನಸ್ಸು ಬೆಂದುಹೋಯಿತು. ಯಾರ ಪ್ರಾಣವನ್ನು ಕಾಪಾಡಿದನೋ ಅವನು ಹೊರಟು ಹೋಗುವಾಗ ಒಂದು ಒಳ್ಳೆಯ ಮಾತಾಡದೆ ವಂದನೆ ಹೇಳದೆ ಹೊರಟು ಹೋದನಲ್ಲಾ ಎಂದು ಆ ಫಾರೆಸ್ಟ್ ಆಫೀಸರ ಮನಸ್ಸು ಎಷ್ಟು ಮುರಿದುಹೋಗಿದೆಯೋ ಏನೋ. ಮಾಲ್ಗುಡಿಯ ಕಡೆ ಓಡಿಹೋಗುತ್ತಿದ್ದ ಕಾರನ್ನು ಕಂಡು ಅವನಿಗೆ ಎಂತೆಂತಹ ಭಾವನೆಗಳು ಉಂಟಾಗಿರುತ್ತಿತ್ತೋ ಏನೋ ಎಂಬುದನ್ನೆಲ್ಲ ಊಹಿಸಿ, ಸ್ವಾಮಿಯ ಗಂಟಲು ಉಮ್ಮಳಿಸಿತು.

ಸ್ವಾಮಿ ಈ ವಿಷಯಗಳನ್ನು ಕುರಿತು ಇನ್ನೂ ಧ್ಯಾನ ಮಾಡುವುದರಲ್ಲಿದ್ದ. ಸ್ವಾಮಿಗೆ ಏನೇನು ಗಂಡಾಂತರಗಳು ಒದಗಬಹುದಾಗಿತ್ತೋ ಎಂದು ಅಲ್ಲಿ ನೆರೆದಿದ್ದ ಸಭೆಯವರು ಇನ್ನೂ ಚರ್ಚಿಸುತ್ತಿದ್ದರು. ಆದರೆ ಇದ್ದಕ್ಕಿದ್ದಂತೆ ಬಿರುಗಾಳಿ ನುಗ್ಗಿ ಬಂದಂತೆ ಒಬ್ಬ ವ್ಯಕ್ತಿ ಅವರ ನಡುವೆ ನುಗ್ಗಿದ. ಗುಡುಗಿನಂತೆ ಶಬ್ದಮಾಡುವ ಗಂಟಲಿನಲ್ಲಿ "ಲೋ, ಏನೋ ಸ್ವಾಮಿ" ಎಂದು ಕೂಗಿದ. ಅಲ್ಲಿನ ಶಾಂತ ವಾತಾವರಣ ನಾಶವಾಯಿತು. ಕೂಗುಗಳು, ಗಲಾಟೆ, ಅನಂತರ ಸ್ವಾಮಿ, ಮಣಿ ಇವರಿಬ್ಬರ ನಿಷ್ಕ್ರಮಣ - ಇಷ್ಟು ಹೊರತು ಅಲ್ಲಿ ಕುಳಿತಿದ್ದವರಿಗೆ ಬೇರೆಯೇನೂ ಅರ್ಥವಾಗಲಿಲ್ಲ.

ಹಿತ್ತಲು ಕಡೆಯಿದ್ದ ಸೀಬೆ ಮರದ ಹತ್ತಿರ ಅವರಿಬ್ಬರೂ ಬಂದ ಮೇಲೆ "ಲೋ, ನೀನು ಸತ್ತುಹೋದೆ ಅಂದುಕೊಂಡು ಬಿಟ್ಟಿದ್ದೆ ಕಾಣೋ ನಾನು" ಎಂದ ಮಣಿ.

"ಅದೊಂದೇ ಬಾಕಿ, ಮಣಿ."

"ಅಲ್ಲಾ ಕಾಣೋ, ಆ ನರಪೇತಲ ಹೆಡ್‌ಮೇಷ್ಟರಿಗೆ ಹೆದರಿಕೊಂಡು ಪುಸಕ್ಕಂತ ಉತ್ತರಕುಮಾರನ ಹಾಗೆ ಓಡಿಹೋದೆಯಲ್ಲೋ? ಏನು ಹೇಳೋಣ ನಿಂಗೆ! ರಾಜಂ ಎಲ್ಲಾ ಹೇಳಿದ ನಂಗೆ..........ರಾಜಂನ ಮಾತ್ರ ಕರೀಬಹುದಾಗಿತ್ತು ಅವತ್ತು, ನನ್ನ ಕರೆದು ಹೇಳಬಾರದಾಗಿತ್ತೋ? ನಿನ್ನ ಕತ್ತು ಮುರಿದು ಹಾಕಿ ಬಿಡಬೇಕು ಅನ್ನಿಸಿಬಿಟ್ಟಿತ್ತು ನನಗೆ."

"ಟೈಂ ಇರಲಿಲ್ಲ ಕಾಣೋ. ಏನೋ ಮಾಡಲಿ?"

"ಸದ್ಯ ಬದುಕಿ ಬಂದೆಯಲ್ಲ, ಗಟ್ಟಿಮುಟ್ಟಾಗಿದ್ದೀಯಲ್ಲ, ಅಷ್ಟೇ ಸಾಕಪ್ಪ ನನಗೆ. ಬಹಳ ಯೋಚನೆಯಾಗಿತ್ತು ನನಗೆ. ಅದು ಸರಿ, ಎಲ್ಲಿಗೆ ಹೋಗಿದ್ದೆಯೋ?"

"ನಾನು ....... ಅದೆಲ್ಲಿಗೆ ಹೋಗಿದ್ದೆನೋ ಅದೇ ಗೊತ್ತಿಲ್ಲಾಪ್ಪ........ಎಲ್ಲೋ........ಕಾಡಿನಲ್ಲಿ.........ಅದೇನೋ ಒಂದೂ........" ಇದೇ ಶೈಲಿಯಲ್ಲಿ ಮಾತಾಡುತ್ತ, ಆ ಮಹಾರಾತ್ರಿ, ಅನಂತರ ನಡೆದ ಘಟನೆಗಳೆಲ್ಲವನ್ನೂ ಸ್ವಾಮಿ ವಿವರಿಸಿದ.

"ನಿನ್ನಂಥ ಮಖೇಡಿ ಮತ್ತೊಬ್ಬ ಇಲ್ಲ ಅಂತ ಯಾವಾಗಲೂ ಹೇಳ್ತಾ ಇರಲಿಲ್ಲವೇನೋ ನಾನು? ತಲೆ ಕೆಡಿಸಿಕೊಳ್ಳದೆ ನೇರವಾದ ದಾರಿಯಲ್ಲಿ ಬಂದಿದ್ದರೆ ಎಲ್ಲಾ ಸರಿಹೋಗಿರುತ್ತಿತ್ತು. ಅದು ಬಿಟ್ಟು, ಇಲ್ಲದ ಸಲ್ಲದ್ದನ್ನೆಲ್ಲ ಯೋಚನೆ ಮಾಡಿಕೊಂಡೆ......." ಎಂದ ಮಣಿ.

ಸ್ವಾಮಿ ಮರುಮಾತಾಡಲಿಲ್ಲ. "ಗಾಡಿಯವನು ನನ್ನನ್ನು ಎತ್ತಿ ನಾಯರ್ ಹತ್ತಿರ ಕರೆದುಕೊಂಡು ಬಂದನಂತೆ. ಜ್ಞಾಪಕವೇ ಇಲ್ಲಪ್ಪ ನನಗೆ."

"ನೋಡು, ದೀಪಾವಳಿಯಲ್ಲೋ ಸಂಕ್ರಾಂತಿ ಹಬ್ಬದಲ್ಲೋ ಅವನೇನಾದರೂ ನಿಮ್ಮ ಮನೆ ಹತ್ತಿರ ಬಂದರೆ, ಅವನನ್ನು ಕರೆದು ಪಾಯಸ ಹಾಕು. ಒಂದು ಗೋಣೀ ಚೀಲದ ತುಂಬ ಬಂಗಾರ ಕೊಟ್ಟರೂ ಸಾಲದು ಅವನಿಗೆ. ಅವನೇನಾದರೂ ನಿನ್ನನ್ನು ಎತ್ತಿಕೊಳ್ಳದೆ ಹೋಗಿದ್ದಿದ್ದರೆ, ಹುಲಿಯೋ ಕರಡಿಯೋ ತಿಂದುಹಾಕಿಬಿಡ್ತಾ ಇತ್ತು ನಿನ್ನನ್ನ."

"ಅಷ್ಟೇ ಅಲ್ಲ ಕಾಣೋ. ನಾನು ಇನ್ನೊಂದು ಹುಚ್ಚುಮುಂಡೆ ಕೆಲಸ ಮಾಡಿಬಿಟ್ಟಿದ್ದೀನಿ. ಫಾರೆಸ್ಟ್ ಆಫೀಸರ್ ಇದ್ದಾರಲ್ಲ, ಅವರಿಗೆ ಥ್ಯಾಂಕ್ಸ್ ಕೂಡ ಹೇಳದೆ, ನಮಸ್ಕಾರ ಕೂಡ ಹೇಳದೆ ಬಂದುಬಿಟ್ಟೆ. ಕಾರ್ ಹತ್ತಿರಾನೇ ನಿಂತುಕೊಂಡಿದ್ದರು ಆತ."

"ಅಷ್ಟು ಹತ್ತಿರಾನೇ ನಿಂತುಕೊಂಡಿದ್ದರೆ, ಬಾಯೇಕೆ ಮುಚ್ಚಿಕೊಂಡಿದ್ದೆ ನೀನು?"

"ಆಗ ನನಗೆ ತೋರಲೇ ಇಲ್ಲ ಕಾಣೋ. ಅರ್ಧ ದಾರಿ ಬಂದಮೇಲೆ ಹೊಳೀತು."

"ನೀನೂ-ನೀನು................. ತುಂಬ ಕೇರ್‌ಲೆಸ್ ಫೆಲೋ ಕಣೋ. ಅಷ್ಟು ಸಹಾಯ ಮಾಡಿದವರಿಗೆ ಥ್ಯಾಂಕ್ಸ್ ಹೇಳದೆ ಬಂದುಬಿಡೋದೇನೋ?"

"ಈಗೇನು ಮಾಡೋದು? ಆತನಿಗೊಂದು ಕಾಗದ ಬರೀಲೇನೋ?"

"ಹಾಗೇ ಮಾಡು............ಅವರ ಅಡ್ರೆಸ್ ಗೊತ್ತು ತಾನೇ?"

"ನಮ್ಮಪ್ಪನಿಗೆ ಗೊತ್ತಿರಬಹುದು."

"ಏನಂತ ಬರೀತೀಯ?"

"ಮತ್ತೇ, ನೀವು ನನಗೆ - ಏನೋ ಗೊತ್ತಾಗೋದೇ ಇಲ್ಲ ಕಾಣೋ. ಅಪ್ಪನ್ನ ಕೇಳ್ತೀನಿ. ಮುದ್ದಾಗಿರಬೇಕು ಕಾಗದ. ಮಾಚ್ ಹೊತ್ತಿಗೆ ಸರಿಯಾಗಿ ಕರೆದುಕೊಂಡು ಬಂದರಲ್ಲ ಆ ಮಹಾನುಭಾವ! ಎಷ್ಟು ಹೊಗಳಿದರೂ ಸಾಲದು."

"ಆ, ಏನಂದೆ?"

"ಕಿವುಡೇನೋ, ಮಣಿ, ನಿನಗೆ? ಅವರಿಗೊಂದು ಒಳ್ಳೇ ಕಾಗದ ಬರೀರೀಪ್ಪಾ ಎಂದು ಅಪ್ಪನಿಗೆ ಹೇಳ್ತೀನಿ ಅಂದೆ."

"ಅದಲ್ಲ ಕಾಣೋ. ಮ್ಯಾಚು ಅಂತ ಏನೋ ಹೇಳಿದೆಯಲ್ಲೋ-"

"ಹೂ, ಹೌದೂ?"

"ನಿನಗೇನು ಹುಚ್ಚುಗಿಚ್ಚೋ? ಮ್ಯಾಚಿನ್ನೂ ಆಗಿಲ್ಲ ಅಂದುಕೊಂಡಿದ್ದೀಯಲ್ಲೋ!" ವೈ.ಎಂ.ಯು. ಮೇಲೆ ಆಡಿದ ಪಂದ್ಯ, ಅದರಲ್ಲಿ ಸೋಲು ಉಂಟಾದುದು; ಎಂ.ಸಿ.ಸಿ. ಸೋತುಹೋದುದಕ್ಕೆಲ್ಲ ಹೇಗೆ ಸ್ವಾಮಿಯೇ ಪೂರ್ತಿಯಾಗಿ ಕಾರಣ-ಎಂಬುದನ್ನೆಲ್ಲ ಮಣಿ ವಿವರಿಸಿದ.

"ಈವತ್ತು ಯಾಕಿಟ್ಟುಕೊಂಡಿರಿ ಮ್ಯಾಚು?" ಎಂದು ಕೇಳಿದ ಸ್ವಾಮಿ.

"ಇನ್ನು ಯಾವತ್ತು ಇಟ್ಟುಕೋಬೇಕಾಗಿತ್ತು?"

"ಇವತ್ತಿನ್ನೂ ಶನಿವಾರ ಅಲ್ಲವೇನೋ?"

"ಯಾರು ಹೇಳಿದರು?"

"ಆ ಫಾರೆಸ್ಟ್ ಆಫೀಸರು ಹೇಳಿದರಲ್ಲೋ - ಈವತ್ತು ಶನಿವಾರಾಂತ!"

"ನಿನ್ನ ತಲೆ ಅಂತ ಹೋಗಿ ಹೇಳು ಅವನಿಗೆ."

ಭಾನುವಾರವಾಗಿರಲಾರದು, ಶನಿವಾರವೇ ಆಗಿರಬೇಕು ಎಂದು ಸ್ವಾಮಿ ಪಟ್ಟುಹಿಡಿದ. "ನಿನ್ನನ್ನ ತುಳಿದು ಅಜ್ಜಿಬಜ್ಜಿ ಮಾಡಿ, ಕರುಳು ಕಿತ್ತುಹಾಕಿಬಿಡ್ತೀನಿ, ನೋಡು" ಎಂದು ಬೆದರಿಸಿದ. ಸ್ವಾಮಿನಾಥ ಸುಮ್ಮನಾದ. ಕೊಂಚ ಹೊತ್ತಾದ ಮೇಲೆ ವಿಷಾದಪೂರಿತ ದನಿಯಲ್ಲಿ "ಅವನಿಗೆ ಕಾಗದ ಬರೆಯೋದಿಲ್ಲ. ನನಗೆ ಮೋಸ ಮಾಡಿದ್ದಾನೆ" ಎಂದನು.

"ಯಾರು?"

"ಆ ಫಾರೆಸ್ಟ್ ಆಫೀಸರು............ ರಾಜಂ ಏನು ಹೇಳ್ತಾನೆ ನನ್ನ ವಿಷಯವಾಗಿ?"

"ರಾಜಂ ಏನೇನೋ ಹೇಳ್ತಾನೆ. ಅದನ್ನೆಲ್ಲ ನಿನ್ನ ಮುಂದೆ ಹೇಳೋಕೆ ನನಗೆ ಇಷ್ಟವಿಲ್ಲ. ಆದರೆ ಒಂದು ವಿಷಯ ಹೇಳ್ತೀನಿ, ಕೇಳು. ಅವನೆದುರಿಗೆ ಹೋಗಬೇಡ. ಏನು ಮಾಡಿದರೂ ನಿನ್ನ ಕೈಲಿ ಮಾತನಾಡುವುದಿಲ್ಲ ಅವನು. ನೋಡಿದ ತಕ್ಷಣ ಷೂಟ್ ಮಾಡಿದರೂ ಮಾಡಿಬಿಟ್ಟ. ಹೇಳೋಕಿಲ್ಲ."

"ನಾನೇನು ಮಾಡಿದ್ದೀನಪ್ಪ, ಮಾಡಬಾರದಂಥಾದ್ದು?"

"ಎಂ.ಸಿ.ಸಿನ ನೀನು ನಾಶ ಮಾಡಿದ್ದೀಯ. ಬೋಲು ಮಾಡೋಕೆ ನಿನಗಷ್ಟು ಭಯ ಹತ್ತಿಕೊಂಡಿದ್ದಿದ್ದರೆ ನಮಗೆ ಹೇಳಬೇಕಾಗಿತ್ತು. ಅದು ಬಿಟ್ಟು ಆಡ್ತೀನಿ ಆಡ್ತೀನಿ ಎಂದು ಯಾಕೆ ಪ್ರಾಮಿಸ್ ಮಾಡಿದೆ? ಹೀಗೆ ಹೋಗ್ತೀನಿ ಅನ್ನೋದನ್ನಾದರೂ ಹೇಳಬಹುದಾಗಿತ್ತಲ್ಲ ಕೊನೇ ಪಕ್ಷ? ರಾಜಂನ ಸ್ಕೂಲು ಹತ್ತಿರ ನೋಡಿದೆಯೆಲ್ಲ, ಆಗಲಾದರೂ ಹೇಳಬಾರದಾಗಿತ್ತೋ? ರಾಜಂಗೆ ನಿನ್ನ ಕಂಡರೆ ಕಿಡಿಕಿಡಿಯಾಗಿ ಹೋಗಿದೆ."

ಸ್ವಾಮಿನಾಥನಿಗೆ ತುಂಬ ದುಃಖವಾಗಿ, ಅಳು ಬಂದುಬಿಟ್ಟಿತು. ಸದ್ದು ಮಾಡದೆ ಕಣ್ಣೀರು ಸುರಿಸಿದ. "ನನಗೆ ಯಾವ ದುರುದ್ದೇಶವೂ ಇರಲಿಲ್ಲವೆಂದು ರಾಜಂಗೆ ತಿಳಿಸಿ ಸಮಾಧಾನ ಮಾಡಪ್ಪಾ" ಎಂದು ಮಣಿಯನ್ನು ಬೇಡಿಕೊಂಡ. ಆದರೆ ಈ ವಿಷಯದಲ್ಲಿ ಪ್ರವೇಶ ಮಾಡುವುದಿಲ್ಲವೆಂದು ಮಣಿ ನಿರಾಕರಿಸಿ ಬಿಟ್ಟ. "ರಾಜಂ ಎಂತಹವನು ಎನ್ನುವುದು ನಿನಗೆ ಗೊತ್ತಿಲ್ಲ. ರತ್ನದಂಥಾ ಮನುಷ್ಯ ಅವನು. ಆದರೆ ಕೋಪ ಬಂದಾಗ ಮಾತ್ರ-"

ಇಲ್ಲದ ಆಶಾವಾದವನ್ನು ತನ್ನ ದನಿಯಲ್ಲಿ ತುಂಬಿಕೊಂಡು, "ನನ್ನನ್ನು ನೋಡಿದ ಮೇಲೆ ಎಲ್ಲಾ ಸರಿಹೋಗ್ತಾನೆ. ನಾಳೆ ಬೆಳಿಗ್ಗೆ ಅವನ ಮನೆಗೆ ಹೋಗ್ತೀನಿ" ಎಂದ ಸ್ವಾಮಿ.

ಮಾತು ಬದಲಾಯಿಸೋಣವೆನ್ನಿಸಿತು ಮಣಿಗೆ. "ಸ್ಕೂಲಿಗೆ ವಾಪಸ್ ಹೋಗ್ತೀಯೇನೋ?" ಎಂದು ಕೇಳಿದ.

"ಹೂ, ಮುಂದಿನ ವಾರದಿಂದ ಹೋಗ್ತೀನಿ. ನಮ್ಮ ತಂದೆ ಹೆಡ್ ಮೇಷ್ಟರನ್ನು ನೋಡಿದರಂತೆ. ಇನ್ನು ಮೇಲೆ ಯಾವ ತಂಟೆಯೂ ಇರೋದಿಲ್ಲವಂತೆ. ಅಲ್ಲಿ ನಡೆದದ್ದೆಲ್ಲ ನಮ್ಮ ತಂದೆಗೆ ಗೊತ್ತಾಗಿಬಿಟ್ಟಿದೆ ಕಾಣೋ."

"ಹೌದು. ನಾನೂ ರಾಜಂ ಹೇಳಿದಿವಿ."

"ತ್ಸು. ಬೋರ್ಡ್ ಹೈಸ್ಕೂಲಿಗೇ ಹೋಗಬೇಕಂತೆ ನಾನು. ಈಗ ಸ್ಕೂಲು ಬದಲಾಯಿಸೋ ಹಾಗಿಲ್ಲ, ತುಂಬಾ ಲೇಟಾಗಿ ಹೋಯಿತು, ಅಂದುಬಿಟ್ಟರು ನಮ್ಮ ತಂದೆ."

# ಉಡುಗೊರೆ

ಇದಾದ ಹತ್ತು ದಿನಗಳ ನಂತರ ಒಂದು ಮಂಗಳವಾರದ ದಿನ ಸ್ವಾಮಿನಾಥನು ಬಹಳ ಕಷ್ಟಪಟ್ಟು ಬೆಳಿಗ್ಗೆ ಐದು ಗಂಟೆಗೇ ಹಾಸಿಗೆ ಬಿಟ್ಟು ಎದ್ದ. ಮಾಲ್ಗುಡಿ ಸ್ಟೇಷನ್ನಿಗೆ ರೈಲು ಬರುವುದಕ್ಕೆ ಇನ್ನೂ ಅರ್ಧ ಗಂಟೆಯಿತ್ತು. ಬಂದ ನಾಲ್ಕು ನಿಮಿಷಗಳಲ್ಲೇ ರಾಜಂನ ಕೂರಿಸಿಕೊಂಡು ಹೊರಟುಹೋಗುವುದಾಗಿತ್ತು.

ಹೀಗೆ ಹೊರಟು ಹೋಗುವನೆಂಬ ವಿಷಯ, ಹಿಂದಿನ ರಾತ್ರಿ ಹತ್ತು ಗಂಟೆಯವರೆಗೂ ಸ್ವಾಮಿಗೆ ಗೊತ್ತೇ ಇರಲಿಲ್ಲ. ಆಗ ಮಣಿ ಬಂದು "ರಾಜಂ ತಂದೆಗೆ ತಿರುಚನಾಪಳ್ಳಿಗೆ ವರ್ಗವಾಗಿ ಹೋಗಿದೆ, ಮನೆಯವರೆಲ್ಲ ನಾಳೆ ಬೆಳಿಗ್ಗೇನೆ ಹೊರಟು ಹೋಗ್ತಾರೆ" ಎಂದು ತಿಳಿಸಿದ. ಒಂದು ವಾರದ ಹಿಂದೆಯೆ ಮಣಿಗೆ ಇದು ಗೊತ್ತಾಗಿತ್ತಂತೆ. ಆದರೆ ಸ್ವಾಮಿಗೆ ಹೇಳಬೇಡವೆಂದು ರಾಜಂ ಕಟ್ಟಪ್ಪಣೆ ಮಾಡಿದ್ದರಿಂದ ಅವನು ಇಷ್ಟು ದಿನವೂ ಬಾಯಿ ಬಿಚ್ಚಲಿಲ್ಲವಂತೆ. ಆದರೆ ಕೊನೆಯ ನಿಮಿಷದಲ್ಲಿ ಮಣಿಗೆ ತಡೆಯುವುದಕ್ಕಾಗದೆ ಗುಟ್ಟು ಬಿಟ್ಟುಕೊಟ್ಟುಬಿಟ್ಟನಂತೆ.

ಸ್ವಾಮಿಗೆ ಬದುಕೇ ಬೇಡದ ಹಾಗಾಗಿ ಹೋಯಿತು. ಇಡೀ ಜಗತ್ತೆಲ್ಲ ಇದ್ದಕ್ಕಿದ್ದಂತೆ ಶೂನ್ಯವಾಗಿ ತೋರಿತು ಅವನಿಗೆ. ರಾಜಂ ಇಲ್ಲದ ಲಾಲಿ ಎಕ್ಸ್‌ಟೆನ್‌ಷನ್ನನ್ನು ಕಟ್ಟಿಕೊಂಡು ಏನು ಮಾಡುವುದು? ಇನ್ನು ಮೇಲೆ ಆ ಕಡೆ ಮುಖವನ್ನೇ ಇಡುವುದಿಲ್ಲವೆಂದು ಶಪಥ ಮಾಡಿದ. ಮೊದಲೇ ಏಕೆ ಹೇಳಲಿಲ್ಲವೆಂದು ಮಣಿಯ ಮೇಲೆ ಎರಗಿಬಿದ್ದ. ತಾಳ್ಮೆಯಿಂದ ಮಣಿ ಅದನ್ನೆಲ್ಲ ನುಂಗಿಕೊಂಡ. ರಾಜಂ ಇಲ್ಲದ ಪ್ರಪಂಚ ಸ್ವಾಮಿಯ ಕಲ್ಪನೆಯನ್ನು ಮೀರಿತ್ತು. ಸಾಯಂಕಾಲಗಳನ್ನು ಇನ್ನು ಮೇಲೆ ಕಳೆಯುವ ಬಗೆಯೇನು? ರಜ ಬಂದರೆ ಏನು ಗತಿ? ಸ್ನೇಹಿತನೆಂದು ಯಾರನ್ನು ಕರೆದುಕೊಳ್ಳುವುದು? ತಾನು ಎಸಗಿದ್ದ ಅಪರಾಧ ಕೂಡಲೆ ನೆನಪಾಯಿತು. ಹಿಂದಿರುಗಿ ಬಂದ ಮೇಲೆ ರಾಜಂನ ನೋಡುವುದಕ್ಕೆ ಒಮ್ಮೆಯಾದರೂ ಹೋಗಲಿಲ್ಲ. ಭಯ, ನಾಚಿಕೆ, ಅನಿಶ್ಚಿತತೆ ಇವುಗಳಿಂದ ದಿನದಿನವೂ ಭೇಟಿಯನ್ನು ಮುಂದೆ ಹಾಕುತ್ತ ಬಂದಿದ್ದ ಅವನು. ಎರಡು ಸಲ ರಾಜಂ ಮನೆಯ ಗೇಟ್ ವರೆಗೂ ಹೋಗಿದ್ದವನು ಧೈರ್ಯಕುಂದಿ ವಾಪಸ್ಸು ಬಂದುಬಿಟ್ಟಿದ್ದ. ನಾಳೆಯಾದರೂ ತಪ್ಪದೆ ರಾಜಂನ ನೋಡಬೇಕು. ಇಲ್ಲದಿದ್ದರೆ ನನ್ನ ಹೆಸರು ಸ್ವಾಮಿಯಲ್ಲ, ಎಂದುಕೊಳ್ಳುತ್ತಿದ್ದ ಹೊತ್ತಿಗೆ ಸರಿಯಾಗಿ ಮಣಿ ಬಂದು ಈ ಎದೆಯೊಡೆವ

ವಿಷಯವನ್ನು ತಿಳಿಸಿದ. ಕೂಡಲೆ ರಾಜಂ ಮನೆಗೆ ನುಗ್ಗಿ, ರಾಜಂನ ಮೈತ್ರಿಯನ್ನು ಮತ್ತೊಮ್ಮೆ ಸಂಪಾದಿಸಬೇಕೆಂದು ಎನ್ನಿಸಿತು. ಆದರೆ - ಆದರೆ, ಯಾಕೋ ಒಂದು ತರಹ ಆಗಿಹೋಗಿ ಹಿಂದೇಟು ಹಾಕಿಬಿಟ್ಟ. ನಾಳೆ ಬೆಳಿಗ್ಗೆ ಸ್ಟೇಷನ್ ಹತ್ತಿರ - ರೈಲು ಆರು ಗಂಟೆಗೆ ಹೊರಡುತ್ತೆ - ನಾನು ಐದಕ್ಕೆ ಅಲ್ಲಿದ್ದರೆ ಸರಿ.

"ಮಣಿ, ನಾಳೆ ಬೆಳಿಗ್ಗೆ ಐದು ಗಂಟೆಗೆ ಬಂದು ಕರೀತೀಯೇನೋ? ಇಬ್ಬರೂ ಹೋಗೋಣ."

"ಆಗೊಲ್ಲ. ನಾನು ರಾಜಂ ಮನೆಯಲ್ಲೇ ಮಲಕ್ಕೋತೀನಿ. ಅವನ ಜೊತೇಲೇ ಸ್ಟೇಷನ್ನಿಗೆ ಹೋಗ್ತೀನಿ."

ಆ ಕ್ಷಣ ಸ್ವಾಮಿಯ ಮನಸ್ಸಿನಲ್ಲುಂಟಾದ ಅಸೂಯೆಯನ್ನು ಅಳೆಯಲು ಯಾರಿಂದಲೂ ಸಾಧ್ಯವಿಲ್ಲ. ಮಣಿ ಹೋಗಿ ರಾಜಂ ಮನೆಯಲ್ಲಿ ಮಲಗಿಕೊಂಡು, ಕೊನೆಯ ನಿಮಿಷದವರೆಗೆ ಅವನ ಜೊತೆಯಲ್ಲೇ ಇದ್ದು, ರಾತ್ರಿ ಹನ್ನೆರಡರವರೆಗೆ ಹರಟೆಹೊಡೆದು, ನಕ್ಕು ಕುಣಿದಾಡಬಹುದು! ತಾನು ಮಾತ್ರ ದೂರ ಬಿದ್ದಿರಬೇಕು ಒಬ್ಬಂಟಿಗನಾಗಿ! ಮಣಿಯನ್ನು ಬಲವಾಗಿ ಹಿಡಿದುಕೊಂಡು ಅವನು ರಾಜಂನ ಮನೆಗೆ ಹೋಗದ ಹಾಗೆ ತಡೆದುಬಿಡಬೇಕು ಎನ್ನಿಸಿತು, ಸ್ವಾಮಿಗೆ.

ಮಣಿ ಹೊರಟ. ಸ್ವಾಮಿನಾಥ ತನ್ನ ರೂಮಿಗೆ ಹೋಗಿ ಜಾಯಿಕಾಯಿ ಪೆಟ್ಟಿಗೆಯನ್ನು ತೆರೆದು ಹುಡುಕತೊಡಗಿದ. ಮಾರನೆಯ ಬೆಳಿಗ್ಗೆ ರಾಜಂಗೆ ಉಡುಗೊರೆಯಾಗಿ ಕೊಡಲು ಯೋಗ್ಯವಾದ ಏನಾದರೂ ಸಾಮಾನನ್ನು ಆರಿಸಿಕೊಳ್ಳಬೇಕೆಂದು ಅವನ ಇಷ್ಟ. ಪೆಟ್ಟಿಗೆಯ ತುಂಬ ಎಲ್ಲಾ ತರಹದ ಚಿಲ್ಲರೆಪಲ್ಲರೆ ಸಾಮಾನುಗಳು ತುಂಬಿದ್ದವು. ಸ್ವಾಮಿನಾಥನಿಗೆ ಬಹಳ ಖುಷಿಯಾದ ಒಂದು ರಟ್ಟಿನ ಪೆಟ್ಟಿಗೆ, ಆಟದ ಗಡಿಯಾರವೊಂದು, ಒಂದು ಕ್ಯಾಟಲಾಗು, ಎಳೆಂಟು ಬೊಂಬೆಯ ಪುಸ್ತಕಗಳು, ಬೋಲ್ಟುಗಳು, ನಟ್ಟುಗಳು, ಯಾವ ಯಾವುದೋ ಮಿಷನ್ನುಗಳ ಚೂರುಗಳು, ಕೀಲು ಮೋಟಾರಿನ ಸ್ಪ್ರಿಂಗು, ಸಿಗರೇಟು ಬೆಳ್ಳಿ, ಕಡ್ಡಿ ಪೆಟ್ಟಿಗೆಗಳು, ಹುಣಿಸೆ ಬಿತ್ತಗಳು - ಇವೆಲ್ಲ ರಾಶಿರಾಶಿಯಾಗಿ ಹೇರಿಕೊಂಡಿದ್ದವು. ಇದರಲ್ಲಿ ಅರ್ಧ ಗಂಟೆ ಹುಡುಕಿದರೂ ರಾಜಂಗೆ ಕೊಡಲು ತಕ್ಕಂಥ ಸಾಮಾನೊಂದೂ ಸಿಗಲಿಲ್ಲ. ಇದ್ದುದರಲ್ಲಿ ಸ್ವಲ್ಪ ಲಕ್ಷಣವಾದ ಸಾಮಾನೆಂದರೆ ಹಸುರು ಎಂಜಿನ್ನೊಂದೇ. ಆದರೆ ವರ್ಷದ ಹಿಂದೆ ಅವನೇ ಕೊಟ್ಟಿದ್ದುದು ಅದು, ಅದರ ಬಣ್ಣ ಒಂದೆರಡು ಕಡೆ ಎದ್ದು ಹೋಗಿತ್ತು. ನೊಕ್ಕು ನೊಕ್ಕುಗಳಾಗಿ ಹೋಗಿದ್ದವು. ಒಂದು ಕಡೆ ಒಂದು ದಾರದ ರೀಲು, ಇನ್ನೊಂದು ಕಡೆ ಒಂದು ಒಡೆದು ಹೋದ ಪಿಂಗಾಣಿ ಬಟ್ಟಲು - ಇವೆರಡರ ಮಧ್ಯೆ ಅಷ್ಟೊಂದು ಶ್ರೀಮಂತರ ಮನೆಯಲ್ಲಿ ಬೆಳೆದ ಇಂಜನ್ನು ಮಲಗಿರುವುದನ್ನು ಕಂಡು ಸ್ವಾಮಿಗೆ ಏನೇನೋ ಎನ್ನಿಸಿಬಿಟ್ಟಿತು. ಅಳು ಬಂದುಬಿಡುವುದರಲ್ಲಿತ್ತು......... ತನಗೂ ರಾಜಂಗೂ ಈಗ 'ಎನ್ಮಿ'ತನ ಬಂದುಬಿಟ್ಟಿರುವುದರಿಂದ ಇಂಜನನ್ನು ಅವನಿಗೇಕೆ ವಾಪಸ್ ಕೊಟ್ಟು ಬಿಡಬಾರದು ಎನಿಸಿತು. ಸ್ಟೇಷನ್ನಿಗೆ ತೆಗೆದುಕೊಂಡು ಹೋಗಿ ಅವನಿಗೆ ಹಿಂದಕ್ಕೆ ಕೊಟ್ಟುಬಿಡುವುದು ಎಂಬ ಯೋಚನೆಯಿಂದ

ಅದನ್ನು ಎತ್ತಿಕೊಂಡ. ಆದರೆ ಇನ್ನಷ್ಟು ಯೋಚಿಸಿದ ಮೇಲೆ ಅದನ್ನು ಪೆಟ್ಟಿಗೆಯಲ್ಲೇ ಇಟ್ಟುಬಿಟ್ಟ. ಮುಖ್ಯವಾಗಿ, ಆ ಇಂಜನ್ನೆಂದರೆ ಅವನಿಗೆ ಪ್ರಾಣ. ಅಲ್ಲದೆ, ರಾಜಂ ಮಹಾ ಗರ್ವಿಷ್ಠ. ಕೊಟ್ಟ ದಾನವನ್ನು ಹಿಂದಕ್ಕೆ ತೆಗೆದುಕೊಳ್ಳುವನೇ? ಎಷ್ಟೋ ತಿಂಗಳ ಹಿಂದೆ ಕೊಟ್ಟುಬಿಟ್ಟ ಬಹುಮಾನವನ್ನು ವಾಪಸ್ಸು ತೆಗೆದುಕೊಳ್ಳುವುದು ಅಪಮಾನವೆಂದು ಅವನು ತಿರಸ್ಕರಿಸಿ ಬಿಡುವುದಿಲ್ಲವೆ?....... ರಾಜಂಗೆ ಓದಿನಲ್ಲಿ ತುಂಬ ಆಸಕ್ತಿ. ಆದುದರಿಂದ ಅವನಿಗೊಂದು ಪುಸ್ತಕ ಕೊಡಬೇಕು ಎಂದು ಸ್ವಾಮಿ ತೀರ್ಮಾನಿಸಿದ. ಸ್ಕೂಲ್ ಪುಸ್ತಕ ಕೊಡುವ ಹಾಗಿಲ್ಲ........ ಸ್ವಾಮಿಯ ಹತ್ತಿರ ಒಂದು ಪುಸ್ತಕವಿತ್ತು. ಅದನ್ನು ಕಂಡರೆ ಅವನಿಗೆ ತುಂಬಾ ಗೌರವ. ಡೆಸ್ಕಿನ ಮೇಲೆ ಮಿಕ್ಕ ಪುಸ್ತಕಗಳ ಮಧ್ಯೆ ಇಡದೆ ಅದನ್ನು ಪೆಟ್ಟಿಗೆಯಲ್ಲಿಟ್ಟಿದ್ದುದೇ ತೋರಿಸುವುದಿಲ್ಲವೆ, ಅದರ ಮೇಲೆ·ಅವನಿಗೆಷ್ಟು ಗೌರವ ಎನ್ನುವುದನ್ನು? ಅನೇಕ ವರ್ಷಗಳ ಹಿಂದೆ ಅವರ ತಂದೆ ಮದರಾಸಿನಿಂದ ಅದನ್ನು ತಂದುಕೊಟ್ಟಿದ್ದರು. ಮುದ್ದಾದ ಪುಟ್ಟ ಪುಸ್ತಕ. ಆಂಡರ್‌ಸನ್ ಬರೆದ ಕತೆಗಳು. ಬೇಕಾದಷ್ಟು ಚಿತ್ರಗಳು. ಪೂರ್ತಿಯಾಗಿ ಎಂದೂ ಅದನ್ನು ಓದಿರಲಿಲ್ಲ. ತುಂಬಾ ದೊಡ್ಡ ದೊಡ್ಡ ಇಂಗ್ಲಿಷ್ ಮಾತುಗಳಿದ್ದವು. ಈ ಪುಸ್ತಕವನ್ನು ರಾಜಂಗೆ ಕೊಡುವುದೆಂದು ಸ್ವಾಮಿ ಗೊತ್ತುಮಾಡಿಕೊಂಡ. ಡೆಸ್ಕ್ ಬಳಿಗೆ ಹೋಗಿ, ಪುಸ್ತಕದ ಖಾಲಿ ಹಾಳೆಯ ಮೇಲೆ "ನನ್ನ ಪ್ರಾಣ ಸ್ನೇಹಿತನಾದ ರಾಜಂಗೆ" ಎಂದು ಬರೆದ.

## ಎರಡು

ಆಂಡರ್‌ಸನ್ ಕತೆಗಳ ಪುಸ್ತಕವನ್ನು ಕೈಲಿ ಹಿಡಿದುಕೊಂಡು ಸ್ವಾಮಿನಾಥನು ಸ್ಟೇಷನ್ನನ್ನು ತಲಪಿದಾಗ ಬೆಳಕು ಇನ್ನೂ ಹರಿದಿರಲಿಲ್ಲ. ಸ್ಟೇಷನ್ ಮಾಸ್ಟರು ಆಗತಾನೇ ಹಾಸಿಗೆಯಿಂದೆದ್ದು ಸೀಮೆಯೆಣ್ಣೆ ಲಾಂದ್ರವನ್ನು ಹೊತ್ತಿಸಿ ಮೇಜಿನ ಮೇಲಿಟ್ಟುಕೊಂಡು ಏನೋ ಬರೆಯುತ್ತಿದ್ದರು. ಟೆಲಿಫೋನ್ ಯಂತ್ರವು ಅರುಣಕಾಲಕ್ಕೆ ಕಳುಹಿಸುತ್ತಿದ್ದ ಅನಂತ ಸಂದೇಶಗಳನ್ನು ಆತ ಕಿವಿಯ ಮೇಲೆಯೇ ಹಾಕಿಕೊಳ್ಳಲಿಲ್ಲ.

ಒಂದು ಕಾರು ಬಂದು ನಿಂತಿತು..ರಾಜಂ, ಅವರ ತಂದೆ, ತಾಯಿ, ಮಣಿ, ಅಲ್ಲದೆ ಬೇರೆ ಯಾರೋ ಹೊಸಬರೊಬ್ಬರು ಇವರುಗಳು ಕಾರಿನಿಂದ ಇಳಿದುದು ಸ್ವಾಮಿಗೆ ಕಾಣಿಸಿತು. ರಾಜಂನ ಕಂಡು ಸ್ವಾಮಿಗೆ ಒಂದು ರೀತಿಯ ಸಂಕೋಚವಾಯಿತು. ಯುರೋಪಿಯನ್ ಹುಡುಗನಂತೆ ಜರ್ಬಾಗಿ ಬಟ್ಟೆ ಹಾಕಿಕೊಂಡು ತನ್ನ ಟೀಮಿನ ಕ್ಯಾಪ್ಟನ್ ಪ್ಲಾಟ್‌ಫಾರಂ ಕಡೆ ಬಂದಂತೆ ಅವನ ಧೈರ್ಯ ಕರಗುತ್ತ ಬಂತು. ಆ ಉಡುಪಿನ ಅಚ್ಚುಕಟ್ಟನ್ನು ನೋಡುತ್ತ ನೋಡುತ್ತ ಸ್ವಾಮಿಗೆ ತಾನೇನೋ ಕೀಳು ಎನಿಸಿ, ಯಾರ ಕಣ್ಣಿಗೂ ಬೀಳಬಾರದೆಂದು ಹಿಂದೆ ಹಿಂದೆ ಸರಿದುಕೊಂಡ.

ಒಂದೆರಡು ನಿಮಿಷದಲ್ಲೇ ಪ್ಲಾಟ್‌ಫಾರಂ ಪೋಲೀಸು ಪೇದೆಗಳು ಆಫೀಸರುಗಳಿಂದ ತುಂಬಿಹೋಯಿತು. ರಾಜಂನ ಹತ್ತಿರ ಹೋಗುವುದು ಈಗ ಆಗದ ಮಾತು. ಡ್ರೆಸ್ಸಿನ

ಮೇಲಿದ್ದ ಪೊಲೀಸಿನವರ ಗುಂಪಿನ ನಡುವೆ ತಂದೆಯ ಪಕ್ಕದಲ್ಲಿ ರಾಜಂ ನಿಂತಿದ್ದ. ಅವನ ಎಡಗಾಲು ಹೊರತು ಸ್ವಾಮಿಗೆ ಇನ್ನೇನೂ ಕಾಣಿಸುತ್ತಿರಲಿಲ್ಲ. ಅದು ಕಾಣುತ್ತಿದ್ದುದೂ ಇಬ್ಬರು ಪೊಲೀಸಿನವರ ಮಧ್ಯೆ ಇಣಿಕಿ ನೋಡಿದರೆ ಮಾತ್ರ. ಅವರಿಬ್ಬರೂ ಹತ್ತಿರ ಸರಿದರು. ಅಷ್ಟು ಕಾಣಿಸುವುದೂ ನಿಂತುಹೋಯಿತು. ಇನ್ನೆಲ್ಲಾದರೂ ಜಾಗ ಬಿಟ್ಟಿದೆಯೇನೋ, ಅದರ ಮೂಲಕ ರಾಜಂ ಕಾಣಿಸುತ್ತಾನೇನೋ, ಎಂದು ಗುಂಪಿನ ಸುತ್ತ ಸ್ವಾಮಿ ಎರಡು ಮೂರು ಪ್ರದಕ್ಷಿಣೆ ಹಾಕಿದ.

ದೂರದಲ್ಲಿ ರೈಲು ಕಾಣಿಸಿಕೊಂಡಿತು. ಗಡಿಬಿಡಿಯೇ ಗಡಿಬಿಡಿ. ರೈಲು ಗಡಗಡನೆ ಬುಸಬುಸನೆ ಬಂದು ಪ್ಲಾಟ್‌ಫಾರಂ ಪಕ್ಕ ನಿಂತಿತು. ಸುತ್ತಲ ಗದ್ದಲ ಹೆಚ್ಚಿತು. ರಾಜಂ ಮತ್ತು ಮನೆಯವರು ಪ್ಲಾಟ್‌ಫಾರಂ ಅಂಚಿಗೆ ಸರಿದರು. ಒಂದು ಡಜನ್ ಪೋಲಿಸಿನವರು ಸಾಮಾನು ಎಳೆದು, ಜಗ್ಗಿ, ಅವಸರಅವಸರವಾಗಿ ಬಂಡಿಯೊಳಕ್ಕೆ ತುಂಬಿದರು. ಮೊದಲು ರಾಜಂ ತಾಯಿ ಬಂಡಿಯೊಳಕ್ಕೆ ಹತ್ತಿದರು. ರಾಜಂ ಮತ್ತು ಅವನ ತಂದೆ ಬಾಗಿಲ ಹತ್ತಿರವೇ ಇನ್ನೂ ಪ್ಲಾಟ್‌ಫಾರಂ ಮೇಲೆಯೇ ನಿಂತಿದ್ದರು. ಪೋಲೀಸು ಆಫೀಸರುಗಳು ಅವರನ್ನು ಅನಾಮತ್ತು ಸುತ್ತುಗಟ್ಟಿ ಅವರ ಕೊರಳಸುತ್ತ ಹೂವಿನಹಾರ ಹಾಕುತ್ತ ವಿದಾಯ ಹೇಳುತ್ತಿದ್ದರು. ಕತ್ತಿನ ಸುತ್ತ ಭಾರೀ ಗುಲಾಬೀ ಹಾರ ಹಾಕಿಕೊಂಡಿದ್ದ ರಾಜಂನ ದೃಶ್ಯ ಒಂದೇ ಕ್ಷಣ ಸ್ವಾಮಿಯ ಕಣ್ಣಿಗೆ ಕಂಡು ಮಾಯವಾಯಿತು.

ಸ್ವಾಮಿನಾಥನ್ ಕಣ್ಣು ಹಾಯಿಸಿದ ಮಣಿಗಾಗಿ. ಮಣಿ ಸಿಕ್ಕಿದ.

"ಮಣೀ, ರಾಜಂ ಹೊರಟು ಹೋಗುತ್ತಿದ್ದಾನೆ ಕಾಣೋ" ಅಂದ.

"ಹೌದು, ಸ್ವಾಮಿ, ಹೊರಟು ಹೋಗುತ್ತಿದ್ದಾನೆ."

"ಮಣಿ, ರಾಜಂ ನನ್ನ ಕೈಲಿ ಮಾತಾಡುತ್ತಾನೇನೋ?"

"ಖಂಡಿತ, ಯಾಕೆ ಮಾತಾಡೊಲ್ಲ?" ಎಂದ ಮಣಿ.

"ಮಣಿ, ಈ ಪುಸ್ತಕ ರಾಜಂಗೆ ಕೊಡಬೇಕಲ್ಲೋ" ಎಂದ ಸ್ವಾಮಿನಾಥನ್. ಒಂದು ಗಳಿಗೆಯೂ ತಡಮಾಡುವಂತಿಲ್ಲ ಎಂದು ಮಣಿ ಕಂಡುಕೊಂಡ. ಬೆಲ್ ಬಾರಿಸಿತು. ಇಬ್ಬರೂ ಗುಂಪಿನ ಮೂಲಕ ಹೇಗೋ ದಾರಿ ಮಾಡಿಕೊಂಡು ಒಂದು ಕಿಟಿಕಿ ಹತ್ತಿರ ತಲಪಿದರು. ಮೇಲಿದ್ದದ್ದು ಏನೂ ಸ್ವಾಮಿನಾಥನ್‌ಗೆ ಕಾಣಿಸುತ್ತಿರಲಿಲ್ಲ. ಅವನ ತಲೆ ಬಂಡಿಯ ಬಾಗಿಲ ಹ್ಯಾಂಡಲ್ ಎತ್ತರ ಕೂಡ ಬರುತ್ತಿರಲಿಲ್ಲ. ಹಿಂದಿನಿಂದ ಜನ ತಳ್ಳುತ್ತಿದ್ದರು. ಮಣಿ ಕಿಟಿಕಿ ಹತ್ತಿರ ತಲೆಯಿಟ್ಟು, "ಸ್ವಾಮಿ ಬಂದಿದಾನೆ ನಿನಗೆ ಗುಡ್ ಬೈ ಹೇಳಲು" ಎಂದು ಕೂಗಿದ. ಸ್ವಾಮಿ ಮೆಟ್ಟಿಂಗಾಲ ಮೇಲೆ ನಿಂತ. ಕಿಟಕಿಯಿಂದ ಒಂದು ತಲೆ ಹೊರಕ್ಕೆ ಕಾಣಿಸಿತು, "ಗುಡ್ ಬೈ, ಮಣಿ, ನನ್ನ ಮರಿಯಬೇಡ. ಕಾಗದ ಬರಿ" ಅಂತು.

"ಗುಡ್ ಬೈ ಕಾಣಯ್ಯ........... ಇಗೋ ಸ್ವಾಮೀನೂ ಬಂದಿದ್ದಾನೆ" ಎಂದ ಮಣಿ. ರಾಜಂ ತನ್ನ ಕತ್ತು ಇನ್ನೂ ಮುಂದಕ್ಕೆ ಚಾಚಿದ. ಪರಿಚಿತ ಮುಖವನ್ನು ಕಂಡು ಸ್ವಾಮಿಯ

ಸಂಯಮ ಕರಗಿ ಹೋಯಿತು. "ರಾಜಂ, ರಾಜಂ, ಹೊರಟು ಹೋಗುತ್ತಿದ್ದೀಯ, ತುಂಬಾ ದೂರ. ಯಾವಾಗ ಮತ್ತೆ ಬರ್ತೀಯೋ?" ಎಂದ. ರಾಜಂ ಒಂದು ಮಾತೂ ಆಡದೆ ಅವನ ಕಡೆಯೇ ನೋಡುತ್ತಿದ್ದವನು, ಕೊನೆಗೆ ಏನೋ ಹೇಳಬೇಕು ಎಂದು ಬಾಯಿ ತೆರೆದಂತೆ ಸ್ವಾಮಿಗೆ ಅನಿಸಿತು. ಅಷ್ಟರಲ್ಲಿ ಗಾರ್ಡಿನ ಸೀಟಿ ಅಲ್ಲದೆ ಇಂಜನ್‌ನ ಸಿಳ್ಳು ಕಿವಿಯನ್ನು ಕಿವುಡುಮಾಡುವಂತೆ ಅಬ್ಬರಿಸಿದುವು. ಯಾವುದೋ ಸರಪಣಿಗಳು ಅಲ್ಲಾಡಿದುವು, ದೊಡ್ಡದಾಗಿ ಬುಸಗುಟ್ಟುತ್ತ ರೈಲು ಕದಲಿತು. ರಾಜಂನ ಮುಖ, ಅವನು ಹೇಳಲು ತೆಗೆದಿದ್ದ ಬಾಯಿ ಕೊಂಚಕೊಂಚವಾಗಿ ದೂರ ಸರಿದುವು. ಸ್ವಾಮಿನಾಥನ್ ಒಳಗಿನ ಒತ್ತಡ ತಡೆಯಲಾಗದೆ, "ಮಣಿ, ಮಣಿ, ಈ ಪುಸ್ತಕ ಅವನಿಗೆ ಕೊಡಬೇಕಲ್ಲವೋ" ಎಂದು ಅಂಗಲಾಚಿ, ಪುಸ್ತಕವನ್ನು ಮಣಿಯ ಕೈಲಿಟ್ಟ. ಮಣಿ ಪ್ಲಾಟ್‌ಫಾರಂ ಉದ್ದ ರೈಲು ಮಗ್ಗುಲಲ್ಲಿ ಓಡಿ ಬಂಡಿಯ ಸದ್ದಿನ ಮೇಲೆ ಕೇಳುವಂತೆ ದನಿಯೇರಿಸಿ, "ಗುಡ್ ಬೈ ರಾಜಂ, ಸ್ವಾಮಿ ನಿನಗೆ ಈ ಪುಸ್ತಕ ಕೊಡು ಎಂದಿದ್ದಾನೆ" ಎಂದು ಕೂಗಿದ. ರಾಜಂ ಕಿಟಕಿಯಿಂದ ಕೈ ಚಾಚಿ ಅದನ್ನು ತೆಗೆದುಕೊಂಡು ಒಳ್ಳೇದು ಎಂದು ಹೇಳುವಂತೆ ಕೈ ಅಲ್ಲಾಡಿಸಿದ. ಸ್ವಾಮಿನಾಥನ್ ಕೂಡ ತುಂಬಾ ಹೊತ್ತು ಕೈ ಅಲ್ಲಾಡಿಸುತ್ತಿದ್ದ.

ಸ್ವಾಮಿನಾಥನ್ ಮಣಿ ಇಬ್ಬರೂ ಅವರ ಕಾಲಿಗೆ ಗೋಂದು ಅಂಟಿಸಿತ್ತೋ ಎನ್ನುವಂತೆ ಪ್ಲಾಟ್‌ಫಾರಂ ಮೇಲೆ ಬಹಳ ಹೊತ್ತು ನಿಂತು ರೈಲನ್ನೇ ನೋಡುತ್ತಿದ್ದರು. ಕ್ಷಣಕ್ಷಣಕ್ಕೂ ಬಂಡಿಯ ಗಾತ್ರ ಸಣ್ಣದಾಗುತ್ತ ಹೋಯಿತು. ಬೆನ್ನ ಹಿಂದಿನ ಸಣ್ಣ ಕೆಂಪುದೀಪ ಬಹಳ ಹೊತ್ತು ಕಾಣಿಸುತ್ತಿತ್ತು. ಕೊನೆಗೆ ಬಂಡಿ ಒಂದು ತಿರುವಿನಲ್ಲಿ ತಿರುಗಿಕೊಂಡದ್ದರಿಂದ ಆ ಕೆಂಪುದೀಪ ಮಾಯವಾಯಿತು. ಬಂಡಿಯ ಭೋರ್ಗರೆತ, ಗಡಗಡ, ಠಣಠಣ, ಹೊಗೆಉಗುಳಾಟ ಇವೆಲ್ಲದರ ಬದಲು ಎಲ್ಲೋ ಯಾರೋ ನಿಟ್ಟುಸಿರು ಬಿಟ್ಟು ಮೆಲ್ಲಗೆ ಅಳುತ್ತಿದ್ದರೇನೂ ಎಂಬಂತೆ ಕೇಳಿಸತೊಡಗಿತು.

ಸ್ವಾಮಿನಾಥನ್ ಅಂದ : "ಮಣಿ, ಅವನು ಪುಸ್ತಕ ಇಸಕೊಂಡದ್ದು ತುಂಬಾ ಸಂತೋಷ ಕಾಣೋ. ಮಣಿ, ನನಗೆ ಅವನು ವೇವ್ ಮಾಡಿದ. ಏನೋ ಹೇಳಬೇಕು ಅಂತ ಬಾಯಿ ತೆರೆದ, ಅಷ್ಟರಲ್ಲಿ ರೈಲು ಹೊರಟು ಬಿಟ್ಟಿತು. ಅವನು ವೇವ್ ಮಾಡಿದ್ದು ನನಗೇನೇ. ಅಲ್ಲ ಅನ್ನಬೇಡ."

ಮಣಿ "ಹೌದು" ಅಂದ.

ಇದ್ದಕ್ಕಿದ್ದಂತೆ ಸ್ವಾಮಿನಾಥನ್ ಕಟ್ಟೆಯೊಡೆದು ಗಳಗಳ ಅಳತೊಡಗಿದ.

ಮಣಿ ಅವನನ್ನು ಸಂತಯಿಸಿ "ಎಳೆಮಗು ತರಹ ಆಡಬೇಡ" ಅಂದ.

"ನನ್ನ ಜ್ಞಾಪಕ ಯಾವಾಗಲಾದರೂ ಮಾಡಿಕೊಳ್ಳುತ್ತಾನೇನೋ?" ಅಂದ ಸ್ವಾಮಿ, ಅಳುತ್ತ ಅಳುತ್ತ.

"ತಪ್ಪದೆ" ಎಂದ ಮಣಿ. ಕೊಂಚ ತಡೆದು ಆಮೇಲೆ, "ಯೋಚನೆ ಮಾಡಬೇಡ, ನಿನ್ನ ಕೈಲಿ ಮಾತಾಡುವುದಕ್ಕೆ ಆಗದಿದ್ದರೂ ನಿನಗೆ ಬರೀತಾನೆ" ಅಂದ.

"ನಿನಗೆ ಹೇಗೆ ಗೊತ್ತು?"

"ಅವನೇ ಹೇಳಿದ."

"ಅವನಿಗೆ ನನ್ನ ಅಡ್ರೆಸೇ ಗೊತ್ತಿಲ್ಲ, ಹೇಗೆ ಬರೀತಾನೆ?"

"ನನ್ನ ಕೇಳಿದ, ನಾನು ಹೇಳಿದೆ" ಅಂದ ಮಣಿ.

"ಇಲ್ಲ ಇಲ್ಲ, ಎಲ್ಲಾ ಶುದ್ಧಸುಳ್ಳು. ನಮ್ಮ ಮನೆ ಅಡ್ರೆಸ ಏನು, ಹೇಳು ನೋಡೋಣ."

"ಅ.......... ಅ........... ಬಿಡು, ನಾನು ರಾಜಂಗೆ ಕೊಟ್ಟಿದ್ದೇನೆ, ಅದು ಮುಖ್ಯ."

ಸ್ವಾಮಿನಾಥನ್ ತಲೆಯೆತ್ತಿ ಮಣಿಯ ಮುಖವನ್ನೇ ಎವೆಯಿಕ್ಕದೆ ನೋಡಿದ, ಅವನು ನಿಜ ಹೇಳುತ್ತಿದ್ದಾನೋ ಸುಳ್ಳು ಹೇಳುತ್ತಿದ್ದಾನೋ ತಿಳಿದುಕೊಳ್ಳಲು. ಆದರೆ ಆ ಒಂದು ಗಳಿಗೆ ಮಣಿಯ ಮುಖ ಗುಟ್ಟು ಬಿಟ್ಟುಕೊಡಲಿಲ್ಲ.

Laser Typeset at Fortune Publishers, New Delhi
and Printed at Kapoor Art Press, New Delhi